ಆಗಸ್ಟ್ ೧–೧೯೫೪



ರಕ್ಷಾಪತ್ರ

**ಎಸ್. ಆರ್. ಸ್ವಾಮಿ**

ಪಡಿಯಚ್ಚು

**ಷಣ್ಮುಗಂ ಪ್ರೋಸೆಸ್ ಸ್ಟುಡಿಯೊ**

ಬೆಂಗಳೂರು

[illegible] ಮುದ್ರಣ

**ಗೋಲ್ಡನ್ ಪ್ರಿಂಟಿಂಗ್ ವರ್ಕ್ಸ್**

ಬೆಂಗಳೂರು

ಮುದ್ರಣ

**ಶಾರದಾ ಪ್ರಕಟನಾಲಯ**

ಅರಳೇಪೇಟೆ :: ಬೆಂಗಳೂರು

# ಮೊದಲ ಮಾತು

ಾಮಾಜಿಕ ಕಾದಂಬರಿ ಪ್ರಪಂಚದಲ್ಲಿ ನನ್ನ ಮೊದಲ ಹೆಜ್ಜೆಯಾದ ಈ
ವಾಚಕರ ಮುಂದಿಡುತ್ತಿದ್ದೇನೆ. ಮುಂಬಯಿ ನಗರದ ಹಿನ್ನೆಲೆ
ಥೆ ಹೆಣೆಯಲ್ಪಟ್ಟಿದೆ. ಹೈಸ್ಕೂಲು, ಕಾಲೇಜು ಶಿಕ್ಷಣ ಮುಗಿಸಿದ
ಂದುಸ್ಥಾನದ ತರುಣರಿಗೆಲ್ಲ ಮುಂಬಯಿಯು ಕೆಲಸ ದೊರೆಯುವ
ಮಾರ್ಕೆಟ್ಟು ಎನ್ನುವ ಸಾಮಾನ್ಯ ನಂಬಿಗೆ ಎಷ್ಟರಮಟ್ಟಿಗೆ ನಿಜ
ದು ಮುಂಬಯಿಗೆ ಬಂದು ಕೆಲಸ ಹುಡುಕಿದವರಿಗೇ ಗೊತ್ತು. ಆದರೆ
ಸುದೈವಿಯಾಗಿದ್ದನು. ಅವನಿಗೆ ಕೆಲಸ ದೊರಕಿಸಿ ಕೊಟ್ಟು ದೈವ
ಬೇಡವೆಂದರೂ ರತ್ನದಂಥ ಜೀವನ ಸಂಗಾತಿಯನ್ನೂ ದೊರಕಿಸಿ
ತು !

ಮೇಶನ ಈ 'ಬೇಡವೆನ್ನುವ ಸ್ವಭಾವ' ಕೆಲವರಿಗೆ ಸ್ವಲ್ಪ ವಿಚಿತ್ರವಾಗಿ
ಹುದು. ಅದಕ್ಕಾಗಿ ಎರಡು ಮಾತು ಹೇಳಬೇಕಾಗಿದೆ.

ಸ್ವಾರ್ಥತ್ಯಾಗ (self-sacrifice) ಪ್ರೇಮದ ಒಂದು ಮುಖ್ಯಾಂಗ ನ್ನುತ್ತಾರೆ. ಆದರೆ ಆ ಸ್ವಾರ್ಥತ್ಯಾಗದಲ್ಲಿಯೇ ಸ್ವಾಭಿಮಾನವನ್ನು ತಣಿಸುವ 'ತ್ಯಾಗಸುಖ' ಇದೆ ಎನ್ನುವದನ್ನು ಎಲ್ಲರೂ ಒಪ್ಪುವುದಿಲ್ಲ. ಸುಂದರ, ಸಿರಿವಂತ ಹುಡುಗಿ ಕಿರಣ, ತನ್ನನ್ನು ಪ್ರೀತಿಸುತ್ತಿದ್ದುದು ತಿಳಿದರೂ ಆಕೆಯನ್ನು ಪಡೆಯುವದಿರಲಿ, ಆಕೆಯ ವಿಷಯದ ತನ್ನ ಮನೋಗತವನ್ನೂ ಪ್ರಕಟಿಸದಿದ್ದ ರಮೇಶನಿಗೆ ತಾನು ಯಾವ ತ್ಯಾಗಮಾಡಿದಂತೆಯೂ ಅನಿಸುವದಿಲ್ಲ. ಲಗ್ನ ಜೀವನ ಸುಖಮಯವಾಗಬೇಕಾದರೆ ಹೆಣ್ಣು - ಗಂಡಿನ ಜೀವನ ಸಂಸ್ಕೃತಿ ಒಂದಾಗಬೇಕು ಎನ್ನುವದು ರಮೇಶನ ವಿಚಾರ ಸರಣಿ ಅವನಿಗೆ ಕಲಿಸಿದ ಪಾಠ ವಾಗಿತ್ತು. ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದೇವೆ ಎಂದ ಮಾತ್ರಕ್ಕೆ ಭಿನ್ನ ಸಂಸ್ಕೃತಿಯ ಇಬ್ಬರು ವ್ಯಕ್ತಿಗಳು ಗಂಡ ಹೆಂಡಿರಾಗಿ ಜೀವನ ಸಾಗಿಸಬಹುದು ಎನ್ನುವ ತಿಳುವಳಿಕೆಯಿಂದಾಗಿ ಪ್ರೇಮ - ಲಗ್ನಗಳು (Love-marriages) ಇಂದು ಇಷ್ಟು ನಿರಾಶಾಜನಕವಾಗಿವೆ. ಪ್ರೇಮವು ಪರಸ್ಪರ ಸಹ - ವಾಸದ ಒಂದು by product ಅಷ್ಟೆ. ಒಂದಾಗಬೇಕಾದುದು ಸಂಸ್ಕೃತಿ. ಜೀವನಮಟ್ಟ

(mode of living) ಒಂದೇ ಆದ ಮಾತ್ರಕ್ಕೂ ಸಂಸ್ಕೃತಿ ಒಂದೇ ಆಗಲೇಬೇಕು ಎನ್ನುವದೂ ತಪ್ಪು ಎನ್ನುವದಕ್ಕೆ ಉದಾಹರಣೆ ಶೇಖರಲಾಲಾನ ಭಗ್ನ ಮನೋರಥವಾಗಿದೆ. ಅಲ್ಲಿಯೂ ಅವನ ವಿಚಾರದ ರೀತಿಯನ್ನರಿತುಕೊಂಡು ಅವನೊಡನೆ ಲಗ್ನವಾಗಲೆಳಸಿ ಕೃತಕೃತ್ಯಳಾಗುವ ಸ್ನೇಹಲತಾ ಪ್ರೇಮದ ಇನ್ನೊಂದು ಮಗ್ಗುಲಾಗಿ ಚಿತ್ರಿತಳಾಗಿದ್ದಾಳೆ.

ವಾಚಕರ ಸಹಾಯಕ್ಕಾಗಿ ಇಷ್ಟು ಸ್ಪಷ್ಟೀಕರಣ ಹೇಳಿಬಿಟ್ಟು ಈ 'ಮಾತ'ನ್ನು ಮುಗಿಸುತ್ತೇನೆ. ಸಾಹಿತ್ಯರಂಗದಲ್ಲಿ ನವಆಗಂತುಕನೊಬ್ಬನ ಕೃತಿಯೆಂದು ಮೂಗು ಮುರಿಯದೆ ಇದನ್ನು ಮಾಲೆಯಲ್ಲಿ ಸ್ವಾಗತಿಸಿ ಪ್ರಕಟಿಸಲೊಪ್ಪಿಕೊಂಡ ವಸಂತ ಪ್ರಕಾಶನದವರಿಗೆ ನಾನು ತುಂಬಾ ಋಣಿಯಾಗಿದ್ದೇನೆ. ಹಾಗೆಯೇ ಈ ಕೃತಿಯು ವಸಂತ ಪ್ರಕಾಶನದಲ್ಲಿ ಬೆಳಕಿಗೆ ಬರುವಂತೆ ಎಲ್ಲ ರೀತಿಯಿಂದಲೂ ಸಹಾಯ ಮಾಡಿದ ಶ್ರೀಯುತ ಜಿ. ಬಿ. ರಾಜ್‌ರವರಿಗೂ ನನ್ನ ಕೃತಜ್ಞತೆ ಸಲ್ಲಬೇಕು.

ಮುಂಬಯಿ,
೨೪-೭-೧೯೫೪.

"ಹಾಸ್ಯಗಾರ"

" ನನ್ನ ಸಾಧನೆಯಲ್ಲಿ
ಯಾವಾಗಲೂ ಅಭಿಮಾನ ತಳೆದು
ನನ್ನನ್ನು ಹುರಿದುಂಬಿಸುತ್ತಿರುವ ನನ್ನ
**ತಂದೆಯವರ**
ಚರಣಗಳಲ್ಲಿ "

# ೧

" ಮೋಹಾ, ಈವತ್ತು ಏನು ತಂದೀಸಿ ಹೇಳು ?"

" ಏನೂ ಇಲ್ಲಿ ಹೋಗು. ಸುಳ್ಳು ಕೈಮಾಡೋದು. ಪಾಪಾ ಕೊಡು ಅನ್ನೋದು. ನಾ ಕೊಡಲ್ಲ ಹೋಗು "—

ಮೂರು ವರ್ಷದ ಮುದ್ದು ಮೋಹಿಸಿ ನಿರ್ಲಕ್ಷ್ಯವಾಗಿ, ಆದರೂ ಕೈ ಬಿಚ್ಚಿದ್ದರೆ ನೋಡಬಹುದಿತ್ತಲ್ಲ ಎನ್ನುವ ಆಶಾದೃಷ್ಟಿಯಿಂದ ರಮೇಶನ ಕೈಮುಷ್ಟಿಯ ಕಡೆಗೆ ನೋಡುತ್ತ ನುಡಿದಳು.

" ಕೊಡದಿದ್ರಿಲ್ಲ. ಹಾಗಾದರೆ ಚಾಕಲೇಟೆಲ್ಲ ನಿನಗೇ ಆಯಿತು ವಸಂತ. ಮತ್ತೆ ಈ ಕಿವಿಯೋಲೆಯನ್ನೂ ಆಚೀಮನೆ ರೇಖಾಗೆ ಕೊಟ್ಟುಬಿಡೋಣ."

ಎನ್ನುತ್ತ ರಮೇಶ ಕೈಯಲ್ಲಿಯ ಕಾಗದದ ಗಂಟನ್ನು ಕೆಳಗೊಗೆದು ಕಿಸೆಯಿಂದ ಇಮಿಟೇಷನ್ ಕಿವಿಯೋಲೆಯನ್ನು ಎತ್ತಿ ತೋರಿಸಿ, ಇನ್ನೊಂದು ಕೈಯಿಂದ ಚಾಕಲೇಟಿನ ಪುಡಿಕೆ ಬಿಚ್ಚತೊಡಗಿದನು. ಮೋಹಿನಿ ಕ್ಷಣಕಾಲ ಏನು ಮಾಡಬೇಕೆಂದು ಬಗೆಹರಿಯದೆ ನಿಂತಳು. ಒಂದೆಡೆ ಆಗಲೇ ಬೇಡವೆಂದಿದ್ದರ ಅಭಿಮಾನ, ಇನ್ನೊಂದೆಡೆ ದೀಪದ ಬೆಳಕಿನಲ್ಲಿ ಝುಗಝುಗಿಸುತ್ತಿದ್ದ ಕಿವಿಯೋಲೆ, ಮತ್ತು ಬಣ್ಣಬಣ್ಣವಾಗಿ ಕಾಗದದಲ್ಲಿ ಸುತ್ತಿಕೊಂಡ ಚಾಕಲೇಟುಗಳು. ಒಮ್ಮೆ ತಾಯಿಯ ಮುಖವನ್ನೂ ರಮೇಶನ ಮುಖವನ್ನೂ ನೋಡಿದಳು. ಇಬ್ಬರೂ ನಗುತ್ತಿದ್ದರೂ ಅವರಲ್ಲಿ ಬಹಳಷ್ಟು ಚೇಷ್ಟೆ ಕಂಡು

ಬರದ್ದರಿಂದ ಆಕೆಗೆ ಎಷ್ಟೋ ಧೈರ್ಯ ಬಂದಂತಾಯಿತು. ಸಾವಕಾಶವಾಗಿ ಹತ್ತಿರ ಬಂದು ರಮೇಶನ ಕಾಲನ್ನಪ್ಪುತ್ತ ಕೇಳಿದಳು.

"ಮಾವ, ನಂಗಲ್ಲವೆ ?"

"ಊಹ್ಞು, ಹಾಗೇ ತಂದುಬಿಟ್ಟೆ, ನಾನೇ ಹಾಕಿಕೊಳ್ಳೋಣಾಂತ."

"ಇಶ್ಶ್ಯ, ನೋಡಽ, ಆಯಿ, ವಾಲೀನ ತ್ನಾ ಹಾಕಿಕೊಳ್ತಾನಂತ. ಅದೇನಿಲ್ಲ ನಂಗೆ ಕೊಟ್ಟುಬಿಡು"

ಎನ್ನುತ್ತ ಹತ್ತಿರದ ಸ್ಟೂಲು ಹತ್ತಿ ರಮೇಶನ ಕೊರಳನ್ನು ಸುತ್ತಿಕೊಂಡು ಅವನು ಕೇಳುವ ಮೊದಲೇ 'ಪಾಪಾ'ನೂ ಕೊಟ್ಟದ್ದಾಯಿತು. ಇಂದ್ರಾಣಿ, ಮೋಹಿನಿಯ ತಾಯಿ, ಪುಟ್ಟ ವಸಂತನನ್ನೆತ್ತಿಕೊಂಡು ಬಂದು ರಮೇಶನ ಕೈಯಲ್ಲಿಯ ವಾಲೆಯನ್ನು ನೋಡತೊಡಗಿದಳು. ಚಾಕಲೇಟ್ ಪುಡಿಕೆ ಆಗಲೇ ಯೋಗ್ಯರಾದವರ ಹಸ್ತಗತವಾಗಿತ್ತು.

"ಇದನ್ನೆಲ್ಲ ಯಾಕೆ ತಂದೆ ರಮೇಶ. ಸುಮ್ಮನೆ ದುಡ್ಡು ಹಾಳು. ಖೋಡಿ ಎರಡು ದಿನದಲ್ಲಿ ಮುರಿದುಬಿಡುತ್ತಾಳೆ."

"ಬ್ಹಾಳ'ದಿನದಿಂದ ಹೇಳ್ತಾ ಇದ್ಲು ಅಂತ ತಂದುಬಿಟ್ಟೆ. ಎಷ್ಟು ದಿನ ಅಂತ ಠಕ್ಕಿಸುತ್ತಿರೋದು ? ಹಾಳಾದರೆ ಹಾಳಾಯಿತು. ಹುಡುಗರು ಹಾಳು ಮಾಡದೆ ನಾವು ಮಾಡೋದೆ ?"

"ಮತ್ತೆ ಈ ಗಂಟು ಏನು ? ಮೊನ್ನೆ ಮೊನ್ನೆ ಅರಿವೆ ಮಾಡಿಸಿದ್ದೆಯಲ್ಲ ?"

"ನಂಗಲ್ಲ, ನಿಂಗಂತ ಒಂದು ಪತ್ಲಾ ಕೊಂಡು ತಂದಿದ್ದೇನೆ. ವಸಂತಂಗೊಂದು ಸಿಲ್ಕಿನ ಅಂಗಿ."

ಎನ್ನುತ್ತ ರಮೇಶ ಗಂಟು ಬಿಚ್ಚತೊಡಗಿದನು. ಇಂದ್ರಾಣಿಗೆ ಎಲ್ಲ ವಿಚಿತ್ರ ಅನ್ನಿಸಿತು. ತನಗೆ ಬರುತ್ತಿದ್ದ ೧೫೦ ರೂಪಾಯಿಯಲ್ಲಿ ೫೦ ರೂಪಾಯಿ ತನ್ನ ಊಟದ ಖರ್ಚೆಂದು ತನುಗೆ ಕೊಟ್ಟು, ಐವತ್ತನ್ನು ಅಪ್ಪನಿಗೆ ಕಳಿಸಿ ಉಳಿದ ಐವತ್ತರಲ್ಲಿ ತಿಂಗಳಿನ ತನ್ನ ಎಲ್ಲ ಖರ್ಚನ್ನೂ ನೋಡಿಕೊಳ್ಳುತ್ತಿದ್ದ ತನ್ನ ತಮ್ಮನಿಗೆ ತಿಂಗಳಿನ ೧೮ನೆಯ ತಾರೀಖಿಗೆ ಈ ಯೋಗ ಹೇಗೆ ಲಭಿಸಿತು ಎಂದು ಲೆಕ್ಕಹಾಕತೊಡಗಿದಳು. ಬಹುಶಃ ತನ್ನ ಭಾಗದ ಐವತ್ತು ರೂಪಾಯಿ ಯಲ್ಲಿಯೇ ತಿಂಗಳು ಐದೋ ಹತ್ತೋ ಉಳಿಸಿಕೊಂಡು ತನಗಾಗಿ ಅದನ್ನು ಖರ್ಚುಮಾಡಿರಬೇಕು ಎಂದುಕೊಂಡಳು. ಆಕೆಗೆ ತಮ್ಮನ ವಿಷಯಕ್ಕೆ

ಎಲ್ಲಿಲ್ಲದ ಅಭಿಮಾನವೆನಿಸಿತು. ತವರುಮನೆಯಿಂದ ಆಕೆ ಎಂದೂ ಏನನ್ನೂ ಅಪೇಕ್ಷಿಸಿರಲಿಲ್ಲ. ಹಾಗೆಂದು ಬೇಸರಪಟ್ಟಿರಲೂ ಇಲ್ಲ. ಆದರೆ ತಮ್ಮನ ಈ ಅನಪೇಕ್ಷಿತ ಕೊಡುಗೆ ಆಕೆಗೆ ನಿಧಿ ದೊರಕಿದಷ್ಟು ಸಂತೋಷವನ್ನುಂಟು ಮಾಡಿತ್ತು. ಆದರೂ ತವರುಮನೆಯ ನೆನಪು ಬಂದು ಹೇಳಿದಳು

"ಹೀಗೆಲ್ಲ ಮಾಡೋದಕ್ಕಿಂತ ಅಪ್ಪಂಗೇ ಆ ದುಡ್ಡು ಕಳಿಸಿ ಬಿಡ ಬೇಕಾಗಿತ್ತು. ಮುಂದಿನ ತಿಂಗಳು ಸೀತಕ್ಕ ಬಾಣಂತಿತನಕ್ಕೆ ಬರುತ್ತಾಳೆ ಎಂದು ಬರೆದಿದ್ದ."

"ನನಗೆ ಗೊತ್ತಿಲ್ಲವೆ? ಮುಂದಿನ ತಿಂಗಳು ಒಂದನೇ ತಾರೀಖಿಗೇ ಅವನಿಗೆ ೧೦೦ ರೂಪಾಯಿ ಕಳಿಸುತ್ತೇನೆ. ಈಗಲೇ ಏನೂ ಬಿದ್ದು ಹೋಗಲಿಲ್ಲಲ್ಲ. ಮೊನ್ನೆ ಭಾವನೊಡನೆ ಸೀರೆ ಅಂತ ಕಣ್ಣೀರು ಹರಿಸೋವಾಗ ನಂಗಿನ್ನೂ ನಿದ್ದೆ ಬಂದಿರಲಿಲ್ಲ. ಎಲ್ಲಾ ಕೇಳುತ್ತಿದ್ದೆ. ಈವತ್ತು ದಾದರದಲ್ಲಿ ಇಳಿದೋನು ಹಾಗೇ ತಂದುಬಿಟ್ಟೆ. ನನಗೂ ಅರಿವೆ ಕೊಂಡು ಹೊಲಿಸಲು ಹಾಕಿದ್ದೇನೆ."

"ನಮ್ಮದೇನಪ್ಪ, ಯಾವಾಗಲೂ ಇದ್ದದ್ದೇ. ಅಷ್ಟು ಕಣ್ಣೀರು ಹರಿಸಿದರಾದರೂ ಬಂದರೆ ಬರಲಿ ಅಂತ ಆಶೆ. ನನಗೇನು ಹೊಸ ಸೀರೆ ಉಟ್ಟು ಕೊಂಡು ಜಾತ್ರೆಗೆ ಹೋಗಲಿಕ್ಕಿದೆಯೆ? ನೀನು ಅಂಥದಕ್ಕೆಲ್ಲ ಕಿವಿಕೊಡ ಬಾರದು."

"ಈಗೇನಾಯಿತು? ನಿನಗಂತ ಒಂದು ಸೀರೆ ತರಬಾರದೆ? ಅರೇರೇ, ಏನಾಯಿತೇ ವಸಂತಂಗೆ?"

ವಸಂತ ಖೊಕ್ಕ ಅನ್ನತೊಡಗಿದ್ದನು. ಇಂದ್ರಾಣಿ ಅವನ ಬಾಯಲ್ಲಿ ಕೈಹಾಕಿ ಗಂಟಲವರೆಗೂ ಹೋಗಿ ಆಚೆ ಹೋಗಲಾರದೆ, ಈಚೆ ಬರಲು ಮನಸ್ಸಿಲ್ಲದೆ ಪೇಚಾಡುತ್ತಿದ್ದ ಇಡೀ ಚಾಕಲೇಟನ್ನು ಹೊರತೆಗೆದಳು. ಆದದ್ದೇ ನೆಂದು ವಿಚಾರ ನಡೆಸಿದಾಗ ಮೋಹಿನಿ ಸ್ಪಷ್ಟಪಡಿಸಿದಳು.

"ತನ್ನ ಪುಟ್ಟಕೈನ ಹೀಂಗ ಹೀಂಗ ಮಾಡಿ ತನಗೂ ಚಾಕಲೇಟು ಬೇಕಂದ ಆಯಿ. ಪಾಪ ಅಂತ ಒಂದ ಕೊಟ್ಟಿದ್ದೆ – ಅದನ್ನ ನನ್ನಾಂಗೆ ಅಗಿದು ತಿನ್ನೆ ಹಾಗೇನೇ ನುಂಗಲು ಹೋಗಿದ್ದ ಕಳ್ಳ. ಇನ್ನೂ ಚಾಕಲೇಟ್ ಹ್ಯಾಂಗ ತಿನ್ನ ಬೇಕು ಅನ್ನೋದು ಗೊತ್ತಿಲ್ಲ, ಮಳ್ಳ."

"ಸಾಕೇ ಬ್ಯಾಳ ಶಹಾಣೆ ಇದ್ದೀದಿ. ಅವಂಗೆಲ್ಲ ಚಾಕಲೇಟು ಕೊಡ್ತಾರೇನು ?"

"ಚಾಕಲೇಟು ಸಣ್ಣ ಹುಡುಗರು ತಿನ್ನೋವಲ್ಲೇನು ಮತ್ತ. ನನ್ನ ತಮ್ಮ ಅಂತಕೊಟ್ಟೆ. ಇನ್ನು ಎರಡೇ ಅವ. ಈಗೊಂದು ನಾಳಿಗೊಂದು"

ಎನ್ನುತ್ತ ಮೋಹಿನಿ ಒಂದೊಂದು ಕೈಯಲ್ಲಿ ಒಂದೊಂದು ಚಾಕಲೇಟು ಇಟ್ಟುಕೊಂಡು ಯಾವದು ದೊಡ್ಡದು ಯಾವದು ನಾಳಿಗಾದೀತು ಎಂದು ನಿಶ್ಚಯಿಸತೊಡಗಿದಳು.

"ವಸಂತಂಗೆ ಬೇಡ ಅಲ್ಲೇನಃ ಆಯಿ, ಚಾಕಲೇಟು ?"

ಎಂದು ಎರಡರಮೇಲೂ ತನ್ನ ಹಕ್ಕನ್ನೇ ಸಾಧಿಸುವ ಅನ್ನುವ ವಿಚಾರ ದಿಂದ ಕೇಳಿಕೊಂಡಳು. ಅಷ್ಟರಲ್ಲಿ ಮೋಹಿನಿಯ ತಂದೆ ವೆಂಕಟರಾಮು ಒಳಗೆ ಬಂದು ಕೇಳಿದನು,

"ಏನವ್ವಾ ವಸಂತಂಗೆ ಬೇಡ ?"

"ಚಾಕಲೇಟು, ಅಣ್ಣಾ. ವಸಂತಂಗೆ ಅಗಿದು ತಿನ್ಲಿಕ್ಕ ಬರೋದಿಲ್ಲ. ಮಾವ ತಂದಿದ್ದ. ಅಣ್ಣಾ, ಮಾವ ನಂಗಂತ ವಾಲಿ ತಂದಿದಾನೆ. ಆಯಿಗೆ ಸೀರೇನೂ ತಂದಿದಾನೆ. ವಸಂತಂಗೆ ಅಂಗಿನೂ....ನನ್ನ ಮಾವ."

ವೆಂಕಟರಾಮು ಒಳಗೆ ಬಂದು ಎಲ್ಲವನ್ನೂ ನೋಡಿದನು. ಮುಂಬಯಿಯ ಪೋರ್ಟ್ ಟ್ರಸ್ಟ್ ಆಫೀಸಿನ ತನ್ನ ದಿನದ ಕರಡುಗೀಚುವ ಕೆಲಸಮುಗಿಸಿ ಲೋಕಲ್ ಟ್ರೇನು ಹತ್ತಿ ಆತ ಇದೇ ಈಗ ಮನೆಯನ್ನು ಪ್ರವೇಶಿಸುತ್ತಿದ್ದನು. ಎತ್ತರ, ಬಡಕಾದ ಮನುಷ್ಯ. ವಯಸ್ಸು ಮೂವತ್ತೆರಡರಮೇಲಿದ್ದರೂ ಆಗಲೇ ನಲವತ್ತೈದು ದಾಟಿದವರಂತೆ ಕಾಣುತ್ತಿದ್ದನು. ಆತ ರಮೇಶನ ಅಕ್ಕ ಇಂದ್ರಾಣಿಯನ್ನು ಲಗ್ನವಾಗಿ ಮುಂಬಯಿಗೆ ಬಂದು ಕುರ್ಲಾದಲ್ಲಿಯ ಈ ಖೋಲಿಯನ್ನು ಹಿಡಿದು ಇಂದಿಗೆ ಎಂಟು ವರ್ಷಗಳಾಗಿದ್ದವು. ರವಿವಾರ, ರಜಾದಿನಗಳನ್ನು ಬಿಟ್ಟರೆ ಬೆಳಿಗ್ಗೆ ಹೋಗಿ ಸಂಜೆ ೭||ಗೆ ತಿರುಗಿ ಮನೆಕಾಣುವ ಆ ಯಂತ್ರ ಜೀವನದಲ್ಲಿಯೂ ಚಿನ್ನದಂಥ ಎರಡು ಮಕ್ಕಳನ್ನು ಪಡೆದು ಗಂಡ ಹೆಂಡತಿ ಸಮಾಧಾನದಿಂದ ಇದ್ದರು. ರಮೇಶ ಬಿ. ಎ. ಮುಗಿಸಿ ಅವರೊಡನೆ ಇರಹತ್ತಿ ಎರಡು ವರ್ಷಗಳ ಮೇಲಾಗಿತ್ತು. ಲಾ ಪರೀಕ್ಷೆ ಪಾಸಾಗುವವರೆಗೆ ಮಲಾಡದ ಶಾಲೆಯೊಂದರಲ್ಲಿ ಬೆಳಗಿನ ಪೂರ್ತಿಗೆ ಮಾಸ್ತರನೆಂದು ಕೆಲಸಮಾಡಿ

ಕೊಂಡಿದ್ದನು. ಮೊನ್ನೆ ಜೂನಕ್ಕೆ ಲಾ ಪರೀಕ್ಷೆಯ ಪರಿಣಾಮ ತಿಳಿದಮೇಲೆ, ಎರಡು ತಿಂಗಳು ಮುಂಬಯಿಯನ್ನೆಲ್ಲ ಸುತ್ತಿ ಕೆಲಸಕ್ಕಾಗಿ ಪ್ರಯತ್ನಪಟ್ಟು, ಕಡೆಗೆ ಒಬ್ಬ ಬ್ಯಾರಿಸ್ಟರ್ ಹತ್ತರ ಅಸಿಸ್ಟಂಟ್ ಆಗಿ ಕೆಲಸ ದೊರಕಿಸಿದ್ದನು. ತನ್ನ ಇಚ್ಛೆಯ ವಿರುದ್ಧವಾಗಿ ಎಲ್ಲಿಯಾದರೂ ಪ್ರಾಕ್ಟೀಸು ಹೂಡುವದೊಂದೇ ಇನ್ನುಳಿದ ಮಾರ್ಗವಾಗಿತ್ತು. ಅದಕ್ಕೆ ತನಗೆ ಬರುತ್ತಿದ್ದ ೧೫೦ ರೂಪಾಯಿ ತೀರ ಅಪಮಾನಕಾರಕವಾಗಿದ್ದರೂ ತನ್ನ ಪ್ರಾಕ್ಟೀಸಿಗೆ ಸಹಾಯವಾಗುವದೆಂದು ಅಷ್ಟರಲ್ಲಿಯೇ ತೃಪ್ತಿಗೊಂಡಿದ್ದನು.

ವೆಂಕಟರಾಮು ಸೀರೆ, ಸಿಲ್ಕಿನ ಅಂಗಿ ನೋಡುತ್ತ ಕೇಳಿದನು :

“ ಏನಪಾ, ಆರ್. ಎಮ್. ಡಿ. ಸಿ. ಹತ್ತಿತೋ. ಇಲ್ಲ ನಿನ್ನ ಎಡ್ವೋಕೇಟರ ಆಫೀಸಿನಲ್ಲಿ ಯಾರಾದ್ರೂ ಪರ್ಸ್ ಬಿಟ್ಟುಹೋದರೋ ?”

“ ಎರಡೂ ಅಲ್ಲ, ಬ್ಯಾನರ್ಜಿಯವರಿಗೆ ಇನ್ನೆಂಟು ದಿನಕ್ಕೆ ಕೆಲಸ ಬಿಡುತ್ತೇನೆ ಎಂದೆ – ತುಂಬ ಚನ್ನಾಯಿತು ನನ್ನೊಬ್ಬ ಮಾವನ ಅಣ್ಣನ ಅಬಚಿಯ ತಂಗಿಯ ಹುಡುಗ ಬರುವವನಿದ್ದಾನೆ ನಿನ್ನ ಸ್ಥಳಕ್ಕೆ ; ಥ್ಯಾಂಕ್ಸ್ ; ಎಂದುಬಿಟ್ಟು ಸಂತೋಷದಿಂದ ಒಂದು ತಿಂಗಳ ಪಗಾರವನ್ನು ಕೊಟ್ಟುಬಿಟ್ಟರು.”

ರಮೇಶ ನಗುತ್ತ ನುಡಿದನು.

“ ಏನಾಯಿತೋ ರಮಾ ?” ಅಕ್ಕ ಆತುರದಿಂದ ಕೇಳಿದಳು. ರಮೇಶ ತನ್ನ ಕೆಲಸ ಬದಲಾದ ಸಂಗತಿಯನ್ನು ತಿಳಿಸಿದನು.

# ೨

ಎಡ್ವೋಕೇಟ್ ಬ್ಯಾನರ್ಜಿಯವರೊಡನೆ ಮಾತು ಮುಗಿಸಿ ಇನ್ನು ಟ್ರಿಬ್ಯುನಲ್‌ಗೆ ಹೋಗದೆ ಗತಿಯಿಲ್ಲವೆಂದು ಯೋಚಿಸುತ್ತ ಚಿತ್ತಳೆ ಕಂಪನಿಯ ಶೇಖರಲಾಲಾ ಹೊರಗೆ ಬಂದು ಡೆಸ್ಕಿನ ಆಚೆಗೆ ಕುಳಿತಿದ್ದ ರಮೇಶನ ಹತ್ತಿರ ಕೇಳಿದರು—

"ನೋಟೀಸಿನ ಡ್ರಾಫ್ಟು ಸಿದ್ಧವಾಯಿತೆ ?"

"ಹುಂ, ಡ್ರಾಫ್ಟು ಬರೆದಿಟ್ಟಿದ್ದೇನೆ. ಆದರೆ ನಿಮಗೆ ಒಪ್ಪಿಗೆಯಾದರೆ ಒಂದು ಮಾತು ಹೇಳಬೇಕೆಂದಿದ್ದೆ."

"ಏನು ?"

"ನಿಮಗೆ ಇನ್ನೂ ಇದ್ದದರಲ್ಲಿಯೇ ತಂಟೆ ಬಗೆಹರಿಸಬೇಕು ಎನ್ನುವ ಇಚ್ಛೆ ಇದ್ದರೆ ನಿಮ್ಮ ಕೆಲಸಗಾರರಿಗೆ ನಾನು ಒಂದು ಮಾತು ಹೇಳಬೇಕು ಎಂದುಕೊಂಡಿದ್ದೆ. ನಿಮಗೂ ತೊಂದರೆ ತಪ್ಪುವದು. ಅವರಿಗೂ ಕೆಲಸ ಬಿಡದಿದ್ದ ಹಾಗೆ ಆಗಬಹುದು."

ಚಿತ್ತಳೆ ಕಂಪನಿಯ ಒಡೆಯರು ಕ್ಷಣಕಾಲ ರಮೇಶನನ್ನು ನೋಡುತ್ತ ನಿಂತರು. ಅವರ 'ಅಯರ್ನ್ ಅಂಡ್ ಸ್ಟೀಲ್ ಫ್ಯಾಕ್ಟರಿ'ಯ ೧೫-೨೦ ಕೆಲಸಗಾರರ ಒಂದು ಸಣ್ಣ ತಂಟೆಯೆದ್ದು ಅವರು ಬ್ಯಾನರ್ಜಿಯವರಲ್ಲಿ ಸಲಹೆ ಕೇಳಬಂದಿದ್ದರು. ವಾಸ್ತವಿಕವಾಗಿ ಅದರಲ್ಲಿ ಕಾರಖಾನೆಯ ಒಡೆಯರ ತಪ್ಪೇನೂ ಇರಲಿಲ್ಲ. ಇದೇ ಹಿಂದಿನ ವಾರ ಕೆಲಸಗಾರರೊಳಗೇ ಏನೋ ಒಂದು

ತಂಟೆಯೆದ್ದು ಅವರು ಕೆಲಸ ಮಾಡುತ್ತಿದ್ದ 'ಇಲೆಕ್ಟ್ರಿಕ್ ಮೊಬ್ಯಾಲ್ ಎಂಜಿನು' ಯೋಗ್ಯ ವೇಳೆಗೆ 'ಸ್ವಿಚ್ ಆಫ್' ಮಾಡದಿದ್ದುದಕ್ಕೆ ಕೆಳಗಿನ ದೊಡ್ಡ ಕಬ್ಬಿಣದ ಕಂಬಿಗೆ ಢಿಕ್ಕಿಹೊಡೆದು ಹಾಳಾಗಿಹೋಗಿತ್ತು. ಉಕ್ಕಿನ ಕೆಲವು ಸರಕುಗಳನ್ನು ಸಿದ್ಧಮಾಡಿಕೊಡುವ ದೊಡ್ಡದೊಂದು ಕಂಟ್ರಾಕ್ಟಿನ ಕೆಲಸ ಆಗ ಸಾಗಿದ್ದಿತು. ಮತ್ತೆರಡು ದಿನಗಳಲ್ಲಿ ಮುಗಿಯಬೇಕಾದ ಕೆಲಸ ಈ ತಂಟೆಯಿಂದಾಗಿ ನೀಗದೆ ಕಂಪನಿಗೆ ಹಾನಿಯಾಗಿತ್ತು. ಕಂಪನಿಯ ಒಡೆಯರು ಆ ಯಂತ್ರ ಮೊದಲಿನಂತೆ ಕೆಲಸ ಮಾಡುವಂತಾಗುವವರೆಗೂ ಅಂದರೆ ಎರಡು ದಿನದ ಕೂಲಿಯನ್ನು ಆ ಇಪ್ಪತ್ತೂ ಕೂಲಿಗಾರರಿಗೆ ಕೊಟ್ಟದ್ದಿಲ್ಲ. ಇದರಿಂದಾಗಿ ಅವರು ತಮ್ಮ ಸಂಘದ ವರೆಗೆ ಸುಳ್ಳು ಅಪವಾದ ಒಯ್ದು ಟ್ರಿಬ್ಯೂನಲ್‌ವರೆಗೆ ಹೋಗುವದಾಗಿ ಅಂಜಿಸಿದ್ದರು. ಆ ವಿಷಯವಾಗಿಯೇ ಶೇಖರಲಾಲಾ ಬ್ಯಾನರ್ಜಿಯವರನ್ನು ಕೇಳಲು ಬಂದಿದ್ದರು.

"ನೀವೇನು ಮಾಡಬಲ್ಲಿರಿ? ನಿಮ್ಮ ಸಾಹೇಬರೇ ಪ್ರಯತ್ನಮಾಡಿ ಕೈ ಬಿಟ್ಟರಲ್ಲ."

ರಮೇಶನ ಪ್ರಶ್ನೆಗೆ ಉತ್ತರವಾಗಿ ಸ್ವಲ್ಪ ಸಂಶಯದಿಂದಲೇ ಶೇಖರಲಾಲಾ ಕೇಳಿದರು. ರಮೇಶನಂತೆ ಅವರೂ ಯುವಕರು. ಆದರೆ ಈಗಾಗಲೇ ಕೂಲಿಕಾರರೊಡನೆ ಸಂಬಂಧ ಬಗೆಹರಿಸುವದು ಎಷ್ಟು ಕಠಿಣ ಎಂದು ಅವರಿಗೆ ಅನುಭವವಾಗಿತ್ತು.

"ಹೌದು, ಆದರೆ ಅವರು ಆಫೀಶಿಯಲ್ ರೀತಿಯಾಗಿ ತಂಟೆ ಬಗೆ ಹರಿಸಲು ಹೋಗಿದ್ದರು. ನನಗೊಂದು ಚಾನ್ಸ್ ಕೊಟ್ಟರೆ ನಾನೇ ಸ್ವತಃ ಆ ಕೂಲಿಕಾರರಿಗೆ ಭೆಟ್ಟಿಯಾಗಿ ನಿಮ್ಮಿಬ್ಬರಿಗೂ ಒಪ್ಪಿಗೆಯಾಗೋಹಾಗೆ ಮಾತು ಕುದುರಿಸಲೆತ್ನಿಸುತ್ತೇನೆ. ಅವರಲ್ಲಿ ಒಬ್ಬಿಬ್ಬರು ಕುರ್ಲಾದಲ್ಲಿ ನನ್ನ ನೆರೆಯವರು.

ಈ 'ಅಸಿಸ್ಟಂಟ್‌ನ' ಯಶಸ್ಸಿನಲ್ಲಿ ಶೇಖರಲಾಲಾಗೆ ಸ್ವಲ್ಪವೂ ನಂಬಿಕೆ ಇರಲಿಲ್ಲ. ಆದರೆ 'ಆದರೆ ಆಗಲಿ' ಅನ್ನುವ ವ್ಯಾವಹಾರಿಕ ದೃಷ್ಟಿಯಿಂದ್ಲ ಹೇಳಿದರು.

"ಹಾಗೆಯೇ ಆಗಲಿ. ಈ ಡ್ರಾಫ್ಟನ್ನಂತೂ ಒಯ್ಯುತ್ತೇನೆ. ನನ್ನ

ಫ್ಯಾಕ್ಟರಿ ಬಾಯ್‌ಖಳಾದಲ್ಲಿದ್ದುದು ನಿಮಗೆ ಗೊತ್ತಿರಬಹುದಲ್ಲ. ಯಾವಾಗ ಬರುತ್ತೀರಿ ?"

"ಮಧ್ಯಾಹ್ನ ಎರಡೂಕಾಲುಗಂಟೆಗೆ ಬರುತ್ತೇನೆ. ಅದು ಲಂಚ್‌ವೇಳೆ. ಬ್ಯಾನರ್ಜಿಯವರಲ್ಲಿ ಹೇಳಿಕೊಂಡು ಮತ್ತೊಂದು ಅರ್ಧ ತಾಸು ಬಿಡುವು ಮಾಡಿಕೊಂಡು ಬರುತ್ತೇನೆ."

"ಹಾಗೆಯೇ ಆಗಲಿ. ನಾನೂ ಆ ವೇಳೆಗೆ ಫ್ಯಾಕ್ಟರಿಗೆ ಬರುತ್ತೇನೆ."

ಎಂದು ಶೇಖರಲಾಲಾ ತಮ್ಮ ಕಾರು ಹತ್ತಿ ಬೆಲರ್ಡ್ ಇಸ್ಟೇಟ್‌ದಲ್ಲಿಯ ತಮ್ಮ ಆಫೀಸಿನತ್ತ ನಡೆದರು.

ಮಧ್ಯಾಹ್ನ ೨॥ ಘಂಟೆಗೆ ಊಟ, ನಿದ್ದೆ ಮುಗಿಸಿ ಶೇಖರಲಾಲಾ ತಮ್ಮ ಫ್ಯಾಕ್ಟರೀ ಆಫೀಸಿಗೆ ಬಂದಾಗ ಎದುರಿನಿಂದ ಅಸಿಸ್ಟಂಟ್ ಫೋರ್‌ಮನ್ನನೂ ರಮೇಶನೂ ಬರುತ್ತಿದ್ದರು.

"ನಿಮ್ಮ ಕೆಲಸಗಾರರನ್ನು ಭೆಟ್ಟಿಯಾಗಿ ಬಂದೆ. ನಿಮ್ಮ ಈ ರಹಿಮತ್ತಲ್ಲಾ ತುಂಬ ಸಹಾಯ ಮಾಡಿದರು. ಆ ದಿನ ನಿಮಗೆ ಹಾನಿಯಾದ ಹತ್ತು ತಾಸುಗಳನ್ನು ಮುಂದಿನ ಎರಡು ರವಿವಾರ ಅವರು ಬಂದು ಕೆಲಸಮಾಡಿ ತುಂಬಿಕೊಡಬೇಕು. ಮತ್ತು ಆ ದಿನಗಳಿಗಾಗಿ ಮಾತ್ರ ನೀವು ಅವರಿಗೆ ಸಂಬಳ ಕೊಡಬೇಕು ಎನ್ನುವದಕ್ಕೆ ಅವರೂ ಒಪ್ಪಿಕೊಂಡರು. ನಿಮಗೆ ಒಪ್ಪಿಗೆಯಾದರೆ ನಿಮ್ಮ ಫೋರ್‌ಮನ್ನರೊಡನೆ ಹೇಳಿಕಳುಹಿಸಿ. ನಿಮ್ಮ ಕಂಟ್ರ್ಯಾಕ್ಟ್ ಅಂತೂ ಒಂದು ದಿನ ತಡವಾಗಿ ಮುಗಿದುಬಿಟ್ಟಿದೆಯಲ್ಲ. ಅದಕ್ಕಾಗಿ ಏನೂ ಮಾಡುವಂತಿಲ್ಲ."

ಎಂದು ರಮೇಶನೊಡನೆ ತನ್ನ ವರದಿ ಒಪ್ಪಿಸಿದನು.

ಶೇಖರಲಾಲಾಗೂ ಈ ಕಿರುಕುಳ ಸಂತೆ ಹೇಗಾದರೂ ಬಗೆಹರಿದರೆ ಸಾಕಾಗಿತ್ತು. ನಿಜವಾಗಿಯೆಂದರೆ ತಂಟೆಯಾದ ದಿನವೇ ಅವರು ಕೂಲಿಕಾರರಿಗೆ ಅವರ ಸಂಬಳಕೊಟ್ಟು ಇನ್ನು ಹಾಗೆ ತಂಟೆಮಾಡದಂತೆ ಬೆದರಿಸಿ ಅಷ್ಟಕ್ಕೆ ಬಿಟ್ಟು ಬಿಡುವದರಲ್ಲಿದ್ದರು. ಆದರೆ ಆ ಕೂಲಿಕಾರರ ವೃತ್ತಿಯನ್ನು ಮೊದಲಿನಿಂದಲೂ ಅರಿತಿದ್ದ ನುರಿತ ಫೋರ್‌ಮನ್ನನು ಹಾಗೆ ಮಾಡಿದರೆ ಮುಂದೆ ಬಹಳ ಕಷ್ಟಕ್ಕೀಡಾಗಬೇಕಾಗುತ್ತದೆ ಎಂದು ಎಚ್ಚರಿಕೆ ಕೊಟ್ಟಿದ್ದನು. ತಮ್ಮ ಹಠ ಅಷ್ಟು ಸುಲಭವಾಗಿ ಸಾಧಿಸಬಹುದೆಂದು ತಿಳಿದರೆ ನಿತ್ಯವೂ ಹೀಗೇ ಏನಾದರೂ ಎಬ್ಬಿಸಿ

ಕೂಲಿ ಕೇಳುವ ವೃತ್ತಿಯೇನೂ ಕೂಲಿಕಾರರಲ್ಲಿ ಹೊಸದಾಗಿರಲಿಲ್ಲ. ಏನು ಮಾಡಬೇಕೆಂದು ತಿಳಿಯದೆ ಟ್ರಿಬ್ಯುನಲ್‌ಗೆ ಹೋದರೆ ಹೋಗಲಿ ಎಂದು ಸಂಬಳ ಕೊಡದೆ ಕುಳಿತಿದ್ದ ಲಾಲಾಗೆ ಪ್ರಸಂಗ ಉಪಾಯವಾಗಿ ಬಗೆಹರಿದುದಕ್ಕೆ ತುಂಬ ಸಂತೋಷವಾಯಿತು. ಫೋರ್‌ಮನ್ನನಿಗೆ ತಮ್ಮ ಒಪ್ಪಿಗೆ ತಿಳಿಸಿ ಅವನನ್ನು ಕಳಿಸಿಕೊಟ್ಟು ರಮೇಶನನ್ನು ತಮ್ಮ ಆಫೀಸು ಕೋಣೆಗೆ ಕರೆದೊಯ್ದರು.

"ಒಂದು ಅಸಂಗತ ಪರಿಸ್ಥಿತಿಯನ್ನು ಸುಲಭವಾಗಿ ಕೊನೆಗೊಳಿಸಿಬಿಟ್ಟಿರಿ. ನಿಮಗೆ ಥ್ಯಾಂಕ್ಸ್. ಎಡ್ವೋಕೇಟರ ಕೆಳಗೆ ಕೆಲಸ ಮಾಡುತ್ತ ಈಗಾಗಲೇ ಚನ್ನಾಗಿ ನುರಿತಿದ್ದೀರಿ."

ರಮೇಶನನ್ನು ಕುರ್ಚಿಯ ಮೇಲೆ ಕುಳ್ಳಿರಿಸಿ ಸಿಪಾಯಿಗೆ ಚಹ ತರಲು ಹೇಳಿ ಲಾಲಾ ನುಡಿದರು.

"ಏನೋ, ಕೂಲಿಕಾರರೊಡನೆಯೇ ನಾನಿರುವೆನಾದ್ದರಿಂದ ಅವರ ಸುಖ ದುಃಖ ತಿಳಿದಿದ್ದೇನೆ. ನಾವು ಅವರಿಗೆ ಅನ್ಯಾಯ ಮಾಡುವದಿಲ್ಲವೆಂದು ಅವರಿಗೆ ನಂಬಿಗೆಯಾದರೆ ಬೇಕಾದ ಮಾತನ್ನಾದರೂ ಕೇಳುತ್ತಾರೆ. ಎಷ್ಟು ಉತಾವಳಿ ಸ್ವಭಾವದವರಾದರೂ ನಾಲ್ಕು ಒಳ್ಳೆಯ ಮಾತುಗಳಿಂದ ಈ ಕೆಲಸ ಗಾರರನ್ನು ನಮ್ಮವರಾಗಿಸಿಕೊಳ್ಳಬಹುದೆಂದು ನನ್ನ ನಂಬಿಕೆ. ಅದು ಸುಳ್ಳಾಗ ಲಿಲ್ಲವಲ್ಲ ಎಂದು ಸಂತೋಷ."

"ನೀವೂ ಬಹುಶಃ ಕೂಲಿಕಾರರ ವರ್ಗದವರೇ ಏನು?"

"ಒಂದು ರೀತಿಯಿಂದ ಹೌದು ಎನ್ನಬಹುದು. ನಾನು ಹುಟ್ಟಿ ಬೆಳೆದದ್ದು ಹಳ್ಳಿಯಲ್ಲಿ ಒಕ್ಕಲಿಗರ ನಡುವೆ. ಜೀವನಕ್ಕಾಗಿ ಅಲ್ಲದಿದ್ದರೂ ಒಡನಾಟಕ್ಕಾಗಿ ಅವರೊಡನೆ ಕೆಲಸ ಮಾಡಿದ್ದೇನೆ. ಇಲ್ಲಿ ಬಂದ ಮೇಲೂ ನಮ್ಮ ಮನೆಯ ನೆರೆಯಲ್ಲೆಲ್ಲ ಅವರನ್ನೇ ಕಾಣುತ್ತಿದ್ದೆ. ನಿತ್ಯ ಸಂಜೆಗೆ ಮನೆಗೆ ಬಂದು ಅವರು ತಮ್ಮ ಸುಖದುಃಖ ಹೇಳಿಕೊಳ್ಳುತ್ತಿರುವಾಗ ಕೇಳುವವರಲ್ಲಿ ನಾನೂ ಒಬ್ಬನಾಗಿ ಆಗಾಗ ಸಲಹೆಯನ್ನು ಕೊಡುತ್ತಿದ್ದೆ."

"ನಿಮ್ಮ ಮುಂದಿನ ವ್ಯವಸಾಯಕ್ಕೆ ಚೆನ್ನಾಗಿಯೇ ಸಿದ್ಧತೆ ನಡೆಸಿರುವಿರಿ ಎಂದಂತಾಯಿತಲ್ಲ."

"ಹಾಗೇನಿಲ್ಲ. ನಿಜವಾಗಿ ನನಗೆ ಪ್ರಾಕ್ಟೀಸು ಮಾಡುವದು ಮನಸ್ಸಿನಲ್ಲಿಲ್ಲ. ಆದರೆ ಉಪಾಯಗಾಣದೆ 'ಅದಾದರೆ ಅದು' ಎಂದುಕೊಂಡಿದ್ದೇನೆ.

ಜೂನದಲ್ಲಿ ಲಾ ಪರೀಕ್ಷೆಯ ಪರಿಣಾಮವಾದನಂತರ ಈ ಕೆಲಸ ಸಿಗಬೇಕಾದರೂ ಎರಡು ತಿಂಗಳು ಹಾಗೆಯೇ ಮುಂಬಯಿ ಸುತ್ತಬೇಕಾಗಿತ್ತು. ಯಾವ ಮಿನಿಸ್ಟರು, ಕಮೀಶನರು, ಅಫೀಸರರೂ ನನ್ನ ಮಾವನೋ ಕಾಕಾನೋ ಆಗದೆ ಇದ್ದದ್ದು ನನ್ನ ದುರ್ದೈವ."

"ಹಾಗಾದರೆ ಬ್ಯಾನರ್ಜಿಯವರಲ್ಲಿಯೇ ಉಳಿಯುವ ವಿಚಾರವೇನೂ ಇಲ್ಲವಲ್ಲ ?"

ಲಾಲಾಗೆ ಏನೋ ಯೋಚನೆ ಹೊಳೆದಿತ್ತು.

"ಆ ನೂರೈವತ್ತು ರೂಪಾಯಿ ನಂಬಿಕೊಂಡು ಹೇಗಿರಬೇಕು, ಸರ್ ?"

ಲಾಲಾ ರಮೇಶನನ್ನೇ ನೋಡತೊಡಗಿದ್ದರು. ನಿಃಸಂಕೋಚವಾಗಿ ಇದ್ದುದನ್ನು ಇದ್ದಹಾಗೆ ಹೇಳಿಬಿಡುವ ಈ ತರುಣನ ಧೈರ್ಯ ಅವರಿಗೆ ತುಂಬ ಮೆಚ್ಚಿಕೆಯಾಗಿತ್ತು. ನೋಡಲು ಅಷ್ಟೇನೂ ಎದ್ದುಕಾಣುವಂಥ ವ್ಯಕ್ತಿತ್ವವಲ್ಲವಾದರೂ ರಮೇಶನ ಮೋರೆಯ ಮೇಲೆ ಆತ್ಮವಿಶ್ವಾಸದ ತೇಜ ಮೆರೆಯುತ್ತಿತ್ತು. ತನ್ನ ನಿಃಸಂಕೋಚ ವೃತ್ತಿಯಿಂದಾಗಿ ಜನರ ವಿಶ್ವಾಸ ಗಳಿಸುವ ಶಕ್ತಿಯೂ ಅವನಲ್ಲಿದ್ದುದು ಲಾಲಾಗೆ ತಿಳಿಯದಿರಲಿಲ್ಲ. ಬಹುಶಃ ತನಗೆ ಬೇಕಾದ ಮನುಷ್ಯ ಈತನೇ ಆದರೂ ಆಗಬಹುದು ! ಏಕೆ ಈ ಸಂಧಿಯನ್ನು ಪ್ರಯತ್ನ ಮಾಡಿ ನೋಡಬಾರದು ಅನ್ನಿಸಿತು ಚಿತ್ರಶಾಳೆ ಕಂಪನಿಯ ಒಡೆಯರಿಗೆ.

ರಮೇಶ ಚಹಾ ಕುಡಿದು ಬೀಳ್ಕೊಟ್ಟಾಗಲೂ ಅವರ ಯೋಚನೆ ಎಲ್ಲೋ ಅಡಗಿತ್ತು.

"ಇನ್ನೊಮ್ಮೆ ಬರ್ರಲ್ಲ."

"ತಾವು ಕರೆದಾಗ ಸಿದ್ಧ" ಎನ್ನುತ್ತಾ ರಮೇಶ ಅಲ್ಲಿಂದ ಹೊರಟ."

೩

ಇನ್ನೂ ಮೂರು ದಿನ ಕಳೆಯುವದರಲ್ಲೆ ಪುನಹ ರಮೇಶನಿಗೆ ಕರೆ ಬಂದಿತು.

ಲಾಲಾನೇ ಕರೆ ಕಳಿಸಿದ್ದರು.

ಇನ್ನೇನೋ ಕೂಲಿಗಾರರ ಗಡಬಡಿ ನಡೆದಿರಬೇಕೆಂದು ಅನ್ನಿಸಿ ರಮೇಶ ಯೋಚಿಸತೊಡಗಿದ. ಆದರೂ ಆಗಲೇನಂತೆ – ಬಗೆಹರಿಸೋಣ ಅನ್ನೋ ಧೈರ್ಯ ಅವನನ್ನು ಮುಂದೆ ದೂಡಿತು.

ಲಾಲಾ ಅವನ ದಾರಿಯನ್ನೇ ಕಾಯುತ್ತಿದ್ದಂತೆ ಅವನನ್ನು ಸ್ವಾಗತಿಸಿದರು.

ಅವರೂ ಮೂರು ದಿನಗಳಲ್ಲಿ ರಮೇಶನ ಬಗೆಗೆ ತುಂಬ ವಿಚಾರ ಮಾಡಿದ್ದರು. ಒಂದಿಬ್ಬರು ಕೆಲಸಗಾರರನ್ನು ಭೆಟ್ಟಿಯಾಗಿ ಮಾತನಾಡಿದ್ದರು. ಅವರಿಗೂ ಆತನ ಮೇಲೆ ಅಭಿಮಾನವಿತ್ತು.

ಆದರೆ – ಕೆಲಸಗಾರರ ಕಡೆಯವನನ್ನ ಮ್ಯಾನೇಜರ್ ಅನ್ನಿಸಿದಾಗ ಕಾರ್ಖಾನೆ ಕುಲಗೆಟ್ಟರೆ – ಅನ್ನೋ ಭೀತೀಯೂ ಅವರಿಗೆ ತಡೆ ತಂದಿಡುತ್ತಿತ್ತು.

ಹಾಗೂ ನೋಡೋಣ. ಟೆಂಪರರಿ ಆಗಿ ನೇಮಿಸಿಕೊಂಡು ಪರೀಕ್ಷಿಸಿದರೇನು ? ಸಮಸ್ಯಾ ಬಗೆಹರೀತಂದ್ರೆ ಚಲೋ ಆದಂತಾಯಿತು. ಇಲ್ಲವಾದರೆ ಅವನನ್ನು ಹೋಗಪ್ಪ ಅಂದರೆ ಸರಿ – ಎಂದೂ ಲಾಲಾ ಯೋಚಿಸಿ ನಿರ್ಧಾರಕ್ಕೆ ಬಂದು ಕಾಗದ ಬರೆದಿದ್ದರು.

"ಏನೋ ಕರೆಸಿದಿರಲ್ಲ. ಇನ್ನೇನು ಹಚ್ಚಿದ್ದಾರೆ ಕೆಲಸಗಾರರು" ಎಂದು ಉತ್ಸುಕನಾಗಿ ರಮೇಶ ಕೇಳಿದ.

"ಅದೇನೂ ಇಲ್ಲ. ಬೇರೇನೋ ವಿಚಾರ ಮಾಡಬೇಕಾಗಿತ್ತು."

"ಹಾಗೇ ಆಗಲಿ. ನನಗೇನೋ ಇನ್ನೊಮ್ಮೆ ಈ ಕೆಲಸಗಾರರು ತರಲೆ ತೆಗೆದಿರಬಹುದು ಅನ್ನಿಸಿತು. ಸದ್ಯ ಹಾಗಿಲ್ಲವಲ್ಲ."

"ಹಾಗೇನೂ ಇಲ್ಲ. ನಿಮ್ಮ ಯತ್ನ ವಿಫಲವಾಗಿಲ್ಲ."

ಅಷ್ಟರಲ್ಲಿ ಚಹಾ ಬಂತು. ಚಹಾ ಕುಡಿಯುತ್ತಿದ್ದಂತೆ ಲಾಲಾ ಹೇಳಿದ—

"ನೋಡಿ, ನಾನೂ ಬಹಳ ದಿನಗಳಿಂದ ಒಬ್ಬ ನಂಬಿಗಸ್ತ ಮನುಷ್ಯನನ್ನು ಹುಡುಕುತ್ತಿದ್ದೆ. ನಮ್ಮ ತಂದೆಯವರ ಕಾಲದಲ್ಲಿ ಅವರ ಕೆಳಗೇ ಪಳಗಿದ ಒಬ್ಬ ನುರಿತ ಮ್ಯಾನೇಜರರಿದ್ದರು. ತಂದೆ ತೀರಿದ ಮೇಲೆ ಅವರ ಸಹಾಯದಿಂದಲೇ ಈ ಬಿಸಿನೆಸ್ಸದ ಪೂರ್ಣಪರಿಚಯ ಮಾಡಿಕೊಂಡೆ. ಅಷ್ಟರಲ್ಲಿ ಆ ಮ್ಯಾನೇಜರರೂ ತೀರಿಬಿಟ್ಟರು. ಅವರ ನಂತರ ಈ ಜವಾಬ್ದಾರಿಯನ್ನು ಮತ್ತಾರಿಗೂ ಕೊಡಲಾರದೆ ನಾನೇ ನೋಡಿಕೊಳ್ಳುತ್ತಿದ್ದೇನೆ. ಆದರೆ ನೀಗದಷ್ಟು ಕೆಲಸ ಬೀಳುತ್ತದೆ.

"ಈಗ ಕೆಲಸಗಾರರ ಸಮಸ್ಯೆನೂ ಬಗೆಹರೀತಲ್ಲ. ಇನ್ನೇನೂ ತೊಂದರೆ ಯಾಗದು."

"ಆದರೂ ಕೆಲಸ ತುಂಬ ಆದೆ. ಆದನ್ನ ನಿಭಾಯಿಸೋದಕ್ಕೆ ನನ ಗೊಬ್ಬನಿಗೇ ಕಷ್ಟ. ಮ್ಯಾನೇಜರ್ ಒಬ್ಬರನ್ನ ನೇಮಿಸೋಣ ಅಂತ ಯೋಚಿಸ ಹತ್ತಿದ್ದೀನಿ."

"ಅದೂ ಒಳ್ಳೇದೇ. ಆದರೆ...."

"ಹೇಳಿ...."

"ಕೆಲಸಗಾರರನ್ನ ರೊಚ್ಚಿಗೆಬ್ಬಿಸಿ ಮಾಲಿಕರನ್ನ ಇಲ್ಲದ ಜಂಜಾಟಕ್ಕೆ ಎಳೆಯೋರೇ ಹೆಚ್ಚು. ಅಂಥವರು ಬಂದರೆ ಕೊಂಚ ತೊಂದರೆ."

"ಅದಕ್ಕೆ ನಿಮ್ಮನ್ನ ಕರೆಕಳಿಸಿದೆ."

"ಅಂದರೆ...."

"ನೀವು ಒಪ್ಪುವದಾದರೆ ನಮ್ಮ ಕಂಪನಿ ಸೇರಿಕೊಳ್ಳಬಹುದು.

"ಮೊದಲು ಅಸಿಸ್ಟಂಟ್ ಅಂತ ನಿಯಮಿಸಕೊಳ್ಳಬಹುದು. ಮುಂದಿನದೆಲ್ಲ

ನಿಮ್ಮ ಸ್ವಂತ ಯೋಗ್ಯತೆ, ಕೆಲಸದಮೇಲಿದೆ. ನಿಮ್ಮ ಲಾದ ಉಪಯೋಗವೂ ಆಗಬಹುದು. ನನಗೂ ಹಗಲೆಲ್ಲ ಬ್ಯಾನರ್ಜಿಯವರಲ್ಲಿ ಓಡಬೇಕಾಗಲಿಕ್ಕಿಲ್ಲ."

ರಮೇಶ ತನ್ನ ಕಿವಿ ತಾನೇ ನಂಬಲಾರದೆ ಕೇಳುತ್ತಲಿದ್ದನು. ಒಮ್ಮೆ ಇದನ್ನೆಲ್ಲ ಮತ್ತೆ ಯಾರಿಗಾದರೂ ಹೇಳುತ್ತಿರಬಹುದೆಂದು ಕೋಣೆಯ ಸುತ್ತೆಲ್ಲ ನೋಡಿ ತನಗೇ ಎಂದು ಖಾತ್ರಿಮಾಡಿಕೊಂಡನು. ಬಿ.ಎ. ಮುಗಿಸಿಕೊಂಡು ಮುಂಬಯಿಯಲ್ಲಿ ಕೆಲಸಕ್ಕಾಗಿ ಅಲೆದಾಡಿದ ಆ ದಿನಗಳ ನೆನಪಾಯಿತು. ಫೋರ್ಟಿನ ಎಲ್ಲ ಬ್ಯಾಂಕು, ಆಫೀಸುಗಳನ್ನು ಹೊಕ್ಕು 'ಇಲ್ಲ' ಎನ್ನಿಸಿಕೊಂಡು ಬೇಸರಬಂದು ಮರಿನಡ್ರ್ಯೈವ್ನಗುಂಟ ಗೊತ್ತು ಗುರಿ ಇಲ್ಲದೆ ನಡೆದಿರುವಾಗ ಭರ್ರ ಎಂದು ಓಡುತ್ತಿರುವ ಕಾರುಗಳನ್ನು ನೋಡಿ ಅವುಗಳ ಮುಂದೆ ನಿಂತು 'ಕೆಲಸ ಕೊಡಿ ಇಲ್ಲದಿದ್ದರೆ ಇಲ್ಲಿಯೇ ಬಿದ್ದು ಸಾಯುತ್ತೇನೆ' ಎಂದು ಪಟ್ಟು ಹಿಡಿದು ನಿಂತುಬಿಡುವಂತೆ ಎಷ್ಟೋ ಸಾರೆ ಅನಿಸಿದರೂ ಹೇಗೋ ತಡೆದುಕೊಂಡು ಆಚೆಯ ಅನಂತ ಸಾಗರದ ನೀರನ್ನು ನೋಡುತ್ತ ಮುಂದೆ ಹೋಗುತ್ತಿದ್ದ ಆ ದಿನಗಳ ನೆನಪಾಯಿತು. ಎಲ್.ಎಲ್.ಬಿ. ಪರೀಕ್ಷೆಯಾಗಿ ಮತ್ತೆ ಕೆಲಸಕ್ಕಾಗಿ ಅಲೆದಾಡಿದ ಆ ಎರಡು ತಿಂಗಳು ಕಣ್ಮುಂದೆ ತುಳಿದುಹೋದವು. ತನ್ನ ಮನಸ್ಥಿತಿಯನ್ನರಿತ ಅಕ್ಕ 'ನೋಕರಿ ಸಿಗ್ಲಿಲ್ಲಂತ ಎಲ್ಲಾದರೂ ಗಾಡಿ ಕೆಳಗೆ ಬೀಳಬೇಡ ಮಾರಾಯ' ಎಂದು ಅತ್ತಿದ್ದ ಆ ನೋಟ ರಮೇಶನ ಕಣ್ಮುಂದೆ ಇನ್ನೂ ಅಚ್ಚಳಿಯದೆ ನಿಂತಿತ್ತು. ಈಗ ಇವರು ತಮ್ಮ ಕಂಪನಿಯಲ್ಲಿ ಅಸಿಸ್ಟಂಟ್ ಆಗಲು ಕೇಳುತ್ತಿದ್ದಾರೆ! ಅವರ ಮ್ಯಾನೇಜರರ ಸ್ಥಳ ಇನ್ನೂ ತೆರವಿದೆ ಎನ್ನುತ್ತಾರೆ!

"ಏಕೆ ಅಸಿಸ್ಟಂಟ್ ಅಂದಕೂಡಲೆ ಹಿಂದುಮುಂದೆ ನೋಡುವಂತಾಯಿತೆ ?"

ರಮೇಶನು ಸುಮ್ಮನಿದ್ದುದನ್ನು ನೋಡಿ ಲಾಲಾ ಕೇಳಿದರು.

"ಆರಂಭಕ್ಕೆ ೧೮೫ ರೂಪಾಯಿ ವೇತನ ಫಿಕ್ಸ್ ಮಾಡಬಹುದು. ಮೊದಲಿನ ಆರು ತಿಂಗಳು ಪ್ರೊಬೇಶನರ್ ಅಂತ ಸೇರಿಕೊಂಡು ಮುಂದೆ ನಿಮ್ಮ ಯೋಗ್ಯತೆಗೆ ಸರಿಯಾಗಿ ವೇತನ ನಿಶ್ಚಯಿಸಿಕೊಳ್ಳಿ. ಒಪ್ಪುವದಾದರೆ...."

ರಮೇಶನಿಗೆ ಏನೆನ್ನಬೇಕೆಂದೇ ತೋಚದಾಯಿತು. ಹಾಗೇ ತನ್ನ ಸಾಮರ್ಥ್ಯದ ಬಗೆಗೂ ಸಂದೇಹ ಮೂಡಿತು.

" ನೀವಿಟ್ಟ ವಿಶ್ವಾಸಕ್ಕೆ ಕೃತಜ್ಞ. ಆದರೆ ಈ ವ್ಯವಹಾರಕ್ಕೆ ನಾನು ತೀರ ಅಪರಿಚಿತ."

" ಚಿಂತೆಯಿಲ್ಲ. ಯಾವದೂ ಮೊದಲಿನಿಂದ ಬರುವದಿಲ್ಲ. ನಿಮ್ಮ ಆತ್ಮ ವಿಶ್ವಾಸವಿದ್ದರೆ ಏನನ್ನಾದರೂ ಕಲಿಯಬಹುದು. ಈ ಆರು ತಿಂಗಳಲ್ಲಿ ನೀವು ನಿಮ್ಮ ಪ್ರವೃತ್ತಿಯನ್ನರಿತುಕೊಳ್ಳಬಹುದು. ಅಷ್ಟರಲ್ಲಿ ಇಬ್ಬರಿಗೂ ಒಬ್ಬರೊಬ್ಬರ ಅಗತ್ಯದ ಮಟ್ಟ ತಿಳಿಯುವದು. ಇರುವದು ಬಿಡುವದು ಮುಂದಿನ ಪ್ರಶ್ನೆ."

"................"

" ಯಾವಾಗಿನಿಂದ ಬರುತ್ತೀರಿ ?"

" ಬ್ಯಾನರ್ಜಿಯವರನ್ನು ವಿಚಾರಿಸುತ್ತೇನೆ. ನಾಲ್ಕೆಂಟು ದಿನಗಳೊಳಗಾಗಿಯೇ ಬಿಡಲೂ ಆಗಬಹುದು. ಅವರ ಸಂಬಂಧಿಕನೊಬ್ಬ ಬರುವವನಿದ್ದಾನಂತೆ. ನನ್ನ ಸ್ಥಳವನ್ನಾತ ತುಂಬಬಹುದು."

" ನಿಮ್ಮೂರು ಯಾವದು ?"

" ಸಂತಪಾಲ ಅಂತ ಬೆಳಗಾಂವ ಜಿಲ್ಲೆಯಲ್ಲಿದೆ."

" ಅಂದರೆ ನೀವು ಕರ್ನಾಟಕದವರೇನು ? ಮರಾಠಿ ಬರುತ್ತಿರಲಿಕ್ಕಿಲ್ಲ ?"

" ನನ್ನ ಮಾತೃಭಾಷೆ ಕನ್ನಡವಾದರೂ ಮರಾಠಿ ಚನ್ನಾಗಿ ಬರುತ್ತದೆ"

ಅನ್ನುತ್ತ ರಮೇಶ ಶೇಖರಲಾಲರ ಮೋರೆ ನೋಡಿದನು. ಅವರು ಮಹಾರಾಷ್ಟ್ರದವರು ಎನ್ನುವದು ಅವನಿಗೆ ತಿಳಿದಿತ್ತು. ತನ್ನ ಕನ್ನಡತನ ಅವರ ಇಲ್ಲಿಯವರೆಗಿನ ವಿಶ್ವಾಸವನ್ನು ಕಡಿಮೆಮಾಡಲಿಕ್ಕಿಲ್ಲವಲ್ಲ ಎಂದು ಯೋಚಿಸುತ್ತಿದ್ದನು. ಆದರೆ ಲಾಲಾರ ಮೋರೆಯ ಮೇಲಿಂದ ಆತನಿಗೆ ಏನನ್ನೂ ನಿಶ್ಚಯಿಸಲಾಗಲಿಲ್ಲ.

" ಮರಾಠಿ ಎಲ್ಲಿ ಕಲಿತಿರಿ ?"

ಎಂದು ಲಾಲಾ ಮರಾಠಿಯಲ್ಲಿಯೇ ಕೇಳಿದರು. ಮುಂದಿನ ಮಾತೆಲ್ಲ ಮರಾಠಿಯಲ್ಲಿ ನಡೆಯಿತು.

" ನನ್ನ ಕಾಲೇಜು ಶಿಕ್ಷಣವೆಲ್ಲ ಪುಣೆಯಲ್ಲಿ ಆಯಿತು. ಆಗ ಕಲಿತುಕೊಂಡೆ. ಮರಾಠಿಯಲ್ಲಿ ಗ್ರಂಥಗಳನ್ನು ಬಹಳಷ್ಟು ಓದಿದ್ದೇನೆ."

" ನಿಮ್ಮನ್ನು ನೋಡಿದರೆ ಹಾಗೆಯೇ ಅನ್ನಿಸುತ್ತದೆ. ಇಲ್ಲಿಗಿಂತ ನಿಮ್ಮ

ಕಡೆಯ ಜನ ಹೆಚ್ಚು ಶ್ರಮಜೀವಿಗಳು. ನನಗೂ ಒಬ್ಬಿಬ್ಬರ ಪರಿಚಯವಿದೆ. ನಿಮ್ಮ ಹಾಗೆ ಮನಸ್ಸಿಗೆ ಹಚ್ಚಿಕೊಂಡು ಕೆಲಸ ಮಾಡುವವರು ಬಹಳ ಕಡಿಮೆ."

"ಹುಂ, ಹೊಟ್ಟೆಗಾಗಿ ಮಾಡಬೇಕಲ್ಲ."

"ನಿಮ್ಮ ತಂದೆ ಏನು ಮಾಡುತ್ತಾರೆ?"

"ಮೊದಲು ಕುಲಕರ್ಣಿಯಾಗಿದ್ದರು. ಈಗ ಪೆನ್ಶನ್ ತಗೊಂಡು ಮನೆಯಲ್ಲಿದ್ದಾರೆ. ಹಳ್ಳಿಯಲ್ಲಿ ನಾಲ್ಕು ಪತ್ರ, ಕಾಗದ ಬರೆದುಕೊಟ್ಟು ವೇಳೆ ಕಳೆಯುತ್ತಾರೆ."

"ಮತ್ತೆ ನಿಮ್ಮ ಶಿಕ್ಷಣ?"

"ಮ್ಯಾಟ್ರಿಕ್ ಆದಕೂಡಲೆ ಎಲ್ಲಿಯಾದರೂ ಕೆಲಸ ಹಿಡಿಯಬೇಕೆಂದೇ ತಂದೆಯ ಆಗ್ರಹವಿತ್ತು. ಅದಕ್ಕಾಗಿಯೇ ಪುಣೆಗೆ ಬಂದು ಕೆಲಕಾಲ ಉಳಿದಿದ್ದೆ. ಕೆಲಸವಂತೂ ಸಿಗಲಿಲ್ಲ. ಆದರೆ ಡೆಕ್ಕನ್ ಕಾಲೇಜಿನ ಕ್ಲಬ್ಬಿನಲ್ಲಿ ಮೇಲ್ವಿಚಾರಣೆಯ ಹೊಣೆ ಒಪ್ಪಿಕೊಂಡು ಫ್ರೀ ಆಗಿ ಊಟ ಸಿಗುವ ಹಾಗೆ ಮಾಡಿಕೊಂಡೆ. ಸ್ಕಾಲರ್‌ಶಿಪ್ ಸಿಕ್ಕಿತು. ಹಾಗೆಯೇ ಒಬ್ಬಿಬ್ಬರು ಮಹಾನುಭಾವರ ಸಹಾಯದಿಂದ ಬಿ.ಎ. ಮುಗಿಸಿ ಇಲ್ಲಿಗೆ ಬಂದು ಶಾಲೆಯಲ್ಲಿ ಕೆಲಸ ಮಾಡುತ್ತ ಲಾ ಮುಗಿಸಿದೆ."

ಹೇಳಬಾರದು ಎಂದು ಹೇಳತೊಡಗಿದ್ದ ರಮೇಶನ ಈ ತುಂಡು ಮಾತುಗಳಲ್ಲಿಯ ಸರಳತೆ ಲಾಲಾಗೆ ಬಹಳ ಹಿಡಿಸಿತು. ಹೇಳಿದರು

"ತುಂಬ ಕಷ್ಟಪಟ್ಟಿದ್ದೀರಿ. ಫಲ ಸಿಗದಿರಲಿಕ್ಕಿಲ್ಲ. ಈಗ ಹೇಳಿ ನಿಮ್ಮ ಈ ದಿನದ ಫೀ ಎಷ್ಟು?"

"ನನ್ನದೆಂಥ ತೊಂದರೆ? ನಿಮ್ಮ ದೊಡ್ಡ ಮನಸ್ಸನ್ನು ಗೆದ್ದುಕೊಂಡೆನಲ್ಲ ಅಷ್ಟು ಸಾಕು."

"ಬಿಸಿನೆಸ್ ಅಂದಕೂಡಲೇ ನಾಲ್ಕು ಜನರ ಕಣ್ಣು ಕುಕ್ಕುವಂತಿರಬೇಕು. ೧೫೦ ರೂಪಾಯಿ ಕೊಡುತ್ತೇನೆ. ಬೇಸರಿಸದೆ ತೆಗೆದುಕೊಳ್ಳಿ."

ಎಂದು ಶೇಖರಲಾಲ ಪೆಟ್ಟಿಗೆಯಿಂದ ಹಣ ತೆಗೆದು ಎಣಿಸಿಕೊಟ್ಟರು. ರಮೇಶ ಮನೆಯಲ್ಲಿಯೇ 'ದೇಶೀ' ಇಸ್ತ್ರಿಮಾಡಿಕೊಂಡು ಐದು ದಿನದಿಂದ ಉಪಯೋಗಿಸುತ್ತಿದ್ದ ತನ್ನ ಶರ್ಟು, ಪ್ಯಾಂಟು ಒಮ್ಮೆ ನೋಡಿಕೊಂಡು ಮತ್ತೊಮ್ಮೆ ಲಾಲಾರ ಮೋರೆ ನೋಡಿ ನಕ್ಕು, ಹಣವನ್ನು ಸ್ವೀಕರಿಸಿದನು. ಲಾಲಾ ನಗುತ್ತಲೇ ರಮೇಶನನ್ನು ಕಳುಹಿಸಿಕೊಟ್ಟರು.

೪

ಶೇಖರನ ತಂದೆ ಮಾಧವರಾವ್ ಚಿತ್ರಳೆ ಸೂರತ್‌ನಿಂದ ಮುಂಬಯಿಗೆ ಬಂದು ಕಂಪನಿ ಸ್ಥಾಪಿಸಿದಾಗ ಇದ್ದಲಿ ಒಲೆ, ಕಬ್ಬಿಣದ ತವ, ಕಾವಲಿ ಇಂಥದೇ ಕಿರುಕುಳ ವಸ್ತುಗಳನ್ನು ತಯಾರಿಸಿ ಮಾರುವದಷ್ಟೇ ಅವರ ವ್ಯವಹಾರವಾಗಿತ್ತು. ಆದರೆ ಮೊದಲನೇ ಮಹಾಯುದ್ಧದ ನಂತರ ಮುಂಬಯಿಗೆ ಬಂದು ಲಕ್ಷಾಧೀಶರಾದ ಎಲ್ಲ ಉದ್ಯೋಗಸ್ಥರಂತೆ ಅವರೂ ತಮ್ಮ ವ್ಯವಹಾರವನ್ನು ಬೆಳೆಸಿಕೊಂಡು ಎರಡನೇ ಯುದ್ಧ ಆರಂಭವಾಗುವ ಹೊತ್ತಿಗೆ ಅಂಧೇರಿಯಲ್ಲಿ ಸುಂದರವಾದ ಬಂಗ್ಲೆ ಕಟ್ಟಿಸಿಕೊಂಡು ಕಾರು ಇಟ್ಟಿದ್ದರು. ೪೨ ಮಂದಿ ಕೆಲಸಗಾರರ ಕಮ್ಮಾರಸಾಲೆ ೭೫೦ ಕೆಲಸಗಾರರ ಕಾರಖಾನೆಯಾಗಿತ್ತು. ಒಂದೆರಡು ಬ್ಯಾಂಕುಗಳ ಷೇರು ಕೊಂಡು ಡಾಯರೆಕ್ಟರರೂ ಆಗಿದ್ದರು. ಯುದ್ಧ ಮುಗಿಯುವ ಹೊತ್ತಿಗೆ ಮುಂಬಯಿಯ ಕಂಪನಿ ಒಡೆಯರಲ್ಲಿ ಅವರದೂ ಒಂದು ಗಣ್ಯಸ್ಥಾನವಾಗಿತ್ತು. ಮುಂಬಯಿಯ ಲೋಕಲ್ ಮಾರ್ಕೆಟ್ಟುಗಳಿಗೆ ಮಾತ್ರ ಅಲ್ಲದೆ, ಹೊರಗಿನ ನಾಸಿಕ, ಅಹಮದಾಬಾದದ ಪ್ರಾಂತ್ಯಗಳಲ್ಲಿಯೂ ಅವರ ಕಬ್ಬಿಣ – ಉಕ್ಕಿನ ಸರಕುಗಳು ಮಾರಾಟವಾಗತೊಡಗಿದ್ದವು. ಮನೆ ಕಟ್ಟುವ ಕಬ್ಬಿಣ ಸಾಮಾನುಗಳು, ಯಂತ್ರಗಳ ಕಿರುಕುಳ ಭಾಗಗಳು ಮುಂತಾದೆಲ್ಲ ಬಾಯ್‌ಖಳದಲ್ಲಿಯ ಅವರ ಫ್ಯಾಕ್ಟರಿಯಲ್ಲಿ ಈಗ ಸಿದ್ಧವಾಗುತ್ತಿದ್ದವು.

ಹಿಂದುಸ್ಥಾನದ ಹೊರಗೂ ತಮ್ಮ ಸರಕುಗಳನ್ನು ಕಳಿಸುವ ಮಹಾತ್ವಾಕಾಂಕ್ಷೆಯನ್ನು ಈಡೇರಿಸಲಾರದೆ ಮಾಧವರಾವ್ ಚಿತ್ರಳೆ, ತಮ್ಮ ೫೪ ವರ್ಷ

ದಲ್ಲಿಯೇ ಮುಂಬಯಿಯ ವೃತ್ತಪತ್ರಗಳಲ್ಲಿ (ಶೋಚನೀಯ ನಿಧನ) ಒಬಿಚ್ಯು ಅರಿ ಕಾಲಂ ತುಂಬಿದಾಗ ಅವರ ಜೀವಿಸಿದ್ದ ಒಬ್ಬನೇ ಮಗ ಶೇಖರಲಾಲಾ ಬಿ.ಎಸ್‌ಸಿ. ಯಲ್ಲೇ ಓದುತ್ತಿದ್ದನು. ಶೇಖರನ ನಂತರ ಹುಟ್ಟಿದ್ದ, ಮಾಧವ ರಾಯರ ಇನ್ನೊಬ್ಬ ಮಗ ಎಂಟು ವರ್ಷದವನಾದಾಗ ವಿಷಮಜ್ವರಕ್ಕೆ ತುತ್ತಾಗಿದ್ದ. ನಂತರ – ಶೇಖರನೇ ಮಾಧವರಾಯರಿಗೂ ಹೆಂಡತಿ ಗಿರಿಜಾ ತಾಯಿಗೂ ಕಣ್ಣಿನ ಗೊಂಬೆಯಾಗಿ ಬೆಳೆದಿದ್ದನು.

ತಂದೆಯ ಇಚ್ಛೆಯಂತೆ ಬಿ.ಎಸ್‌ಸಿ. ಮುಗಿಸಿ ಲಾ ಕಲಿಯಬೇಕೆಂದಿದ್ದ ಶೇಖರ ಹೇಗೆಹೇಗೋ ಬಿ.ಎಸ್‌ಸಿ. ಪರೀಕ್ಷೆ ಮುಗಿಸಿ ವ್ಯವಹಾರದಲ್ಲಿ ಬೀಳ ಬೇಕಾಯಿತು. ತಂದೆಯ ಕಾಲದಲ್ಲಿ ವ್ಯವಹಾರದ ಯಾವ ವಿಚಾರವನ್ನೂ ಹಚ್ಚಿಕೊಳ್ಳದೆ ಕಾರಿನಲ್ಲಿ ಸುತ್ತಾಡಿಕೊಂಡು ಇದ್ದನಾತ. ಆದರೂ ಮಾಧವ ರಾಯರ ಕೈಯಲ್ಲಿ ಪಳಗಿದ ಜನರಲ್ ಮ್ಯಾನೇಜರ ಶೇಂಗಣೇಕರರಿಂದಾಗಿ ಯಾವ ಅಚಾತುರ್ಯವೂ ನಡೆಯದೆ ವ್ಯವಹಾರ ಶೇಖರನ ಹೆಸರಿನಲ್ಲಿಯೇ ನಡೆಯಲಾರಂಭಿಸಿತು. ಫ್ಯಾಕ್ಟರಿಯಲ್ಲಿ ಸೆಟಿಲ್ ಲುಮ್ಲೆ ಅನ್ನುವ ಆಂಗ್ಲೋ ಇಂಡಿಯನ್ ಒಬ್ಬರು ೬೫೦ ರೂಪಾಯಿ ಪಗಾರಿನ ಮೇಲೆ ಮುಖ್ಯ ಫೋರ್‌ಮನ್ನರಾಗಿ ಫ್ಯಾಕ್ಟರಿ ನಡೆಸುತ್ತಿದ್ದರು. ಇವರಿಬ್ಬರ ಸಹಾಯದಿಂದ ಲಾಲಾ ವ್ಯವಹಾರ ಸಾಗಿಸುತ್ತಿದ್ದನು.

ಮುಂದೆ ಆರು ತಿಂಗಳಲ್ಲಿ ನರೆಗೂದಲಿನ ಶೇಂಗಣೇಕರನೂ ಮಾಧವ ರಾಯರ ಹಾದಿ ಹಿಡಿದಾಗ ಲಾಲಾ ಬಹಳಷ್ಟು ವ್ಯವಹಾರದಲ್ಲಿ ನುರಿತಿದ್ದನು. ಅವರಂಥ ಪ್ರಾಮಾಣಿಕ ಮ್ಯಾನೇಜರರು ಮತ್ತೆ ಸಿಗುವಂತಿರಲಿಲ್ಲ. ಲಾಲಾ ತಾನೇ ಎಲ್ಲವನ್ನೂ ವಹಿಸಿಕೊಂಡು ಹೆಡ್‌ಕ್ಲಾರ್ಕನ ಸಹಾಯದಿಂದ ವ್ಯವಹಾರ ನಡೆಸತೊಡಗಿದ್ದ. ಒಬ್ಬನಿಂದ ನೀಗದಷ್ಟು ಕೆಲಸ ಬೀಳುತ್ತಿತ್ತು. ಕಾಲೇಜಿನಲ್ಲಿ ಆಡುತ್ತ ಕುಣಿಯುತ್ತಿದ್ದವನಿಗೆ ಇದೊಂದು ಸೆರೆಯೇ ಆಗಿತ್ತು. ಆದರೆ ತಂದೆಯ ವ್ಯವಹಾರ ಬುದ್ಧಿ ಮಗನಲ್ಲಿಯೂ ಬಂದಿತ್ತು. ಅಂತೆಯೇ ಸಾಗಿಸಿದ್ದನು.

ರಮೇಶ ಚಿತ್ರಾಳೆ ಕಂಪನಿ ಸೇರಿ ಆಗಲೇ ಎರಡು ತಿಂಗಳಾಗಿತ್ತು. ಕಂಪನಿಯ ಆಫೀಸು ಎಲ್ಲ ಆಫೀಸುಗಳಂತೆ ಫೋರ್ಟಿನಲ್ಲಿ ಬ್ಯಾಲರ್ಡ್ ಇಸ್ಟೇಟಿ ನಲ್ಲಿದ್ದಿತು. ಶೇಂಗಣೇಕರ ತೀರಿಕೊಂಡಾಗ ಅಂಧೇರಿಯಲ್ಲಿದ್ದುಕೊಂಡು

ಪೋರ್ಟಿನಲ್ಲಿ ವ್ಯವಹಾರ ಸಾಗಿಸುವದು ತೀರ ಬೇಸರವಾಗಿ ಸುಖಮನಸ್ಸಿನ ಲಾಲಾ ತನ್ನ ಆಫೀಸು ಕಟ್ಟಡದ ಮೇಲೆ ಮೂರನೇ ಅಂತಸ್ತಿನಲ್ಲಿಯೇ ಒಂದು ದೊಡ್ಡ ಫ್ಲಾಟು ಹಿಡಿದಿದ್ದನು. ಐದು ಅಂತಸ್ತಿನ ಆ ಬಿಲ್ಡಿಂಗು ಒಂದು ಕಂಪನಿಯ ದಾಗಿತ್ತು. ಅದರಲ್ಲಿ ನೂರಕ್ಕೆ ಇಪ್ಪತ್ತರಷ್ಟು ಪಾಲು ಶೇಖರನದೂ ಸೇರಿತ್ತು. ಬಿಲ್ಡಿಂಗಿನ ಕೆಳಭಾಗದಲ್ಲಿಯೇ ಮೂರು ಕೋಣೆಗಳಲ್ಲಿ ಅವನ 'ಆಫೀಸ್.' ಒಂದು ತನಗೆ, ಒಂದು ಆಫೀಸಿನ ಕ್ಲಾರ್ಕು, ಟೈಪಿಸ್ಟು ಇವರಿಗೆಲ್ಲ, ಇನ್ನೊಂದು 'ರಿಕಾರ್ಡ್' ರೂಮು.

ರಮೇಶ ಬಂದಮೇಲೆ ಶೇಖರನ ಆಫೀಸು ಕೋಣೆ ಅವನದಾಯಿತು. ಮೊದಲಿನ ಎಂಟು ದಿನ ಶೇಖರ ತಾನೂ ಅವನೊಡನೆ ಕುಳಿತು ಅವನಿಗೆ ತನ್ನ ಗಿರಾಕಿಗಳು, ಕಂಟ್ರಾಕ್ಟುದಾರರು ಇವರ ವಿಷಯವನ್ನೆಲ್ಲ ಹೇಳುತ್ತಿದ್ದನು. ನಂತರ ದಿನಕ್ಕೆ ಒಂದೆರಡು ತಾಸು ಮಾತ್ರ ಆ ಕೋಣೆಗೆ ಬರುವ ಪರಿಪಾಠ ಇಟ್ಟು ಕೊಂಡು ಸಹಿಗಾಗಲಿ, ಏನಾದರೂ ಕೇಳುವದಕ್ಕಾಗಲಿ ಮೇಲೆಯೇ ಬಂದು ಬಿಡಲು ಹೇಳಿ ಮೇಲಿನ ತನ್ನ ಫ್ಲಾಟಿನಲ್ಲಿದ್ದು ಬಿಡುತ್ತಿದ್ದನು. ಗಿರಿಜಾತಾಯಿ ಯೊಡನೆಯೋ ಅಥವಾ – ಯಾವಾಗಲೂ ತಪ್ಪಿಸದಿದ್ದ ತನ್ನ ಕಾಲೇಜು ಮಿತ್ರರು ಇಲ್ಲವೇ ವ್ಯವಹಾರ ಬಂಧುಗಳೊಡನೆ ಅವನ ವೇಳೆಯೆಲ್ಲ ಕಳೆದು ಹೋಗುತ್ತಿತ್ತು. ರಮೇಶನಿಗೆ ತೊಂದರೆಯಾಗಬಾರದೆಂದು ಮೇಲಿನ ತನ್ನ ಕೋಣೆಗೂ ಕೆಳಗಿನ ಆಫೀಸು ಕೋಣೆಗೂ ಮಾತಾಡುವ ಸೌಕರ್ಯ ಮಾಡಿಸಿ ಕೊಂಡಿದ್ದನು.

ರಮೇಶ ನಿತ್ಯ ಚಹ ಕುಡಿದವನೇ ೮ ಘಂಟೆಗೆ ಆಫೀಸಿಗೆ ಬಂದುಬಿಡು ತ್ತಿದ್ದನು. 'ಬೆಳಿಗ್ಗೆ ಎಂಟರಿಂದ ಸಂಜೆ ಎಂಟರವರೆಗೆ ದುಡಿಯೋದು ಇದೆಂಥಾ ಆಫೀಸು' ಎಂದು ರಮೇಶನ ಅಕ್ಕ ಆಗಲೇ ಮೂಗುಮುರಿದಾಗಿತ್ತು. ಆದರೆ ರಮೇಶನಿಗೆ ಬೇಸರವಿರಲಿಲ್ಲ. ವೇಳೆ ಹೆಚ್ಚಾದರೂ ಕೆಲಸ ಹೆಚ್ಚಾಗುತ್ತಿರಲಿಲ್ಲ. ಗಳಿಗೆಗೊಂದುಸಾರೆ ಟ್ರೆಂಕ್ಸ ಎನ್ನುವ ಟೆಲಿಫೋನಿನ ಬಗ್ಗಾಗಿ ಬೇಗನೆ ಕಚೇರಿಗೆ ಹೋಗಬೇಕಾಗಿತ್ತಷ್ಟೆ. ಏನಾದರೂ ಆರ್ಡರಿನ ಬಗ್ಗೆ ಯಾರಾದರೂ ಏನಾದರೂ ಕೇಳಿದರೆ ಕಂಪನಿಯ ಒಡೆಯ ಶೇಖರನಿಗೆ ಈಗ ಫಕ್ಕನೆ ಉತ್ತರ ಹೇಳಲು ಬರುತ್ತಿರಲಿಲ್ಲ. ಅದರ ವಿಷಯವನ್ನೆಲ್ಲ ರಮೇಶನಿಂದ ಕೇಳಿ ತಿಳಿದು ಕೊಳ್ಳಬೇಕಾಗುತ್ತಿತ್ತು. ಅದಕ್ಕಾಗಿ ರಮೇಶನಿಗೆ ಬೆಳಿಗ್ಗೆಯೇ ಬಂದುಬಿಡಲು

ಹೇಳಿದ್ದನು. ಸಂಗಡ ಬೆಳಿಗ್ಗೆ ಒಮ್ಮೆ ಸಂಜೆಗೊಮ್ಮೆ ಬಾಯ್‌ಖಳಾದಲ್ಲಿಯ ಕಾರಖಾನೆಗೆ ಹೋಗಿ ಅಲ್ಲಿಯ ಫೋರ್‌ಮನ್‌ನಿಗೆ ಕೆಲಸದ ವಿಷಯ ಏನಾದರೂ ಹೇಳಿ ಕೆಲಸದಮೇಲೂ ಒಂದು ದೃಷ್ಟಿಯಿಟ್ಟು ಬರಬೇಕಾಗುತ್ತಿತ್ತು. ಮಧ್ಯಾಹ್ನದ ಊಟ ಫೋರ್ಟ್‌ದಲ್ಲಿಯ ಮಾಡರ್ನ್ ಹಿಂದೂ ಹೊಟೆಲ್‌ದಲ್ಲಿ. ಸಂಜೆ ಕುರ್ಲಾದಲ್ಲಿಯ ಮನೆ ಸೇರುವಾಗ ಏಳೂವರೆ–ಎಂಟಾಗುತಿದ್ದುದೂ ಇತ್ತು.

ಬ್ಯಾನರ್ಜಿಯವರಲ್ಲಿಯಂತೆ ಕರಡುಗೀಚಿ ಸೋಲಬೇಕಾದ ಪ್ರಸಂಗ ವಿರಲಿಲ್ಲದುದರಿಂದ ರಮೇಶನಲ್ಲಿ ಹುಮ್ಮಸವಿತ್ತು. ಆಫೀಸಿಗೆ ಯಾವಾಗಲೂ ಕಂಟ್ರಾಕ್ಟರರು, ವ್ಯಾಪಾರಿಗಳು, ಮನೆ ಕಟ್ಟಿಸುವವರು ಬಂದುಹೋಗುತ್ತಲೇ ಇದ್ದರು. ಅವರೆಲ್ಲರೊಡನೆ ಶೇಖರನ ಪತಿಯಿಂದ ರಮೇಶನೇ ಮಾತಾಡು ತ್ತಿದ್ದನು. ಕಾರಖಾನೆಯಲ್ಲಿಯೂ ಒಂದು ಸುತ್ತುಹಾಕಿ ಕೂಲಿಗಳೊಡನೆ ಹಾಸ್ಯಮಾಡಿ ಅವರನ್ನು ನಗಿಸಿ ಬರುತ್ತಿದ್ದ. ಇಲ್ಲಿಯವರೆಗೆ ತನ್ನ ಸುತ್ತುಸುತ್ತಿ ಕೊಂಡಿದ್ದ ಯಾವದೋ ಸೆರೆ ಈಗ ಬಿಚ್ಚಿಹೋದಂತೆ ರಮೇಶನಿಗೆ ಅನಿಸುತ್ತಿತ್ತು. ಆ ಎರಡು ತಿಂಗಳಲ್ಲಿ ಎಲ್ಲರ ವಿಶ್ವಾಸ ಗಳಿಸಿಕೊಂಡು ಎಲ್ಲರನ್ನೂ ನಗಿಸುತ್ತ ತನ್ನ ಕೆಲಸ ಸಾಗಿಸಿದ್ದನು.

೫

ರಮೇಶನನ್ನು ಕಂಡು ಹರ್ಷಿತನಾಗದಿದ್ದ ಒಬ್ಬನೇ ಒಬ್ಬನೆಂದರೆ ಶೇಖರನ ಸೆಕ್ರೆಟರಿಯಾಗಿದ್ದ ಬಾಳೂ ಘೋರ್ಪಡೆ. ಹಿಂದೆ ಮ್ಯಾನೇಜರ್ ಶಿಂಗಣೇತರ ತೀರಿಕೊಂಡಾಗ ಘೋರ್ಪಡೆ ತಾನೇ ಆ ಸ್ಥಳಕ್ಕೆ ಬರಬಹುದು ಎಂದು ಲೆಕ್ಕ ಹಾಕಿಕೊಂಡಿದ್ದನು. ಆದರೆ ಘೋರ್ಪಡೆಯ ಯೋಗ್ಯತೆಯನ್ನರಿತ ಶೇಖರ ತಾನೇ ಎಲ್ಲ ನೋಡಿಕೊಳ್ಳತೊಡಗಿದಾಗ ಆತನ ಬಯಕೆ ಬಯಲಾದರೂ ಇಂದಿಲ್ಲ ನಾಳೆ ತನಗೆ ಆ ಪಟ್ಟ ಬರದಿರುವದಿಲ್ಲ ಎಂದೇ ಅವನ ಎಣಿಕೆಯಾಗಿತ್ತು. ಈಗ ಯಾವದೋ 'ಕಾನಡಿ' ರಮೇಶ ಒಮ್ಮೆಲೇ ತನ್ನ ಮೇಲೆ ನಿಂತು ಕಾರಭಾರು ನಡೆಸುತ್ತಿರುವದನ್ನು ಕಂಡು ಆತನಿಗೆ ಸಹಜವಾಗಿಯೇ ಅವಮಾನವೆನ್ನಿಸಿತು. ಘೋರ್ಪಡೆ ನಿಜವಾಗಿಯೂ ಒಳ್ಳೆಯ ಮನುಷ್ಯ. ಮಧ್ಯವಯಸ್ಸಿನವನು. ಮನೆಯಲ್ಲಿ ಹೆಂಡತಿ, ಐದು ಮಕ್ಕಳ ಸಂಸಾರ ಸಾಗಿಸಿಕೊಂಡು ಇದ್ದುದರಲ್ಲಿಯೇ 'ಸಿಕ್ಕಿದ್ದು ಮಕ್ಕಳ ಪಾಲು' ಎಂದುಕೊಂಡಿದ್ದನು. ಆದರೆ ತೀರ ಆಲಸಿ, ಅಂಜುಬುರುಕ. 'ಒಳಗಿನಿಂದ 'ಸಾಹೇಬ' ಕರೆಯುತ್ತಾರೆ' ಎಂದು ಸಿಪಾಯಿ ಹೇಳಿಬಿಟ್ಟರೆ ಗವರ್ನರರ ಭೇಟಿಗೆ ಹೋಗುವವನಂತೆ ದಡಪಡಿಸಿಕೊಂಡು ಎದ್ದು ಕೋಟು ಟೊಪ್ಪಿಗೆ ಹಾಕಿಕೊಂಡು 'ಏತಕ್ಕಿರಬಹುದು ?' ಎಂದು ಒಮ್ಮೆ ತನ್ನ ಫೈಲುಗಳನ್ನೆಲ್ಲ ನೋಡಿಕೊಂಡು ಶೇಖರನ ಕೋಣೆಗೆ ಓಡಿಹೋಗಿ ದೇವರ ಮುಂದೆ ನಿಲ್ಲುವಂತೆ ನಿಲ್ಲುತ್ತಿದ್ದನು. ಶೇಖರ ಎಂದಾದರೂ ಸಿಟ್ಟಾಗಿ ನಾಲ್ಕು ಮಾತಾಡಿಬಿಟ್ಟರೆ ಆ ದಿನವೆಲ್ಲ ತನ್ನ ಕೆಲಸವೇ ಹೋಗುತ್ತಿರುವಂತೆ ಆಚೆ ಈಚೆಯವರೊಡನೆ

ಬಡಬಡಿಸುತ್ತಿದ್ದನು. 'ನೋಡ್ರಿ ಫಡ್ಕೆ, ಮುಖ್ಯ ನಶೀಬ ಕೆಟ್ಟ. ಮನೇಲಿ ಐದೈದು ಮಕ್ಕಳಿದಾರಲ್ರೀ. ಸಾಹೇಬರಿಗೆ ಬೇಕಾದೋರು ಯಾರಾದ್ರೂ ನಿಮಗೆ ಪರಿಚಯ ಇದೇನ್ರೀ?' ಎಂದು ತಾಸೆರಡು ತಾಸಿಗೊಮ್ಮೆ ಅರ್ಧ ತನ್ನಷ್ಟಕ್ಕೆ ಎನ್ನುವಂತೆ ಹೇಳುತ್ತಿರುತ್ತಿದ್ದನು.

ಆದರೂ ಘೋರ್ಪಡೆಯ ಪ್ರಾಮಾಣಿಕ ಸ್ವಭಾವಕ್ಕೆ ಈ 'ಕಾನಡಿ' ರಮೇಶ ಪರ್ಸನಲ್ ಅಸಿಸ್ಟಂಟ್ ಆಗಿ ಮುಂದೆ ಮ್ಯಾನೇಜರ್ ಆಗುವ ಸಂಭವದಲ್ಲಿರುವದು ಅವಮಾನವಾಗಿತ್ತು. ಹಾಗೆಂದು ಒಂದೆರಡುಸಾರೆ ವ್ಯಕ್ತಪಡಿಸಿಯೂ ಇದ್ದ. ತನ್ನ ಮೇಲಿದ್ದ ಘೋರ್ಪಡೆಯ ಅಸಮಾಧಾನದ ಕಾರಣ ರಮೇಶನಿಗೂ ತಿಳಿದಿತ್ತು. ಆದರೆ ಆತನೇನು ಮಾಡಬೇಕು? ಶಕ್ಯವಿದ್ದಷ್ಟು ಅವನೊಡನೆ ತನ್ನ ಸಂಬಂಧ ವನ್ನು ತಪ್ಪಿಸಿಕೊಳ್ಳುತ್ತಿದ್ದನಷ್ಟೆ. ಜನರ ನಡವಳಿಕೆಯಿಂದ ತನ್ನ ಮನಸ್ಸಿನ ಮೇಲೆ ಆಗುವ ಯಾವ ಪರಿಣಾಮವನ್ನೂ ಮೋರೆಯ ಮೇಲಾಗಲಿ, ಮಾತಿನ ಲ್ಲಾಗಲೀ ಸ್ವಲ್ಪವೂ ತೋರಿಸದೆ ಯಾವಾಗಲೂ ನಗುತ್ತ, ನಗಿಸುತ್ತ ಇರುವ ತನ್ನ ಸ್ವಭಾವದಿಂದಾಗಿ ಘೋರ್ಪಡೆಯೊಡನೆ ಆಗಬಹುದಾದ ಜಗಳವನ್ನೂ ರಮೇಶ ತಪ್ಪಿಸಿಕೊಂಡಿದ್ದನು. ಒಮ್ಮೊಮ್ಮೆ ಅವನ ವಿಷಯಕ್ಕೆ ಕರುಣೆಯೂ ಬರುತ್ತಿತ್ತು.

ಆದರೆ ಅವರಿಬ್ಬರ ಈ ವೈಮನಸ್ಸು ಹೋಗುವಂತೆ ಒಂದು ಸಂಗತಿ ನಡೆ ಯಿತು. ಒಂದು ದಿನ ಅದೆಲ್ಲಿಯೋ ಹೊರಗೆ ಹೋಗಿದ್ದ ಶೇಖರಲಾಲಾ ಸರಸರನೆ ಆಫೀಸಿಗೆ ಬಂದು ಒದರಿಕೊಂಡನು.

"ಮದನಲಾಲ ದಿನಶಾ ಕಂಪನಿಯ ಆರ್ಡರಿನ ಆಯವ್ಯಯಗಳನ್ನೆಲ್ಲ ಕ್ರಮಪಡಿಸಿ ಇನ್ನರ್ಧ ತಾಸಿನಲ್ಲಿ ತನ್ನಿ. ನಾನು ನನ್ನ ಕೋಣೆಯಲ್ಲಿರುತ್ತೇನೆ."

"ಅದನ್ನು ಆಗಲೇ ಅವರಿಗೆ ಕಳಿಸಾಗಿದೆಯಲ್ಲ."

"ನನಗೆ ಗೊತ್ತಿಲ್ಲವೆ? ನನಗದನ್ನು ನೋಡಬೇಕಾಗಿದೆ. ನಮ್ಮ ಫೈಲಿ ನಲ್ಲಿಯ ಕಾಪಿ ತನ್ನಿ."

ಎಂದು ನುಡಿದು ಶೇಖರ ತನ್ನ ಕೋಣೆಗೆ ನಡೆದುಬಿಟ್ಟನು. ರಮೇಶನೂ ಆಯವ್ಯಯವನ್ನು ತಯಾರಿಸಿದ್ದ ಘೋರ್ಪಡೆಯೂ ಒಬ್ಬರ ಮೋರೆಯನ್ನೊಬ್ಬರು ನೋಡಿಕೊಂಡರು.

ದಿನಶಾ ಕಂಪನಿ, ಕಾಜುಕೂಡಿಸುವ ಕೆಲವು ಚೌಕಟ್ಟುಗಳನ್ನು, ಸ್ಲ್ಯಾಡಿಂಗ್ ಶಟರ್ಸ್ಸು, ಕುರ್ಚಿಯ ಸ್ಟೀಲ್ ಶೀಟುಗಳನ್ನು ತಯಾರಿಸಲು ದೊಡ್ಡ

ಆರ್ಡರ್ ಕೊಟ್ಟಿತ್ತು. ರಮೇಶ, ಘೋರ್ಪಡೆ ಇಬ್ಬರೂ ಕುಳಿತು ಹಚ್ಚಿಟ್ಟಿದ್ದ ಎಕೌಂಟ್ ನೋಡಿದಾಗ ಸ್ಟೀಲ್ ಶೀಟುಗಳಿಗೆ ಟಿನ್ ಪ್ಲೇಟಿಂಗ್‌ಗಾಗಿ ರೂ. – ೨೫೫ ಎನ್ನುವದರ ಬದಲು ಟಿನ್ ಪೇಂಟಿಂಗ್ ರೂ – ೨೫೫. ಎಂದು ಬರೆದಿತ್ತು. ದಿನಶಾ ಕಂಪನಿಯವರು ಇದಕ್ಕಾಗಿಯೇ ಲಾಲಾನನ್ನು ಫೋನು ಮಾಡಿ ಕರೆಸಿಕೊಂಡು ಪ್ಲೇಟಿಂಗ್‌ಗಾಗಿ ಆರ್ಡರು ಕೊಟ್ಟಿರುವಾಗ ಬರೇ ಪೇಂಟ್ ಮಾಡಿ ಅಷ್ಟಕ್ಕಾಗಿ ೨೫೫ ರೂಪಾಯಿ ಚಾರ್ಜ್‌ಮಾಡಿದುದಕ್ಕೆ ಆ ಆರ್ಡರನ್ನು ಹಿಂದಿರುಗಿಸುವೆವಾಗಿ ಹೇಳಿದ್ದರು. ನಿಜವಾಗಿಯೆಂದರೆ ಶೀಟುಗಳಿಗೆ ಟಿನ್ ಪ್ಲೇಟಿಂಗ್‌ನ್ನೇ ಕೊಡಲಾಗಿತ್ತು.

ಘೋರ್ಪಡೆ ಲೆಕ್ಕ ಹಚ್ಚುವಾಗ ತಪ್ಪಿ ಅದನ್ನು ಪೇಂಟಿಂಗ್ ಅಂತ ಬರೆದಿದ್ದನು. ದಿನಶಾ ಕಂಪನಿಯವರು, ಚಿತ್ರಳೆ ಕಂಪನಿಯಿಂದ ಬಂದ ಸರಕುಗಳನ್ನು ಒಡೆಯದೆ ಹಾಗೆಯೇ ಕಾನಪುರದಲ್ಲಿಯ ತಮ್ಮ ಬ್ರಾಂಚ್ ಆಫೀಸಿನ ಕಟ್ಟಡಕ್ಕಾಗಿ ಕಳಿಸಿದ್ದರು. ಮತ್ತು ಘೋರ್ಪಡೆಯ ಬಿಲ್ ಶೀಟಿನ ಮೇಲಿನ 'ಟಿನ್ ಪೇಂಟಿಂಗ್' ನೋಡಿ ಲಾಲಾನನ್ನು ಕರೆಸಿಕೊಂಡು ಅವನ ಸರಕನ್ನು ಹಿಂದಿರಿಗಿಸುವೆವಾಗಿ ಹೇಳಿದ್ದರು.

ಆಯವ್ಯಯದ ಪಟ್ಟಿ ನೋಡಿದಾಗ ರಮೇಶ ಹೀಗೆ ಏನಾದರೂ ಆಗಿರಬೇಕು ಎಂದು ತರ್ಕಿಸಿದನು.

"ನಾವು ಕುರ್ಚಿಯ ಶೀಟುಗಳಿಗೆ ಟಿನ್ ಪ್ಲೇಟಿಂಗ್ ಕೊಟ್ಟಿದ್ದೆವಲ್ಲವೆ?"

"ಹೌದು ಹಾಗೆಯೇ ಆರ್ಡರು ಇತ್ತಲ್ಲ."

"ಮತ್ತೆ ಇಲ್ಲಿ ಪೇಂಟಿಂಗ್ – ೨೫೫ ರೂಪಾಯಿ ಎಂದು ಬರೆದಿದ್ದೀರಿ."

"ಹಾಂ! ಹಾಗಾದರೆ ಕಂಪನಿಯವರು ಇದಕ್ಕಾಗಿಯೇ ಏನೋ ತಕ್ರಾರು ತೆಗೆದಿರಬೇಕು. ನಾವು ಟಿನ್ ಪೇಂಟಿಂಗ್ ಮಾಡಿಸಿದ್ದೇ ಹೌದು ಎಂದು ಸಾಧಿಸಿ ೨೫೫ ರೂಪಾಯಿ ಕೊಡಲು ನಿರಾಕರಿಸಿರಬೇಕು. ಅಂದರೆ ೨೫೫ ರೂಪಾಯಿ ನಾನು ತುಂಬ ಬೇಕಾಗುವದು. ಮತ್ತೆ ಶೀಟುಗಳೇ ಬೇಡ ಎಂದರಂತೂ ೮೪೨ ರೂಪಾಯಿ ಎಂಟಾಣೆ ಸಹ ನಾನೇ ತುಂಬಬೇಕಾಗುವದು. ಬಹುಶಃ ನೌಕರಿಯನ್ನೂ ಬಿಡಬೇಕಾಗುವದು.

ಘೋರ್ಪಡೆಯ ಕಲ್ಪನೆ ಏನೇನೆಲ್ಲ ಲೆಕ್ಕಹಾಕ ತೊಡಗಿತ್ತು. ಅವನೇನು ಇನ್ನು ಅತ್ತೇಬಿಡುವನು ಅನ್ನಿಸಿತು ರಮೇಶನಿಗೆ.

"ನೋಡಿ, ಸಾರ್ ಸಾವಿರದ ತೊಂಬತ್ತೇಳು ರೂಪಾಯಿ ಎಂಟಾಣೆ ಎಲ್ಲಿಂದ ತರಲಿ? ಇನ್ಶ್ಯೂರಿನ ಹಣ ಬಂದದ್ದೆಲ್ಲ ತುಂಬಿದೆ ಅನ್ನಿ; ಮುಂದೆ ಸಂಸಾರ ಹೇಗೆ ನಡೆಸಲಿ? ಇಲ್ಲದಿದ್ದರಂತೂ ಮನೆಗೆ ಕಳಿಸುತ್ತಾರೆ. ಈ ವಯಸ್ಸಿನಲ್ಲಿ ನೌಕರಿ ಯಾರು ಕೊಡುತ್ತಾರೆ ಮಾಹುಲಿಕರ? (ರಮೇಶನ ಮಾಹುಲಿ ಅಡ್ಡ ಹೆಸರು ಊರ ಹೆಸರೆಂದು ತರ್ಕಿಸಿ ಘೋರ್ಪಡೆ ಅವನನ್ನು ಮಾಹುಲಿಕರ ಎಂದೇ ಕರೆಯುತ್ತಿದ್ದನು. ಅವನನ್ನು ಸರಿಪಡಿಸಲು ಹಿಂದೆ ರಮೇಶ ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾಗಿತ್ತು.) ಈ ಕಂಪನಿ ಸೇರಿ ಎಂಟು ವರ್ಷವಾಯಿತು. ಇಂಥಾ ಪ್ರಸಂಗ ಒಂದೂ ಬಂದಿರಲಿಲ್ಲ. ನನ್ನ ಪ್ರಾಮಾಣಿಕತನಕ್ಕೆ ದೇವರೇ ಸಾಕ್ಷಿ. ನೋಡಿ, ಅವಳು ಮೊನ್ನೆತಾನೇ ಆಸ್ಪತ್ರೇಲಿ ಆರನೇ ಬಾಣಂತಿತನ ಮುಗಿಸಿ ಮನೆಗೆ ಬಂದಿದಾಳೆ. ಕೂಸು ಅಂದರೆ ಅಪ್ಪಟ ಚಿನ್ನದ ಹಾಗೆ ಸಾರ್ – ಅಪರಂಜಿ. ಈ ತಿಂಗಳು ನನಗೆ ಬಡ್ತಿ ಆಗೋದಿತ್ತು. ಒಂದು ಸೀರೆ ತಂದು ಕೊಡುತ್ತೇನೆ ಎಂದಿದ್ದೆ. ಹಿರೇ ಸಾಹೇಬರು ಇದ್ದಿದ್ದರೆ ಕಾಲಿಗೆ ಬಿದ್ದಾದರೂ ತಪ್ಪಾತು ಸಾರ್, ಇದೊಂದು ಸಾರೆ ಕ್ಷಮಿಸಿ ಎಂದು ಹೇಳಿಕೊಳ್ಳುತ್ತಿದ್ದೆ. ತುಂಬ ಒಳ್ಳೆಯವರು ಮಾಹುಲಿಕರ ಅವರು. ಬೇಕಾದಷ್ಟು ಬ್ಲಾಕ್ ಮಾರ್ಕೆಟ್ ಮಾಡಿದರು. ಆದರೆ ನಮಗೆ ಕೆಲಸದವರಿಗೆ ಕಡಿಮೆ ಮಾಡಲಿಲ್ಲ. ಇವರಾದರೆ ಏರಿಕೆಯ ರಕ್ತ. ನಮ್ಮ ಸುಖ ದುಃಖ ಯಾಕೆ ಕೇಳಿಯಾರು? ನೋಡಿ, ಈ ಲೆಕ್ಕ ತಯಾರು ಮಾಡೋ ದಿನವೇ ಹೆಂಡತೀನ ಆಸ್ಪತ್ರೆಗೆ ಕಳಿಸಿದ್ದೆ. ಆ ದಿನ ರಜೆ ಕೇಳಿದ್ದಕ್ಕೆ ನಿಮ್ಮ ಮುಂದೇನೇ 'ಲೆಕ್ಕ ತಯಾರು ಮಾಡೋದಿದೆ ನಾಳೆ ತಗೋಬೇಕಾದರೆ' ಅಂದರಲ್ಲ. ಹೆಂಡತಿ ಅಲ್ಲಿ ಸಂಕಟಪಡುತ್ತಿರೋವಾಗ ಮನಸ್ಸಾದರೂ ಹೇಗೆ ಸರಿ ಇರುತ್ತದೆ ಹೇಳಿ. ತುಂಬ ಒಳ್ಳೆಯವಳು ಸರ್. ಇಲ್ಲೀವರೆಗೆ ಒಮ್ಮೆ ಹೀಂಗಂತ ಸಿಡಿದುಕೊಂಡಿಲ್ಲ. ನಿಮ್ಮನ್ನೂ ಒಂದಿನ ಚಹಕ್ಕೆ ಕರೀತೇನೆ. ನೀವೇ ನೋಡಿ. ನಾನು ಹೀಗೆ ಲೆಕ್ಕದಲ್ಲೆಲ್ಲ ತಪ್ಪು ಮಾಡುವವನಲ್ಲ. ಆದರೆ ಆ ದಿನ ತಲೇನೇ ಸರಿಯಾಗಿರಲಿಲ್ಲ. ನನ್ನ ನಶೀಬ, ನಶೀಬ!"

ಘೋರ್ಪಡೆ ಅಳುದನಿಯಲ್ಲಿ ಬಡಬಡಿಸುತ್ತಲೇ ಇದ್ದನು. ರಮೇಶ ವಿಚಾರ ಮಾಡತೊಡಗಿದನು. ನಿಜವಾಗಿ ಹೇಳಿಕೊಳ್ಳುವ ಸಂಗತಿಯೇನೂ ಆಗಿರಲಿಲ್ಲ. ದಿನಶಾ ಕಂಪನಿಯವರಿಗೆ ಆದದ್ದನ್ನೆಲ್ಲ ತಿಳಿಸಿ ಟಿನ್ ಪ್ಲೇಟಿಂಗ್

ಮಾಡಿಸಿದ್ದುದರ ಬಗ್ಗೆ ಖಾತ್ರಿ ಮಾಡಿಕೊಟ್ಟರೆ ಪ್ರಕರಣ ಬಗೆಹರಿಯುತ್ತಿತ್ತು. ಆದರೆ ಕಂಪನಿಯ ಗುಡ್‌ವಿಲ್ಲಿಗೆ ಧಕ್ಕೆ ಬಂದಂತಾಗಿತ್ತು. ಅದಕ್ಕಾಗಿಯೇ ಲಾಲಾಗೂ ಬಹಳ ಸಿಟ್ಟು ಬಂದಿರಬೇಕು.

"ನೀವೇನೂ ಗಾಬರಿಯಾಗಬೇಡಿ, ಘೋರ್ಪಡೆ. ನಾನೆಲ್ಲ, ಸರಿ ಪಡಿಸುತ್ತೇನೆ"

ಎಂದು ನುಡಿದು ರಮೇಶ ಫ್ಯಾಲು ಹಿಡಿದುಕೊಂಡು ಮೇಲೆ ಹೋದನು. ಲಾಲಾ ಸಿಗರೇಟು ಹೊತ್ತಿಸಿಕೊಂಡು ಆರಾಮ ಕುರ್ಚಿಯಲ್ಲಿ ಬಿದ್ದುಕೊಂಡು ರಮೇಶನ ಹಾದಿಯನ್ನೇ ನೋಡುತ್ತಿದ್ದನು. ಲೆಕ್ಕ ತೋರಿಸುತ್ತ ರಮೇಶ ಮೃದುವಾಗಿ ಹೇಳಿದನು.

"ಲೆಕ್ಕ ಒಪ್ಪಿಸುವಾಗ ಒಂದು ಸಣ್ಣ ತಪ್ಪಾಗಿಬಿಟ್ಟಿತು, ಸರ್. ಪ್ಲೇಟಿಂಗ್ ಅನ್ನುವದರ ಬದಲು ಪೇಂಟಿಂಗ್ ಅಂತ ಬರೆದುಬಿಟ್ಟಿದ್ದೆ. ಎರಡರದೂ ಅಂತರ ಪಕ್ಕನೆ ಹೊಳೆಯಲಿಲ್ಲ."

"ಆ ತಪ್ಪು ಯಾರದು? ಇದರಿಂದಾಗಿ ಕಂಪನಿಯ ಪ್ರೆಸ್ಟಿಜ್ ಎಷ್ಟು ಕಡಿಮೆಯಾಯಿತು. ಇದರ ಕಲ್ಪನೆ ಇದೆಯೆ ನಿಮಗೆ? ಇದು ನಿಮ್ಮ ಅಕ್ಷರವಲ್ಲ – ಘೋರ್ಪಡೆ ಬರೆದುದಲ್ಲವೆ?"

"ಹೌದು, ಆದರೆ ರಫ್ ಕಾಪಿಯಿಂದ ಅಂಕೆಗಳನ್ನು ಸರಿಪಡಿಸಿ ಹೇಳಿದವನು ನಾನು. ತಿಳಿಯದೆ ತಪ್ಪಾಗಿಬಿಟ್ಟಿತು. ನೀವು ಒಪ್ಪುವದಾದರೆ ನಾನೇ ದಿನಶಾ ಕಂಪನಿಗೆ ಹೋಗಿ ಅಲ್ಲಿಯ ಮ್ಯಾನೇಜರರಿಗೆ ಎಲ್ಲ ತಿಳಿಸಿ ಪ್ರಸಂಗ ಬಗೆಹರಿಸಿ ಬರುತ್ತೇನೆ."

"ಅದರಿಂದ ನಮ್ಮ ಗುಡ್‌ವಿಲ್ ಏನೂ ತಿರುಗಿ ಬರುವದಿಲ್ಲವಲ್ಲ."

"ಅವರಿಗೆ ಸರಿಯಾಗಿ ಮನಗಾಣಿಸಿಕೊಟ್ಟರೆ ಅದಕ್ಕೂ ಧಕ್ಕೆ ಬರಲಾರ ದೆನಿಸುತ್ತದೆ. ಪ್ರಯತ್ನವನ್ನಂತೂ ಮಾಡಬಹುದಲ್ಲ."

"ಹೋಗಿ ಬನ್ನಿ. ಆದರೆ ಇಂಥ ಪ್ರಸಂಗ ಪುನಃ ಬರದಂತೆ ನೋಡಿಕೊಳ್ಳಿ. ನಿಮ್ಮಿಂದ ಇದನ್ನು ಅಪೇಕ್ಷಿಸಿರಲಿಲ್ಲ."

ರಮೇಶ ಏನೂ ನುಡಿಯದೆ ಹೊರಗೆ ಬಂದುಬಿಟ್ಟನು. ಕೆಳಗೆ ಘೋರ್ಪಡೆ ಇವನ ಹಾದಿ ನೋಡುತ್ತ ತಲೆಯ ಮೇಲೆ ಕೈಹೊತ್ತು ಕುಳಿತಿದ್ದನು.

"ನಾನೆಲ್ಲ ಹೇಳಿದೆ. ಲಾಲಾ ಏನೂ ಹೇಳಲಿಲ್ಲ. ಎಲ್ಲ ಸರಿ ಆಯಿತು. ನಾನು ದಿನಶಾ ಕಂಪನಿಗೆ ಹೋಗಿ ಬರುತ್ತೇನೆ"

ಎಂದು ರಮೇಶ ಹೇಳಿದಾಗ ಅವನಿಗೆ ಹೋದ ಜೀವ ಬಂದಂತಾಯಿತು.

"ನೀವು ತುಂಬ ಉಪಕಾರ ಮಾಡಿದಿರಿ, ಸರ್. ನೀವಿಲ್ಲದಿದ್ದರೆ ಈವತ್ತು ಏನಾಗಿಬಿಡುತ್ತಿತ್ತೋ"

ಎಂದು ರಮೇಶನ ಎರಡೂ ಕೈಹಿಡಿದು ಆತ ನುಡಿದಾಗ ರಮೇಶನಿಗೆ ದೈನ್ಯ, ಕೃತಜ್ಞತೆಯೇ ಮೂರ್ತಿಯಾಗಿ ಬಂದಂತೆ ಅನಿಸಿತು. ಏನು ಜೀವನ ಇವನದು ಎಂದುಕೊಂಡನು. ಆ ಹೊತ್ತಿನಲ್ಲಿ ಲಾಲಾ ಹೇಳಿದ 'ನಿಮ್ಮಿಂದ ಇದನ್ನು ನಿರೀಕ್ಷಿಸಿರಲಿಲ್ಲ' ಎನ್ನುವ ಚುಚ್ಚುವ ಮಾತೂ ರಮೇಶನಿಗೆ ಸಿಹಿಯಾಗಿಯೇ ತೋರಿತು. ಆ ಹೊತ್ತಿನಿಂದ ಅವರಿಬ್ಬರಲ್ಲಿಯೂ ಹಿಂದಿನ ವೈಮನಸ್ಸಿನ ಪರದೆ ಸರಿದಂತಾಗಿತ್ತು.

೬

ಈ ಘಟನೆ ರಮೇಶನ ಜೀವನದಲ್ಲಿ ಇನ್ನೂ ಒಂದು ಅತಿ ದೊಡ್ಡ ಬದಲಾವಣೆ ಮಾಡಿತು. ದಿನಶಾ ಕಂಪನಿ ಮ್ಯಾನೇಜರರ ಮಾತನ್ನು ಫೋನಿನಲ್ಲಿ ಆಗಷ್ಟೇ ಕೇಳಿ ಶೇಖರಲಾಲಾ ಹಾಯಾಗಿ ಕುಳಿತಿದ್ದನು. ಮ್ಯಾನೇಜರರು ಕುರ್ಚಿಯ ಹಲಗೆಗಳಿಗೆ ಟಿನ್ ಪ್ಲೇಟಿಂಗ್ ಇದ್ದ ಬಗ್ಗೆ ತಮ್ಮ ಬ್ರಾಂಚ್ ಆಫೀಸಿನಿಂದ ಅದೇ ಆಗ ತಾರು ಬಂದಿತೆಂದೂ, ಶೇಖರಲಾಲರ ಅಸಿಸ್ಟಂಟ್ ರಮೇಶನು ತಮ್ಮಲ್ಲಿಗೆ ಬಂದು ಎಲ್ಲ ತಿಳಿಸಿದಾಗ ತಮಗೆ ತಮ್ಮ ಗಡಬಡೆಯ ವರ್ತನದ ಬಗ್ಗೆ ನಾಚಿಕೆಯಾಯಿತೆಂದೂ ಹೇಳಿ, ಈ ಸಣ್ಣ ಪ್ರಕರಣ ತಮ್ಮಿಬ್ಬರ ಸಂಬಂಧದಲ್ಲಿ ಯಾವ ಬಾಧೆಯನ್ನೂ ತರಲಾರದೆಂದು ಆಶಿಸಿದ್ದರು. ಲಾಲಾಗೆ ಆನಂದವಾಗಿತ್ತು. ಅಷ್ಟರಲ್ಲಿ ಘೋರ್ಪಡೆ ಅಂಜುತ್ತ ಒಳಗೆ ಬಂದನು.

" ಏನು ?"

ಲಾಲಾ ಕೇಳಿದನು.

" ನಜರ ಚೂಕಿನಿಂದ ತಪ್ಪಾಯಿತು ಸರ್. ಇನ್ನು ಹೀಗೆ ಆಗದ ಹಾಗೆ ನೋಡಿಕೊಳ್ಳುತ್ತೇನೆ "

ಎನ್ನುತ್ತ ಘೋರ್ಪಡೆ ಕೈಮುಗಿದನು. ರಮೇಶನಿಂದ 'ಸಾಹೇಬ'ರು ಸಿಟ್ಟಾಗಿಲ್ಲವೆಂಬುದನ್ನು ಕೇಳಿ ಅವನಿಗೆ ಬಹಳಷ್ಟು ಧೈರ್ಯ ಬಂದಿತ್ತು. ಆದರೆ ತನ್ನ ಅಜಾಗರೂಕತೆಯಿಂದಾಗಿ ತನ್ನನ್ನು ಇನ್ನಷ್ಟು ನಿರುಪಯೋಗಿ ಎಂದು

ಸಾಹೇಬರು ತಿಳಿಯಬಾರದೆಂದು ಧೈರ್ಯಮಾಡಿ ತಾನೇ ಕ್ಷಮೆ ಬೇಡಲು ಬಂದಿದ್ದನು.

"ಮೊದಲಿನಿಂದಲೂ ಲೆಕ್ಕ ಇಡುತ್ತ ಬಂದವರು ನೀವು. ಇನ್ನೂ ಪೇಂಟಿಂಗಿಗೆ ಪ್ಲೇಟಿಂಗಿಗೆ ಇರುವ ಅಂತರ ತಿಳೀಲಿಲ್ಲೇನು? ಮಾಹುಲಿ ಓದಲು ತಪ್ಪಿದರಂತ ನೀವೇನೂ ತಪ್ಪಬೇಕಾಗಿರಲಿಲ್ಲ."

ಘೋರ್ಪಡೆಗೆ ರಮೇಶನು ಓದಿ ಹೇಳಿದ ಈ ಹೊಸ ಸಂಗತಿಯೇನೂ ಅರ್ಥವಾಗಲಿಲ್ಲ. ತನ್ನ ಮಾತನ್ನು ಮುಂದುವರಿಸಿದನು.

"ಆ ದಿನ ಹೆಂಡತಿಯನ್ನು ಆಸ್ಪತ್ರೆಗೆ ಕಳಿಸಿದ್ದೆ. ಆಫೀಸಿಗೆ ಬಂದವನೇ ನಿಮ್ಮ ಮಾತಿನಂತೆ ಲೆಕ್ಕ ಬರೆಯಲು ಕುಳಿತೆ. ಮೊದಲೆಲ್ಲ ಯಾವಾಗಲೂ ಒಂದು ರಫ್ ಕಾಪಿ ತಯಾರು ಮಾಡಿಕೊಂಡು ಅದರಿಂದ ಫೈನಲ್ ಎಕೌಂಟ್ ಬರೆಯುತ್ತಿದ್ದೆ. ಆ ದಿನ ಫೈಲಿನಿಂದ ಹಾಗೇನೇ ಅಂಕೆಗಳನ್ನು ಜೋಡಿಸಿಕೊಂಡು ಶೀಟು ತಯಾರು ಮಾಡಿದೆ. ಅವಸರದಲ್ಲಿ ತಪ್ಪಾಗಿಹೋಯಿತು."

"ಯಾಕೆ, ರಮೇಶ ಓದಿ ಹೇಳಲಿಲ್ಲವೆ?"

"ಇಲ್ಲ, ಅವರು ಫ್ಯಾಕ್ಟರಿಗೆ ಹೋಗಿದ್ದರು. ನೀವು ಹನ್ನೆರಡರೊಳಗೆ ತಯಾರಾಗಬೇಕು ಅಂದಿರಲ್ಲ."

"ಆಯಿತು ನೀವು ಹೋಗಿ. ನಿಮ್ಮ ಪತ್ನಿ ಚನ್ನಾಗಿದ್ದಾರಲ್ಲವೆ?"

"ಇದ್ದಾಳೆ ಸರ್, ಹೆಣ್ಣು ಕೂಸು."

ಮತ್ತೆರಡು ಸಾರೆ ಕೈಮುಗಿದು ಘೋರ್ಪಡೆ ಕ್ರಾಸ್‌ವರ್ಡ್ ಬಹುಮಾನ ಸಿಕ್ಕವರಿಗಿಂತ ಸಂತೋಷದಿಂದ ತನ್ನ ಕುರ್ಚಿಯತ್ತ ನಡೆದನು. ಲಾಲಾಗೆ ನಗೆಬಂದಿತು. ಈ ಪ್ರಾಣಿ ದಡ್ಡನಾದರೂ ತನಗೆ ಹೇಳಿದಷ್ಟು ಕೆಲಸವನ್ನು ಚಾಚೂ ತಪ್ಪದೆ ಮಾಡುತ್ತಾನೆಂಬುದು ಅವನಿಗೂ ಗೊತ್ತಿದ್ದಿತ್ತು. ಮುಂಬಯಿಯ ಎಲ್ಲ ವ್ಯವಹಾರಿಗಳಿಗಿಂತ ಕೈಕೆಳಗಿನ ಕೆಲಸಗಾರರ ಬಗ್ಗೆ ತಾನು ಸುದೈವಿ ಎಂದು ಆತನಿಗೆ ಬಹಳ ಸಂತೋಷ. ಈಗ ರಮೇಶ ಬಂದಮೇಲಂತೂ ಕೂಲಿಕಾರರಲ್ಲಿ ಹುಟ್ಟುತ್ತಿದ್ದ ಕಿರುಕುಳ ತಂಟೆಯೂ ಇಲ್ಲದಂತಾಗಿತ್ತು. ಒಂದು ದಿನ ಹೀಗೆಯೇ ಲಾಲಾ ಫ್ಯಾಕ್ಟರಿಗೆ ಹೋದಾಗ, ಕೂಲಿಕಾರರೊಡನೆ ಕೂಡಿ ರಮೇಶನೂ ಕಬ್ಬಿಣದ ಒಂದು ದೊಡ್ಡ ಕಂಬಿಯನ್ನು ಎತ್ತುವದರಲ್ಲಿ ತಲ್ಲೀನನಾಗಿದ್ದನು. 'ನೀವೇಕೆ ಕೈಹಚ್ಚುತ್ತೀರಿ ಇದಕ್ಕೆಲ್ಲ' ಎಂದು ಕೇಳಿದ್ದಕ್ಕೆ 'ಏನೋ

ಇವರ ಕೆಲಸ ನೋಡಿ ಹುರುಪು ಬಂದುಬಿಟ್ಟಿತು, ಸರ್. ಊರಿನಲ್ಲಿದ್ದಾಗ ಇಂಥ ಚಿಕ್ಕಪುಟ್ಟ ಕೆಲಸ ನೋಡಿ ಮಾಡಿ ಅಭ್ಯಾಸ' ಎಂದು ಏನೋ ತಪ್ಪು ಮಾಡಿದವರಂತೆ ಹಾರಿಸಿ ನುಡಿದು ನಕ್ಕಿದ್ದನು ರಮೇಶ. ಈಗ ಸುಳ್ಳು ಹೇಳಿ ಘೋರ್ಪಡೆಯ ತಪ್ಪನ್ನು ತನ್ನ ಮೇಲೆ ಹೊರಿಸಿಕೊಂಡು ಚಕಾರ ಮಾತಾಡದೆ ಇದ್ದುಬಿಟ್ಟದ್ದನು! ಶೇಖರನಿಗೆ ರಮೇಶನಲ್ಲಿ ಇನ್ನಿಲ್ಲದ ವಿಶ್ವಾಸ ಉತ್ಪನ್ನವಾಯಿತು. 'ಆಯಿಃ' ಎಂದು ಗಿರಿಜಾತಾಯಿಯನ್ನು ಒದರಿದನು.

"ಏನು?" ಎನ್ನುತ್ತ ಶೇಖರನ ತಾಯಿ ಒಳಗೆ ಬಂದಳು. ೫೫ ವರ್ಷಗಳಾದರೂ ಇನ್ನು ಸ್ಥೂಲವಾಗಿದ್ದ ದೇಹ. ಒಂದು ಕಾಲಕ್ಕೆ ಸುಂದರಳಾಗಿಯೇ ಇದ್ದಳೆನ್ನುವದನ್ನು ತೋರಿಸುವ ಮಾಟವಾದ ಮೋರೆ ಈಗ ನಿರಿಗೊಳ್ಳತೊಡಗಿತ್ತು. ತಲೆಯ ಮೇಲೆ ನಾಪಿತನ ಕೈಗೆ ತುತ್ತಾಗದಿದ್ದ ಕೂದಲುಗಳಲ್ಲಿ ಅಲ್ಲೊಂದು ಇಲ್ಲೊಂದು ಬಿಳಿ ಕೂದಲು ಕಾಣಿಸಿಕೊಂಡಿತ್ತು. ಪ್ರೇಮಲವಾಗಿದ್ದರೂ ನಿಷ್ಟುರವಾಗಲೂ ಬಹುದು ಎನ್ನುವ ಸ್ಥಿರವಾದ ಕಣ್ಣುಗಳು. ಶೇಖರ ಯಾವಾಗಲೂ ಈ ತಾಯಿಗೆ ಅಂಜುತ್ತಿದ್ದನು. ಅಥ್ವೆರ ಅಂಜುತ್ತಿರುವೆನೆಂದು ತೋರಿಸುತ್ತಿದ್ದನು.

"ನಮ್ಮ ಮ್ಯಾನೇಜರ ರಮೇಶನ ವಿಷಯಕ್ಕೆ ಏನೋ ವಿಚಾರ ಬಂದು ನಿನ್ನ ಕೇಳೋಣ ಎಂದುಕೊಂಡೆ. ಅಲ್ಲದ ಸಲ್ಲದ ಹೊತ್ತಿನಲ್ಲೆಲ್ಲ ಯಾರಾದರೂ ಏನಾದರೂ ಫೋನಿನಲ್ಲಿ ಕೇಳುತ್ತಿರುತ್ತಾರೆ. ನಿನ್ನೆ ರಾತ್ರಿ ಅದು ಯಾವದೋ ಹೈಸ್ಕೂಲ್ ಪ್ರಿನ್ಸಿಪಾಲರಂತೆ. ನಮ್ಮಲ್ಲಿ ಏನೋ ಆರ್ಡರು ಕೊಟ್ಟದ್ದರಂತೆ. ಅದೇನೋ ಉಕ್ಕಿನ ಸರಳುಗಳು ೮ ಫೂಟು ೬॥ ಇಂಚಿನ ಬದಲು ೭। ಇಂಚು ಇಡಬೇಕಾಗಿ ಏನೇನೋ ಹೇಳುತ್ತಿದ್ದರು. ಅವರದೊಂದು ಆರ್ಡರು ನಮ್ಮಲ್ಲಿದೆ ಅನ್ನುವದೂ ನನಗೆ ಗೊತ್ತಿದ್ದಿಲ್ಲ. ಅದಕ್ಕೆ ಈ ರಮೇಶನನ್ನೇ ನಮ್ಮನೇಲಿ ಇರಲು ಏಕೆ ಹೇಳಬಾರದು? ಒಂದಲ್ಲ ನಾಲ್ಕು ಖೋಲಿಗಳು ತೆರವಾಗಿವೆಯಲ್ಲ. ಅವನಿಗೂ ಇನ್ನೂ ಲಗ್ನವಾಗಿಲ್ಲ. ಹತ್ತಿರದಲ್ಲಿಯೇ ಯಾವದೋ ಹೋಟೆಲದಲ್ಲಿ ಮದ್ಯಾಹ್ನ ಊಟಮಾಡುತ್ತಿದ್ದಾನೆ. ಈಗ ಎರಡು ಹೊತ್ತೂ ಹೋಗುತ್ತಾನೆ. ಅವನಿಗೂ ತೊಂದರೆ ತಪ್ಪಿದಂತಾಯಿತು. ಕುರ್ಲಾಕ್ಕೆ ಹೋಗಿ ಬರಬೇಕಾಗಿಲ್ಲ."

ಗಿರಿಜಾತಾಯಿಗೂ ಯಾಕಾಗಬಾರದೆನ್ನಿಸಿತು. ಈ ಮೊದಲಾಗಲೇ ರಮೇಶನ ಪರಿಚಯ ಆಕೆಗೂ ಬಹಳ ಆಗಿತ್ತು. ತನ್ನ ನಿಃಸಂಕೋಚ ವೃತ್ತಿ,

ತೆರೆದ ಹೃದಯದಿಂದ ಎಲ್ಲರನ್ನೂ ಸೆಳೆದಂತೆ ಆಕೆಯನ್ನೂ ಸೆಳೆದಿದ್ದನಾತ. ಆಕೆಯ ಮುಂದೆ ಶೇಖರನ ವಿಷಯವಾಗಿ ರಮೇಶನಾದರೂ ತುಂಬ ಮಾತಾಡುತ್ತಿದ್ದನು. ಆಕೆ ಹೇಳುವದನ್ನೂ ಬಹಳ ಕುತೂಹಲವಿದ್ದವರಂತೆ ಕೇಳುತ್ತಿದ್ದನು. ತನ್ನ ಒಬ್ಬನೇ ಮಗನನ್ನು ಮೆಚ್ಚುವ ಯಾವ ಮನುಷ್ಯ ತಾಯಿಗೆ ಒಳ್ಳೆಯವನೆನಿಸಲಿಕ್ಕಿಲ್ಲ? ಶೇಖರನ ಮಾತಿಗೆ ಹೂಂ ಎನ್ನುತ್ತ ಈಗಲೇ ಕೇಳಿನೋಡು ಎಂದೂ ಸೂಚಿಸಿದಳು.

ಶೇಖರನ ಫೋನಿಗೆ ಉತ್ತರವಾಗಿ ಮೇಲೆ ಬಂದು ಗಿರಿಜಾತಾಯಿಯೂ ಒಳಗಿರುವದನ್ನು ನೋಡಿ ರಮೇಶ ಬಾಗಿಲಿನಿಂದಲೇ ಕೇಳಿದನು—

"ನಾನು ಒಳಗೆ ಬರಲೆ?"

"ಬನ್ನಿ. ಕುಳಿತುಕೊಳ್ಳಿ. ನೀವು ಹೇಳಿದ ಹಾಗೆ ದಿನಶಾ ಕಂಪನಿಗೆ ಬಿಲ್ಲ ತಿನ್ನಿಸಿಯೇ ಬಂದಿರಿ. ಮುಂದಿನ ಆರ್ಡರಿನ ವಿಷಯವಾಗಿಯೂ ಏನೋ ಹೇಳುತ್ತಿದ್ದರು."

"ಮ್ಯಾನೇಜರರು ಬಹಳ ಒಳ್ಳೆಯ ಮನುಷ್ಯರು. ಅವರಿಗೆ ಕಬ್ಬಿಣದ ಕೆಲವು ಆಲ್ಮಿರಾ ಬಾಗಿಲುಗಳು, ಸ್ಪ್ರಿಂಗುಗಳು ಬೇಕಾಗಿವೆಯಂತೆ. ಇನ್ನು ಒಂದೆರಡು ದಿನಗಳಲ್ಲಿಯೇ ಬಂದು ನಿಮ್ಮನ್ನು ಕಾಣುವದಾಗಿ ಹೇಳಿದರು."

"ಮೊದಲು ಸ್ವತಃ ದಿನಶಾನೇ ಇದ್ದಾಗ ನಮ್ಮ ಕಂಪನಿ ಅವರಿಗೆ ಕಣ್ಣಿಗೇ ಕಾಣುತ್ತಿರಲಿಲ್ಲ. ಈಗೀಗ ನಮ್ಮಲ್ಲಿಯೇ ವ್ಯವಹಾರ ಇಡುತ್ತ ಬಂದಿದಾರೆ."

"ಮ್ಯಾನೇಜರರು ತುಂಬ ಉತ್ಸಾಹಿಗಳು. ನೀವು ಏಕ್ಸ್‌ಪೋರ್ಟ್ ಇಂಪೋರ್ಟ್ ಬಿಸಿನೆಸ್ಸು ಏಕೆ ಮಾಡುವದಿಲ್ಲ ಎಂದು ಕೇಳಿದರು. ಸರಕಾರದವರು ಈಗ ಬಹಳಷ್ಟು ಆತಂಕಗಳನ್ನು ತೆಗೆದಿದ್ದಾರಲ್ಲ. ಬೇಕಾದರೆ ತಾವು ಪಾಲುಗಾರರಾಗಲಿಕ್ಕೂ ಸಿದ್ಧರಾಗಿರುವದಾಗಿ ಹೇಳಿದರು."

"ನನಗೆ ಮೊದಲಿನಿಂದಲೂ ಇಚ್ಛೆಯಿತ್ತು. ಆದರೆ ಈ ಆಯಿ ಕೇಳಬೇಕಲ್ಲ"

ಶೇಖರ ದೂರು ಹೇಳುವವರಂತೆ ಗಿರಿಜಾತಾಯಿಯನ್ನು ನೋಡಿದನು.

"ನೋಡಿ ರಮೇಶ, – ಇದ್ದ ಕೆಲಸವೇ ನೀಗುವದಿಲ್ಲ ಎಂದು ಗೊಣಗುತ್ತಿರುತ್ತಾನೆ. ಈಗ ನೀವು ಇದ್ದೀರಿ ಅಂತ ತಾಸೆರಡು ತಾಸಾದರೂ ಉಸ್ಸಪ್ಪಾ ಎಂದು ಮನೇಲಿ ಕೂಡ್ರುತ್ತಾನೆ. ಸುಮ್ಮನೆ ಇಲ್ಲದ್ದು ಹಚ್ಚಿಕೊಂಡು ಯಾರ

ಮೇಲಾದರೂ ನಂಬಿಕೆಯಿಟ್ಟು ಒಂದಕ್ಕೆ ಒಂದಾಗಬಾರದಲ್ಲ. ಎಲ್ಲವರೂ ನಿಮ್ಮ ಹಾಗೆ ಎಲ್ಲಿ ಸಿಗುತ್ತಾರೆ?"

"ನೋಡಿ ಮಾಹುಲಿ, ನಿಮ್ಮ ಮುಂದೆಲ್ಲ ನನ್ನನ್ನು ಅಯೋಗ್ಯ ಎನ್ನುತ್ತಾಳೆ."

"ಎಷ್ಟೆಂದರೂ, ನೀವು ಎರಡು ತಿಂಗಳಲ್ಲಿ ಕಲಿತುಕೊಂಡ ಬಿಸಿನೆಸ್ಸನ್ನ ಎರಡು ವರ್ಷವಾದರೂ ಶೇಖರಗೆ ಪಡೆಯಲಾಗಲಿಲ್ಲ"

ಗಿರಿಜಾತಾಯಿ ಹೇಳಿದಳು.

"ನಿಮ್ಮ ಆಶೀರ್ವಾದ ಅಮ್ಮ. ನೋಡಿ ನೀವು ನನಗೆ ದೂರದ ಕಾಕೂ ಆಗಬೇಕು. 'ನೀವು, ನೀವು' ಅನ್ನಬೇಡಿ; ನಿಮ್ಮ ಮಗನಿಗಿಂತ ಚಿಕ್ಕವನು ನಾನು."

ಗಿರಿಜಾತಾಯಿ ಕ್ಷಣಕಾಲ ರಮೇಶನನ್ನು ನೋಡಿ ಎದುರಿನ ಫೋಟೋ ನೋಡಿದರು. ಅಳಿದ ತಮ್ಮ ಮಗನನ್ನು, – ಶೇಖರನ ತಮ್ಮನನ್ನು – ತೊಡೆಯ ಮೇಲೆ ಕುಳ್ಳಿರಿಸಿಕೊಂಡು ತೆಗೆದ ಚಿತ್ರವದು. ಹೌದು, ಅವನು ಇದ್ದಿದ್ದರೆ ಇಂದು ಸಾಧಾರಣ ರಮೇಶನಷ್ಟೇ ಆಗಿರುತ್ತಿದ್ದನು. ತಮ್ಮ ಕಣ್ಣು ತೇವವಾಗುತ್ತಿದ್ದುದನ್ನು ಪ್ರಯತ್ನದಿಂದ ತಡೆದು ನುಡಿದರು—

"ಹೌದಪ್ಪಾ, ನನಗೂ ಹಾಗೇ ಅನ್ನಿಸುತ್ತಿತ್ತು. ಆದರೆ ಶಿಷ್ಟಾಚಾರಕ್ಕೆ ಅಂತ ಹಾಗೆ ಕರೆಯುತ್ತಿದ್ದೆ. ಈಗ ಶೇಖರನೂ ಅದನ್ನೇ ಅನ್ನುತ್ತಿದ್ದನು. ನಿನಗೆ ತೊಂದರೆಯಾಗದಿದ್ದರೆ ಇಲ್ಲಿಯೇ ಇದ್ದುಬಿಡು. ಬೇಕಷ್ಟು ಖೋಲಿಗಳಿವೆ."

ರಮೇಶ ಇದನ್ನು ಅಪೇಕ್ಷಿಸಿರಲಿಲ್ಲ. ಔಪಚಾರಿಕವಾಗಿ ಹೇಳುತ್ತಿರಬೇಕು ಎಂದುಕೊಂಡನು. ಕೃತಜ್ಞತೆ ವ್ಯಕ್ತಪಡಿಸಿ ಹೇಳಿದನು,

"ನಿಮಗೇಕೆ ತೊಂದರೆ ಕಾಕಿ? ದಿನವೆಲ್ಲ ನಿಮಗಿಂತ ಬಹಳ ದೂರವೇನೂ ಇರುವದಿಲ್ಲವಲ್ಲ. ಲಿಫ್ಟ್‌ದಿಂದ ಅರ್ಧ ನಿಮಿಷ."

"ಅದೆಲ್ಲ ನಡೆಯೋದಿಲ್ಲ! ನಿಮಗೆ ಶಿಕ್ಷೆಯಾಗಬೇಕಾಗಿದೆ. ನಾಳೆಯಿಂದ ನೀವು ಆಚೆಯ ಫೋನ್ ರೂಮಿನಲ್ಲಿಯೇ ಇರಬೇಕು. ನೀವು ದೊಡ್ಡ ತಪ್ಪು ಮಾಡಿದ್ದೀರಿ – ಸುಳ್ಳು ವರದಿ ಒಪ್ಪಿಸಿದ್ದೀರಿ"

ಎಂದ ಶೇಖರ.

"ಸುಳ್ಳು ವರದಿ?"

ರಮೇಶನಿಗೆ ಅರ್ಥವಾಗಲಿಲ್ಲ.

"ಹುಂ, ಸುಳ್ಳು ವರದಿ. ಘೋರ್ಪಡೆಗೆ ಲೆಕ್ಕದ ಶೀಟು ಓದಿ ಹೇಳಿದೆ ಎಂದಿರಲ್ಲ? ಆ ಹೊತ್ತಿಗೆ ನೀವು ಫ್ಯಾಕ್ಟರಿಗೆ ಹೋಗಿದ್ದಿರಿ."

ರಮೇಶನ ಮೋರೆ ಪೆಚ್ಚಾಯಿತು.

"ಕ್ಷಮಿಸಿ, ಘೋರ್ಪಡೆ ಬಹಳ ಅಂಜಿದ್ದನು, ನೀವೇನಾದರೂ ಮಾಡುತ್ತೀರಿ ಅಂತ. ಅದಕ್ಕೆ ತಪ್ಪನ್ನು ಇಬ್ಬರೂ ಹಂಚಿಕೊಳ್ಳೋಣಾ ಅಂತ...."

"ಊಹ್ನು ಸುಳ್ಳು ಸುಳ್ಳೇ"

ನಗುತ್ತ ಲಾಲಾ ಹೇಳಿದನು.

"ಮತ್ತೆ ಅದಕ್ಕೆ ಶಿಕ್ಷೆಯಾಗಲೇಬೇಕು. ಐದು ನಿಮಿಷಕ್ಕೊಮ್ಮೆ ಒದರುವ ಫೋನ್ ಘಂಟೆಯನ್ನು ನೀವು ಕೇಳುತ್ತಿರಲೇಬೇಕು, ಇದಕ್ಕೆ ಉತ್ತರ ಕೊಡಲೇ ಬೇಕು. 'ನಿಮ್ಮ ವುಲನ್ ಸ್ಯೂಟ್ ಸಿದ್ಧವಾಗಿದೆ' ಎಂದು ಸೂಚನೆ ಕೊಡುವ ಡಾಯನಾ ಕ್ಲೀನರ್ಸ್ ಲಾಂಡ್ರಿ ಮನುಷ್ಯನಿಂದ ಹಿಡಿದು, 'ಈವತ್ತು ಐದೂ ವರೆಗೆ ಬೆಂಟಿಕ್ ಕ್ಲಬ್ಬಿಗೂ ಅಯರ್ವಿನ್ ಕ್ಲಬ್ಬಿಗೂ ಮ್ಯಾಚ್ ಇದೆ' ಎಂದು ಒದರುವ ಕ್ಲಬ್ ಸೆಕ್ರೆಟರಿಯವರೆಗೆ, 'ನಮ್ಮ ಅಲ್ಮಿರಾ ಮೊಳೆಗಳು ತಯಾರಾದವೆ?' ಎಂದು ಕೇಳುವ ಆಚೆ ಮನೆಯ ಕಾರ್ಪೆಂಟರ್ ಸ್ಕೂಲ್ ಮಾಸ್ತರ್‌ರಿಂದ ಹಿಡಿದು 'ನಮಗೆ ಸಿ ಬ್ರಾಂಡ್ ೯ನೇ ನಂಬರಿನ ಅಟೋಮೆಟಿಕ್ ಫೋಲ್ಡಿಂಗ್ ಬಾಗಿಲು ಕದಗಳು ಬೇಕು' ಅನ್ನುವ ಹ್ಯಾವ್ಲೇ ಕಂಪನಿಯ ಡಾಯರೆಕ್ಟರ್‌ರವರೆಗೂ ಎಲ್ಲರಿಗೂ ಉತ್ತರ ಕೊಡುತ್ತಿರಬೇಕು."

"ಹೌದು ರಮೇಶ"

ಏನೂ ತಿಳಿಯದವನಂತೆ ಮಂಕಾಗಿ ಕುಳಿತಿರುವದನ್ನು ನೋಡಿ ಗಿರಿಜಾ ತಾಯಿ ನುಡಿದಳು.

"ನಾನೂ ಶೇಖರ ಇದೇ ಈಗ ಮಾತಾಡುತ್ತಿದ್ದೆವು. ಇಲ್ಲಿ ಹೇಗೂ ಬೇಕಾದಷ್ಟು ಖೋಲಿಗಳಿವೆ. ಒಂದನ್ನು ನಿನ್ನ ಆಫೀಸು ಕೋಣೆ ಇನ್ನೊಂದನ್ನು ಮಲಗುವ ಕೋಣೆಯನ್ನಾಗಿ ಮಾಡಿಕೊಂಡುಬಿಡು. ಶೇಖರನಿಗೂ ತೊಂದರೆ ತಪ್ಪುತ್ತದೆ. ನಿನಗೂ ತಿರುಗಾಟದ ಬೇಸರ ಇಲ್ಲದಂತಾಯಿತು. ಹೇಗೂ ಇನ್ನೂ ಮನೆ ಮಾಡಿಲ್ಲವಲ್ಲ."

"ಊಹುಂ, ಮೊದಲು ಈ ಮನೆಗೆ ನನ್ನ ವೈನಿ ಬರಬೇಕಲ್ಲ. ನಂತರ ನಮ್ಮ ಮಾತು"

– ರಮೇಶ ಹೇಳಿದನು.

"ನಾನು ಯಾವಾಗಲೇ ಹೇಳಿದ್ದೆ. ಆದರೆ ಈತನೊಂದು ಕೇಳಬೇಕಲ್ಲ. ನಾನಂತೂ ಸೊಸೇನ ನೋಡಿ ಇಟ್ಟಿದ್ದೀನಿ. ಕೂಡಿಬಂದಾಗ ಒಂದು ಅಕ್ಕೀ ಕಾಳು ಹಾಕಿದೆನೆಂದರೆ ನನ್ನ ಕೆಲಸ ಆದಂತಾಯಿತು."

ಗಿರಿಜಾತಾಯಿ ನುಡಿದಳು.

ಅಷ್ಟರಲ್ಲಿ ಶೇಖರನ ತಂದೆಯ ಕಾಲದಿಂದಲೂ ಕೆಲಸದಲ್ಲಿದ್ದ ಅಡಿಗೆಯ ನಾನಾ ಚಹ ತಂದನು. ಗಿರಿಜಾತಾಯಿ ಹೇಳಿದಳು,

"ಅಷ್ಟು ಚಕ್ಕಲಿ ಚೂಡಾನೂ ತಂದುಬಿಡು, ನಾನಾ. ಅಲ್ಮಾರಿನ ಡಬ್ಬಿಯಲ್ಲಿ ಉಂಡಿ ಇರಬೇಕು."

"ಈವತ್ತು ಯಾವ ಹಬ್ಬ ಕಾಕಿ?"

ರಮೇಶ ಕೇಳಿದ.

"ಮಕ್ಕಳ ಹಬ್ಬ. ನಿನಗೆಲ್ಲ ಅದು ತಿಳಿಯೋದಿಲ್ಲ. ನೋಡು ನಾನಾ, ನಾಳೆಯಿಂದ ನಮ್ಮಿಬ್ಬರ ಜತೆಗೆ ಇವನಿಗೂ ಅಡಿಗೆ ಮಾಡುವ ಪಾಳಿ ನಿಂದು. ರಮೇಶ ಇಲ್ಲಿಯೇ ಉಳಿಯುತ್ತಾನೆ."

ತಲೆದೂಗುತ್ತ ತನ್ನ ಒಪ್ಪಿಗೆಯ ಮೀಸೆಯನಗೆ ತೋರಿಸಿ ನಾನಾ ಒಳಗೆ ಹೋದನು. ರಮೇಶ – ಶೇಖರ ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡು ಗಿರಿಜಾತಾಯಿಯನ್ನು ನೋಡಿದರು–'ಈ ತಾಯಿಯ ಮುಂದೆ ನಾವಿಬ್ಬರೂ ಬರೇ ಕೂಸುಗಳು ಎಂದು ಒಪ್ಪಬೇಕಾಗುತ್ತದೆ' ಎನ್ನುವ ನಿರುಪಾಯ ದೃಷ್ಟಿಯಿಂದ. ಆದರೆ ಹೆಣ್ಣು ಹೃದಯದ ಮಮತೆಯನ್ನು ಅತಿ ಸ್ವಲ್ಪ ಅರಿತಿದ್ದ ರಮೇಶನಿಗೆ ತೀರ ಸಂಕೋಚ ಅನಿಸಹತ್ತಿತ್ತು. ಅಂಥ ಮಮತೆಗೆ ಅವನಲ್ಲಿ ಸ್ಥಾನವೂ ಇರಲಿಲ್ಲ. ನಿಷ್ಠುರವಾಗಿ ಎನ್ನುವಂತೆ, ತನಗೇನೋ ಅನ್ಯಾಯವಾಗುತ್ತಿದೆ ಎನ್ನುವಂತೆ ಹೇಳಿದನು.

"ಇದು ನೋಡಿ, ಉಳಿಯಲಂತೂ ಒಪ್ಪಿಗೆಯಿದೆ. ವ್ಯವಹಾರದ ದೃಷ್ಟಿಯಿಂದ ಅದು ಅನುಕೂಲವೂ ಹೌದು. ಆದರೆ ಯಾರಿಗೋ ಹೀಗೆ ಊಟ ಗೀಟ ಅಂತ...."

"'ಯಾರಿಗೋ' ಅನ್ನಬೇಡ, ರಮೇಶ. ನೀನೇ ಹೇಳಿದೆ. ನಾನು ದೂರದ ಕಾಕೂ ಆಗಬೇಕಂತ. ಉಪಚಾರಕ್ಕಾಗಿ ನೀನು ಹೇಳಿರಬಹುದು. ಆದರೆ ನಿನ್ನ ತಾಯಿ ಇದ್ದಿದ್ದರೆ ನಿನಗೆ ಹೇಳುತ್ತಿದ್ದಳು. ಇಂಥ ಸಂಬಂಧ ಬರಿ ಉಪಚಾರವಾಗುವದಿಲ್ಲ. ನನ್ನ ಚಿಕ್ಕ ಮಗನಾಗಿರಲು ಒಲ್ಲೆ ಎನ್ನಬೇಡ."

ರಮೇಶ ತಲೆ ತಗ್ಗಿಸಿ ನೆಲನೋಡುತ್ತ ಕೇಳುತ್ತಿದ್ದನು. ಅವನಿಗೆ ಕಾಣದ ಅದು ಯಾರೋ ತನ್ನ ಹೃದಯದ ಒಂದೊಂದು ಎಳೆಯನ್ನು ಹಿಡಿದು ಮೀಟು ತ್ತಿರುವಂತೆ ಅನಿಸತೊಡಗಿತ್ತು. ರಮೇಶನ ಹ್ಯಾಸ್ಕೂಲು ಜೀವನವೆಲ್ಲ ಬೆಳಗಾಂವಿ ಯಲ್ಲಿ ಯಾರದೋ ಮನೆಯಲ್ಲಿದ್ದುಕೊಂಡು ಎಲ್ಲಿಯೋ ಊಟ ಮಾಡುತ್ತ, ಎಲ್ಲಿಯೋ ಅಭ್ಯಾಸ ಮಾಡಿ ಕಳೆದಿದ್ದಿತು. ಆತ ಇಂಗ್ಲೀಷ್ ಐದನೆಯ ವರ್ಷ ದಲ್ಲಿದ್ದಾಗ ಊರಿಂದ ತಾಯಿಗೆ ಬಹಳಷ್ಟು ಜ್ವರವೆಂದೂ, ಕೂಡಲೇ ಬರ ಬೇಕೆಂದೂ ಪತ್ರ ಬಂದಿತ್ತು. ಸಂಕಪಾಲದಲ್ಲಿ ತಾರು ಕೊಡುವ ವ್ಯವಸ್ಥೆ ಇರಲಿಲ್ಲ. ರಮೇಶ ಗಡಪಡಿಸಿಕೊಂಡು ಊರಿಗೆ ಹೋಗುವದರೊಳಗಾಗಿ ತಾಯಿಯ ಪ್ರಾಣ, ಸವೆದು ಸಣ್ಣಾಗಿದ್ದ ದೇಹವನ್ನು ಬಿಟ್ಟಾಗಿದ್ದಿತು. ಅಂತ್ಯ ಕ್ರಿಯೆಯೂ ಮುಗಿದುಹೋಗಿತ್ತು. ಕರ್ತವ್ಯದ ಮೂರ್ತಿ ಆ ತಂದೆ ತಾಯಿಯ ಹನ್ನೆರಡನೆಯ ದಿನಕ್ಕಾಗಿ ಸಾಮಾನು ಒದಗಿಸುವದರಲ್ಲಿ ಮಗ್ನರಾಗಿದ್ದರು– ನಿತ್ಯದ ಸಾಮಾನು ಒದಗಿಸುತ್ತಿರುವಷ್ಟೇ ತತ್ಪರತೆ, ನಿರ್ಭಾವನೆಯಿಂದ! ಎಂಟು ವರ್ಷದ ಮೋಹಿನಿ, ಐದು ವರ್ಷದ ವಸಂತ ಇವನನ್ನು ಕಾಣುತ್ತಲೇ ಇಲ್ಲಿಯ ವರೆಗೆ ತಮ್ಮವರೆನ್ನುವವರನ್ನು ಕಾಣದವರಂತೆ ಓಡಿಬಂದು ತಬ್ಬಿಕೊಂಡು ಅಳಲಾರಂಭಿಸಿದರು. ಮೋಹಿನಿ ಹೇಳಿದಳು

"ಅವ್ವನ್ನ ಹೊತ್ತುಕೊಂಡು ಹೋಗಿ ಸುಟ್ಟುಬಿಟ್ಟರು ಅಣ್ಣಾ. ನಾ ಎಷ್ಟು ಅತ್ತರೂ ಕೇಳ್ಳಿಲ್ಲ."

ಆದರೆ ರಮೇಶನ ಕಣ್ಣಿನಲ್ಲಿ ನೀರು ಬಂದಿರಲಿಲ್ಲ. ಎಲ್ಲರಂತೆ ಅವನೂ ತಾಯಿಯನ್ನು ಪ್ರೀತಿಸಿದ್ದನು. ಆದರೆ ಆ ಪ್ರೀತಿ ಭಾವನಾತ್ಮಕವಾಗಿ ಮಾರ್ಪ ಟ್ಟಿರಲಿಲ್ಲ. ಬಹುಶಃ ಮೊದಲಿನಿಂದಲೂ ತಾಯಿಯನ್ನು ಅಗಲಿರಬೇಕಾದುದ ಕ್ಕಿರಬಹುದು, ಇಲ್ಲವೆ ಆ ತಂದೆಯ ಮಗನಾಗಿದ್ದುದಕ್ಕಿರಬಹುದು – ರಮೇಶನಲ್ಲಿ ತಾಯಿಯ ವಿಷಯವಾಗಿ ತುಂಬ ಪ್ರೇಮ, ಆಕೆ ಮೊದಲಿನಿಂದಲೂ ಅನುಭವಿ

ಸುತ್ತಿದ್ದ ರೋಗದ ವಿಷಯ ತುಂಬ ಕರುಣೆ ಇದ್ದರೂ ತಾಯಿ ತೀರಿದಾಗ 'ದುಃಖ' ಅನ್ನುವ ಭಾವನೆ ಆತನಲ್ಲಿ ಬಂದಿರಲಿಲ್ಲ. ತಂಗಿ, ತಮ್ಮನನ್ನು ಸಮಾಧಾನಗೊಳಿಸಿ ತಾನು ಯಾವಾಗಲೂ ತಿರುಗಾಡಲು ಹೋಗುತ್ತಿದ್ದ ನದೀ ದಂಡೆಗೆ ಹೋಗಿ ಶೂನ್ಯವಾಗಿ ನೀರನ್ನೇ ನೋಡುತ್ತ ನಿಂತುಬಿಟ್ಟಿದ್ದನು. ತನ್ನ ತಂದೆಗಿನ್ನು ತಾಯಿಯ ಜವಾಬ್ದಾರಿಯನ್ನೂ ಹೊರಬೇಕಾಯಿತಲ್ಲ ಎಂದು ಮಾತ್ರ ಅವನಿಗೆ ದುಃಖವೆನಿಸಿತ್ತು.

ಈ ದಿನ ಗಿರಿಜಾತಾಯಿಯ ಮಾತನ್ನು ಕೇಳಿದ ರಮೇಶನ ಕಣ್ಣಲ್ಲಿ ಆತನಿಗೆ ತಿಳಿಯುವ ಮೊದಲೇ ನೀರು ಬಂದಿತ್ತು. ತಾನು ಅರಿಯಲು ಪ್ರಯತ್ನ ಮಾಡದ ಮಾತೃಪ್ರೇಮದ ದೇವತ್ವ ಆತನಿಗೆ ಈವತ್ತು ಅರಿವಾಗಿತ್ತು.

"ಕ್ಷಮಿಸಿ, ಕಾಕೀ. ನೀವು ಹೇಳಿದ್ದು ನಿಜ. ನಾಳೆಯೇ ಬಂದು ಬಿಡುತ್ತೇನೆ" ಎಂದು ಹೇಳಿ ಅಲ್ಲಿಂದ ನಡೆದುಬಿಟ್ಟನು.

## ೭

" ಯಾರು ಬೇಕಾಗಿತ್ತು ?"

ಯಾರಿಗೂ ಹೇಳದೆ, ಕೇಳದೆ ಬಾಗಿಲ ಮರೆಯನ್ನು ದೂಡಿ ದಿಟ್ಟತನ ದಿಂದ ಒಳಗೆ ಬರುತ್ತಿದ್ದ ಆ ತರುಣಿಯನ್ನು ನೋಡಿ ಅಚ್ಚರಿಯಿಂದಲೇ ರಮೇಶ ಕೇಳಿದನು. ಲಾಲಾನ ಬಂಗ್ಲೆಯ ಮುಂದಿನ ಭಾಗವೇ ರಮೇಶನ ಆಫೀಸು ಕೋಣೆ; ಎಂದರೆ ಬಂದುಹೋಗುವ ವ್ಯವಹಾರಿಗಳನ್ನು ಭೆಟ್ಟಿಯಾಗುವ ಕೋಣೆ ಯಾಗಿತ್ತು. ಉಳಿದ ಆಫೀಸಿನ ಕೆಲಸವೆಲ್ಲ ಕೆಳಗೆ ಮೊದಲಿನ ಸ್ಥಳದಲ್ಲಿಯೇ ಸಾಗಿತ್ತು.

" ನೀವು ಯಾರು ?"

ತನಗೆ ಅಷ್ಟು ಪರಿಚಿತವಾದ ಮನೆಯಲ್ಲಿ ಅಪರಿಚಿತನೊಬ್ಬನು ತಾನು ಯಾರೋ ಅನ್ನುವ ಹಾಗೆ ಮಾತಾಡಿಸಿದುದಕ್ಕೆ ಆ ತರುಣಿ ಕಿರಣಳಿಗೆ ಮುಖ ಭಂಗವಾದಂತಾಗಿತ್ತು.

" ನಿಮ್ಮನ್ನು ಈ ಮೊದಲು ಇಲ್ಲಿ ನೋಡಿರಲಿಲ್ಲ."

" ನನಗೂ ನಿಮ್ಮನ್ನು ನೋಡುವ ಸೌಭಾಗ್ಯ ದೊರಕಿರಲಿಲ್ಲ – ಅದಕ್ಕಿರ ಬಹುದು. ನನ್ನ ಪ್ರಶ್ನೆಗೆ ಉತ್ತರ ಬರಲಿಲ್ಲವಲ್ಲ ?"

" ನನ್ನ ಪ್ರಶ್ನೆಯನ್ನೂ ಹಾಗೆಯೇ ಇಟ್ಟಿರಿ. ನೀವು ಇಲ್ಲಿ ಹೊಸದಾಗಿ ಬಂದಿರಬೇಕು."

" ಇಲ್ಲಿಯವರೆಗೆ ನಿಮ್ಮನ್ನೂ ನೋಡಿರಲಿಲ್ಲವೆಂದಮೇಲೆ ನೀವೂ ಹೊಸ ದಾಗಿಯೇ ಬಂದಿರಬೇಕಲ್ಲ ?"

ಕಿರಣನಿಗೆ ಸಿಟ್ಟು ತಡೆಯಲಾಗಲಿಲ್ಲ. ಗಡುಸಾಗಿ ನುಡಿದಳು,

" ನನಗೆ ಈ ತಲೆಹರಟೆಯೆಲ್ಲ ತಿಳಿಯುವದಿಲ್ಲ. ನಾನು ಗಿರಿಜಾತಾಯೀನ ನೋಡಬೇಕು."

" ಒಳಗಿದ್ದಾರೆ. ಅಷ್ಟು ಮೊದಲೇ ತಿಳಿಸಿದ್ದರೆ—"

ಎಂದು ನಕ್ಕು ರಮೇಶ ಒಳಗಿನ ಬಾಗಿಲು ತೋರಿಸಿ ಟ್ರಿಣ್ ಎನ್ನುತ್ತಿದ್ದ ಫೋನ್ ರಿಸೀವ್ಹರ್ ಎತ್ತಿಕೊಂಡನು. ' ಇದಾವ ಪ್ರಾಣಿ ' ಎಂಬಂತೆ ಕಿರಣ ಅವನನ್ನು ನೋಡಿ ಒಳಗೆ ಹೋದಳು.

" ಗಿರಿಜಾತಾಯೀ, ಅದ್ಯಾರ್ರೀ ಹೊರಗೆ ಕುಳಿತಿದಾರಲ್ಲ ?"

" ಹಾಂ ! ಕಿರಣ ! ಯಾವಾಗ ಬಂದೇ ಮುಂಬಯಿಗೆ ?"

" ಮೊನ್ನೆ. ಕಾಲೇಜು ಸುರುವಾಗಿ ಆಗಲೇ ಒಂದು ವಾರ ಆಯಿತಲ್ಲ. ಲಾಲಾ ಇದ್ದ ಹಾಂಗಿಲ್ಲ ಮನೇಲಿ ?"

" ಇಲ್ಲ, ಎಲ್ಲಿಯೋ ಹೋಗಿದ್ದಾನೆ. ಇಷ್ಟರಲ್ಲಿಯೇ ಬರಬಹುದು. ಕಾಶ್ಮೀರಕ್ಕೆ ಹೋಗಿ ಎಷ್ಟು ಚಂದ ಆಗಿದೀಯೇ ಕಿರಣ !"

ಎನ್ನುತ್ತ ಗಿರಿಜಾತಾಯಿ ಕಿರಣಳ ಗಲ್ಲವನ್ನೆತ್ತಿ ಆಕೆಯನ್ನು ನಾಚಿಸಿ ಹತ್ತಿರದ ಕುರ್ಚಿಯೊಂದರಲ್ಲಿ ಕುಳ್ಳಿರಿಸಿ ತಾನೂ ಕುಳಿತುಕೊಂಡಳು. ಹಸಿರು ಸಿಲ್ಕಿನ ಪತ್ತಲ ಉಟ್ಟು ತಲೆಗೆ ಒಂದೇ ಒಂದು ಅರೆ ಅರಳಿದ ಗುಲಾಬಿಹೂ ಮುಡಿದಿದ್ದ ಕಿರಣ ನಿಜವಾಗಿಯೂ ಅತ್ಯಂತ ಸುಂದರಳಾಗಿ ಕಾಣುತ್ತಿದ್ದಳು. ದುಂಡಗಾಗಿ ಮಾಟವಾಗಿದ್ದ ಮೋರೆ, ತುಂಬಿಕೊಂಡು ಗುಲಾಬಿಯಾಗಿ ಶೋಭಿಸುತ್ತಿದ್ದ ಗಲ್ಲಗಳು, ನಕ್ಕರೆ ಹೂ ಅರಳುವಂತೆ ಭಾಸವಾಗುವ ತುಟಿಗಳು, ಮೊದಲಿಸಿಂದಲೂ ಮೋಹಕಳಾಗಿದ್ದ ೧೯ ವರ್ಷದ ಈ ಹುಡುಗಿ ಕಾಶ್ಮೀರದ ಸುಂದರ ಸುಹಾವನ ಗಿರಿವನಗಳಲ್ಲಿ ಎರಡು ತಿಂಗಳು ಅಡ್ಡಾಡಿ ಬಂದುದಕ್ಕೆ ಆ ದಿನ ಯಾರನ್ನೂ ಮೋಹಿಸಬಹುದಾಗಿತ್ತು. ಮನೆಯಲ್ಲಿಯೂ ರೇಷ್ಮೆಯ ಚಪ್ಪಲು ಧರಿಸಿ ಅಡ್ಡಾಡುತ್ತ, ಕಾರಿನಲ್ಲಿ ಸುತ್ತಾಡುತ್ತ ಜೀವನ ಎಂದರೆ ಸುಂದರ, ಮಧುರ ಗಾನ ಎಂದು ಮಾತ್ರ ಅರಿತಿದ್ದ ಈ ಹುಡುಗಿ ಎಷ್ಟು ಕೋಮಲಳಾಗಿದ್ದಳೋ ಅಷ್ಟೇ ಹಠವಾದಿಯಾಗಿದ್ದಳೆಂಬುದೂ ಮೋರೆಯ ಮೇಲೆಯೇ ತೋರುತ್ತಿತ್ತು.

ಇಲ್ಲಿಯವರೆಗಿನ ಜೀವನದಲ್ಲಿ ತನ್ನ ಮನಸ್ಸಿನಂತಾಗದ ಒಂದು ಘಟನೆಯನ್ನೂ ಅನುಭವಿಸಿರಲಿಲ್ಲವೆನ್ನುವ, ತನಗೆ ದೊರೆಯದ ಒಂದು ವಸ್ತುವನ್ನೂ ಬೇಡಲಿಲ್ಲ ವೆನ್ನುವ ಭಾವನೆ ವ್ಯಕ್ತಮಾಡುವ ವಿಲಕ್ಷಣ ಆತ್ಮವಿಶ್ವಾಸ, ಅಭಿಮಾನ ದೊಡ್ಡಸ್ತಿಕೆ ಆಕೆಯ ಇಡೀ ವ್ಯಕ್ತಿತ್ವದಿಂದಲೇ ಪ್ರತಿಬಿಂಬಿತವಾಗುತ್ತಿತ್ತು. ಆದರೂ ಶ್ರೀಮಂತಿಕೆಯ ಗೊಡ್ಡು ಆಡಂಬರವಾಗಲಿ, ನೀರಸತೆಯಾಗಲಿ ವ್ಯಕ್ತವಾಗಲು ಅವಕಾಶವಿರದಂತೆ ತನ್ನ ಹಾರ್ದಿಕತೆಯಿಂದ ಯಾರನ್ನಾದರೂ ತನ್ನವರಾಗಿಸಿ ಕೊಳ್ಳುವ ಜಾಣ್ಮೆ ಅವಳಲ್ಲಿತ್ತು.

"ಹೊರಗಿದ್ದವರು ಯಾರು ಹೇಳಲೇ ಇಲ್ಲ. ತಾಯಿ ತುಂಬ ಒರಟು ಮಾತಾಡಿದರು."

ಗಿರಿಜಾತಾಯಿ ಮಾಡಿದ ತನ್ನ ಸೌಂದರ್ಯ ಬಣ್ಣನೆಯನ್ನು ತಪ್ಪಿಸುತ್ತ ಕಿರಣ ಕೇಳಿದಳು.

"ಯಾರು? ಯಾರು ಬಂದಿದ್ದಾರೆ?"

"ಯಾರೋ ಲಾಲಾರ ಅಫೀಸಿನವರಿರಬೇಕು. ಇಲ್ಲಿಯೇ ಇದ್ದವರ ಹಾಗೆ ಮಾತಾದುತ್ತಿದ್ದರು."

"ಹೋ, ರಮೇಶನ್ನ ಕುರಿತು ಮಾತಾಡುತ್ತಿದ್ದಿ. ಹೌದು ಇಲ್ಲಿಯೇ ಇದ್ದಾನೆ. ಲಾಲಾ ಅವನನ್ನ ಮ್ಯಾನೆಜರನನ್ನಾಗಿ ಮಾಡಿಕೊಂಡಿದ್ದಾನೆ. ತುಂಬ ಒಳ್ಳೆಯ ಮನುಷ್ಯ. ಬಂದ ಎರಡೇ ದಿನದಲ್ಲಿ ಲಾಲಾನ ಜೋಡಿ ಇವನೂ ಒಬ್ಬ ಅವನ ತಮ್ಮ – ಅನ್ನಿಸುವಷ್ಟು ವಿಶ್ವಾಸಗಳಿಸಿಕೊಂಡಿದಾನೆ."

"ಅಂದರೆ ಇಲ್ಲಿಯೇ ಉಳಿಯುತ್ತಾರೆಯೆ?"

"ಹೌದು. ಊಟಕ್ಕೂ ನಮ್ಮೊಡನೆಯೇ. ಲಾಲಾನಿಗೆ ಸೇರಿದ್ದೆಲ್ಲ ತನ್ನದೇ ಎನ್ನುವಷ್ಟು ಆಸ್ತೆಯಿಂದ ಕೆಲಸ ಮಾಡುತ್ತಾನೆ. ಮೊದಲು ತುಂಬ ಕಷ್ಟಪಟ್ಟವನಂತೆ."

"ನಿಮಗೆ ದೂರದ ಸಂಬಂಧವೇನಾದರೂ ಆಗಬೇಕೆ?"

"ಸಂಬಂಧ ಇರಲಿ, ಅದೆಲ್ಲಿದ್ದೋ ಬೆಳಗಾಂವದವನಂತೆ. ಕನ್ನಡಜನ. ಆದರೆ ತನ್ನದೇ ಭಾಷೆ ಅನ್ನೋಹಾಗೆ ಮರಾಠಿ ಮಾತಾಡುತ್ತಾನೆ. ಅತ್ತಲಿನ ಜನಾನೂ ಇಷ್ಟು ಒಳ್ಳೆಯವರಿರುತ್ತಾರಂತೆ ತಿಳಿದಿರಲಿಲ್ಲವ್ವ."

"ಏನೋ ನಂಗೆ ಒಂದೂ ಅರ್ಥವಾಗಲಿಲ್ಲವ್ವ. ಯಾರನ್ನೋ ಮ್ಯಾನೇಜರ

ಅಂತ ನೇಮಿಸಿಕೊಂಡುದಕ್ಕೆ ಮನೆಯವರಂತೆ ಇಲ್ಲಿಯೇ ಇಟ್ಟುಕೊಂಡು ಬಿಡೋದೇ? ಸಂಬಂಧ ಇಲ್ಲ – ಪರಿಚಯ ಇಲ್ಲ."

"ನೋಡು, ಕಿರಣ – ಅವನ ಪರಿಚಯ ನಿನಗಿನ್ನೂ ಆಗಲಿಲ್ಲ. ನನಗಂತೂ ಲಾಲಾ ರಮೇಶ ಅಂದರೆ ರಾಮ – ಲಕ್ಷ್ಮಣ ಆಗಿಬಿಟ್ಟಿದ್ದಾರೆ."

"ಬಿಡ್ರಿ, ಎಲ್ಲಿಯ ರಮೇಶನೋ ಏನೋ. ಇದೇ ಈಗ ನೀವು ಇದ್ದೀರೇನು ಎಂದು ಕೇಳುವಾಗ ಒರಟುಒರಟಾಗಿ ಏನು ಏನೋ ಹೇಳಿ ಬಿಟ್ಟನು. ಎಲ್ಲಿಯೋ ಹಳ್ಳಿಯ ಮುಕ್ಕನಾಗಿರಬೇಕು ಅಂದುಕೊಂಡೆ."

ಗಿರಿಜಾತಾಯಿಗೆ ನಗೆ ತಡೆಯಲಾಗಲಿಲ್ಲ. 'ರಮೇಶ' ಎಂದು ಕುಳಿತಲ್ಲಿಂದಲೇ ಅವನನ್ನು ಕರೆದಳು.

"ಏನು ಕಾಕೀ"

ಎನ್ನುತ್ತ ರಮೇಶ ಒಳಗೆ ಬಂದುನಿಂತನು.

"ನೋಡು, ಕಿರಣ ಬಂದಾಗ ನೀನು ಏನು ಏನೋ ಹೇಳಿದೆಯಂತೆ. ನಿನ್ನನ್ನು ಹಳ್ಳಿಯ ಮುಕ್ಕ ಅನ್ನುತ್ತಾಳೆ."

ಕಿರಣಳ ತಡೆಯುವ ದೃಷ್ಟಿಯನ್ನು ನಿರ್ಲಕ್ಷಿಸಿ ನಗುತ್ತಲೇ ಗಿರಿಜಾತಾಯಿ ನುಡಿದಳು.

"ತಪ್ಪು ನಂದಲ್ಲ. ನಾನು ಸಣ್ಣ ಕೂಸಾಗಿದ್ದಾಗಿನಿಂದ್ಲೂ ಹಗಲೆಲ್ಲ ಮುಂಬಯಿ ಕಡೆಗೆ ಬೊಟ್ಟುಮಾಡಿ ಅಳುತ್ತಿದ್ದೆ ಅಂತ ನೆರೆಹೊರೆಯವರು ಈಗ ಹೇಳುತ್ತಾರೆ. ಆಗ ಅದರ ಅರ್ಥ ನನ್ನ ಅವ್ವ ಅಪ್ಪಂಗೆ ಆಗ್ಲಿಲ್ಲ. ಅವರು ಹಳ್ಳಿ ಬಿಟ್ಟು ಮುಂಬಯಿಗೂ ಬರಲಿಲ್ಲ. ಈಗ ಮುಂಬಯಿಯ ನೀರು ಕುಡಿಯಹತ್ತಿ ಎರಡು ವರ್ಷ ಮಾತ್ರ ಆಯಿತು. ಆದರೆ ೧೮ ವರ್ಷದ ಸಂಸ್ಕಾರ ಹೇಗೆ ಹೋಗಬೇಕು?"

"ನಾನು ಅಂಥದೇನೂ ಗಿರಿಜಾತಾಯಿ ಹತ್ತಿರ ಹೇಳಿರಲಿಲ್ಲ. ನೀವು ಇಲ್ಲಿಯೇ ಮ್ಯಾನೇಜರ್ ಆಗಿ ಇದ್ದೀರಂತೆ; ನನಗೇನು ಗೊತ್ತು? ನೀವೂ ಪರಿಚಯ ಮಾಡಿಕೊಡಲಿಲ್ಲ ಎಂದು ಹೇಳಿದೆ. ಅದನ್ನೇ ಗಿರಿಜಾತಾಯಿ ನಿಮ್ಮನ್ನು ಕರೆದು ಹೇಳಿಬಿಡುತ್ತಾಳಂತ ನನಗೇನು ಗೊತ್ತು?"

ಅವಮಾನದ ಸಂಗತಿಯನ್ನು ರಮೇಶ ನಗೆಯಲ್ಲಿಯೇ ಸ್ವೀಕರಿಸಿದುದಕ್ಕೆ ಕಿರಣಳಿಗೆ ಸಮಾಧಾನವಾಗಿ ನುಡಿದಳು.

"ಚಾಡಿ ಹೇಳೋದು ಹಳ್ಳಿಯ ಅಸಂಸ್ಕೃತಿಯ ಮೂಲ ಗುರುತು. ಬಹುಶಃ ನನ್ನ ಸಂಗದೋಷ ಇರಬೇಕು ಕಾಕಿಗೂ ಹಳ್ಳಿಗತನ ಬಂದುಬಿಟ್ಟಿತು."

ರಮೇಶನ ಮಾತಿಗೆ ಎಲ್ಲರೂ ನಕ್ಕರು. ಆ ವಿಷಯವನ್ನೇ ಮರೆಸಿ ಬಿಡಬೇಕೆಂದು ಕಿರಣ ನುಡಿದಳು.

"ನಿಮ್ಮ ಭಾಷೆ ಮರಾಠಿ ಅಲ್ಲವಂತೆ. ಆದರೂ ಮರಾಠಿಯನ್ನು ನೀವು ಚನ್ನಾಗಿ ಮಾತಾಡುತ್ತೀರಿ."

"ನೋಡಿ ಕಾಕಿ, ನೀವು ಪಂಗ್ತಿಭೇದ ಮಾಡಿದ್ದೀರಿ. ನನ್ನ ಪರಿಚಯ ವನ್ನೆಲ್ಲ ಅವರಿಗೆ ಹೇಳಿಬಿಟ್ಟು ಅವರ ವಿಷಯ ಮಾತ್ರ ನನಗೆ ಏನೂ ಹೇಳಲೇ ಇಲ್ಲ. ಮುಂಬೈಲಿ ಇರೋರು ಹೀಗೆಲ್ಲ ಮಾಡುತ್ತಾರಂತ ತಿಳಿದಿರಲಿಲ್ಲ. ಮೊದಲು ಇಂಟ್ರೊಡಕ್ಷನ್ (ಗುರುತು ಪರಿಚಯ) ಅಂತ ಆರಂಭಿಸುತ್ತಾರೆ."

"ಹುಂ, ಆಗಲೇ ಹೇಳಿದಿರಲ್ಲ. ಸಂಗದೋಷ"

"ತಾವಡೇಕರ್ ಕಂಪನಿಯ ಶ್ರೀಪತಿರಾಯರ ತಂಗಿ ಈಕೆ. ಈ ವರ್ಷ ಜ್ಯೂ. ಬಿ.ಎ. ದಲ್ಲಿ ಓದುವವಳು. ಇಂಟರ್ ಪರೀಕ್ಷೆಯಲ್ಲಿ ಫಸ್ಟ್ ಕ್ಲಾಸಿಗೆ ೯೫ ಗುಣಗಳಷ್ಟೇ ತಪ್ಪಿ ಸೆಕೆಂಡ್ ಕ್ಲಾಸ್ ಬಂದಳಂತೆ. ಬಹಳ ಜಾಣ ಹುಡುಗಿ."

ಎಂದು ಗಿರಿಜಾಯಿ ಪರಿಚಯ ಹೇಳಿದರು.

"ಒಳ್ಳೆಯದೇ ಆಯಿತು. ಫಸ್ಟ್ ಕ್ಲಾಸ್ ಬಂದಿದ್ದರೆ ಸ್ಕಾಲರ್‌ಶಿಪ್ಪು ಪಡೆಯಬೇಕಾಗುತ್ತಿತ್ತು. ಅಂದರೆ ಇನ್ನೊಬ್ಬ ಬಡವ, ಜಾಣನಾದ ವಿದ್ಯಾರ್ಥಿಗೆ ಸಿಗಬೇಕಾಗಿದ್ದ ಸಹಾಯ ಧನ ಇವರಿಗೆ ಅನವಶ್ಯಕವಾಗಿ ದೊರಕಿ ತುಂಬ ಅನ್ಯಾಯವಾಗುತ್ತಿತ್ತು. ಅದಕ್ಕೆಂತಲೇ ಫಸ್ಟ್ ಕ್ಲಾಸು ತಪ್ಪಿಸಿಕೊಂಡಿರಬೇಕು ಅಲ್ಲವೆ?"

"ಅಷ್ಟು ಉದಾರ ಮನಸ್ಸು ಇದ್ದಿತೋ ಇಲ್ಲವೋ ಹೇಳಲಾರೆ. ಆದರೆ ಆದದ್ದು ಸ್ವಲ್ಪ ಹೆಚ್ಚುಕಡಿಮೆ ಹಾಗೆಯೇ. ನಾಸಿಕದ ಅಕೋಳಕರ ಅಂತ ಒಬ್ಬ ಹುಡುಗನಿಗೇ ಮೊದಲನೇ ಸ್ಕಾಲರ್‌ಶಿಪ್ಪು ಸಿಕ್ಕಿದೆ. ಆತನು ಮಾಡಿದ ಪ್ರಯತ್ನ ಸಾರ್ಥಕವಾದಂತಾಯಿತು. ತೀರ ಬಡವನು."

"ನನಗೆನಿಸುತ್ತದೆ ಶ್ರೀಮಂತರ ಮಕ್ಕಳೆಲ್ಲ ದಡ್ಡರಾಗಿ ಹುಟ್ಟಬೇಕು. ಅಂದರೆ ಎರಡೆರಡು ವರ್ಷವಾದರೂ ಒಂದೊಂದು ಕ್ಲಾಸಿನಲ್ಲಿ ಇದ್ದಿರಬೇಕು.

ಅಂದರೆ ಪ್ರ್ಯಾಯ್ವೇಟ್ ಟ್ಯೂಶನ್ ಕೊಡುವವರ ಸಂಖ್ಯೆ ಬಹಳವಾಗಿ ಸರಕಾರದ ನಿರುದ್ಯೋಗ ಓಡಿಸುವ ಕಾರ್ಯಕ್ರಮಕ್ಕೆ ಸಹಾಯ ಮಾಡಿದಂತಾಗುತ್ತದೆ. ಎರಡನೆಯದಾಗಿ ಸ್ಕಾಲರ್‌ಶಿಪ್ಪು, ಫ್ರೀಶಿಪ್ಪುಗಳೆಲ್ಲ ಬಡವರಿಗೇ ದೊರಕಿ ಅವರು ಹೆಚ್ಚು ಓದಲು ಅನುವಾಗುತ್ತದೆ. ಅಂದರೆ ಧನದಲ್ಲಿಲ್ಲದಿದ್ದರೆ ವಿದ್ಯೆಯಲ್ಲಿಯಾದರೂ ಬಡವರು ಶ್ರೀಮಂತರೊಡನೆ ಪ್ರತಿಸ್ಪರ್ಧಿಸಬಹುದಲ್ಲ."

"ಬಹುಶಃ ನೀವು ಸ್ಕಾಲರ್‌ಶಿಪ್ ಹಣದ ಸಹಾಯದಿಂದಲೇ ಕಲಿತಿರಬೇಕಲ್ಲವೆ ?"

"ನಿಜ. ಆದರೆ ನಾನು ಹೇಳಿದುದು ನನ್ನ ಬಗ್ಗಾಗಿ ಅಲ್ಲ, ಸಾಮಾನ್ಯವಾಗಿಯೇ ಹೇಳಿದೆ."

"ನೀವು ಕಮ್ಯುನಿಸ್ಟರ ತತ್ವದವರು ಕಾಣುತ್ತದೆ. ನಿಮ್ಮ ಲೆಕ್ಕದಲ್ಲಿ ಬಡವರೆಲ್ಲ ಹುಟ್ಟು ಜಾಣರಿದ್ದು ಶ್ರೀಮಂತರು ಅವರ ಈ ಜಾಣತನವನ್ನೂ ಕಸಿದುಕೊಂಡಿದ್ದಾರೆ ಎಂದಿರಬೇಕು. ಬಡವರನ್ನು ಶ್ರೀಮಂತರನ್ನಾಗಿ ಮಾಡಿ ಸಮಾನತೆ ತರುವವರಲ್ಲ ನೀವು. ಶ್ರೀಮಂತರನ್ನು ಬಡವರಾಗಿಸಿ ಇನೀಕ್ವಾಲಿಟಿ (ಅಸಮಾನತೆ) ಇಲ್ಲದಾಗಿ ಮಾಡುವವರು. ನನಗೆ ಮೊದಲೇ ಅನಿಸಿತ್ತು ನೀವು ಎಡಪಕ್ಷದವರು ಅಂತ."

"ಏನದು ಎಡಪಕ್ಕ ?"

ಅಷ್ಟರಲ್ಲಿ ಲಾಲಾ ಒಳಗೆ ಬಂದನು. ಹೊರಗಿನಿಂದಲೇ ಕಿರಣಳ ದನಿ ಕೇಳಿ ಒಂದೇ ಉಸಿರಿಗೆ ಹಾರಿ ಬಂದಿದ್ದನಾತ.

"ಹೋ, ಹೋ, ಹೋ ಯಾವಾಗ ಬಂದಿರಿ ?"

"ಮೊನ್ನೆ"

"ಮತ್ತೆ ಈವತ್ತು ಬಡವರ ನೆನಪಾಯಿತಲ್ಲವೆ ?"

"ಒಂದು ದಿನವೆಲ್ಲ ನಿದ್ದೆಯಲ್ಲಿ ಹೋಯಿತು. ನಿನ್ನೆ ಕಾಲೇಜಿಗೆ ಹೋಗಿ ಅಪ್ಲಿಕೇಷನ್ ಕೊಟ್ಟು, ಕಂಗ್ರೆಚ್ಸ್ (ಅಭಿನಂದನೆ) ಕೊಟ್ಟುಕೊಳ್ಳುವದರಲ್ಲಾಯಿತು. ನೀವು ತಕರಾರು ಮಾಡುತ್ತೀರಿ ಅಂತಲೇ ನಿಮಗೆ ಕಾಶ್ಮೀರಿ ಗುಲಾಬಿ, ಸಫರಚಂದ್, ಗುಲಗುಲಾ ತಂದಿದೇನೆ. ಇಷ್ಟರಲ್ಲಿ ಯಾರಾದರೂ ತರಬಹುದು ಮನೆಯಿಂದ."

"ಏನೋ ಹಾಗೇನೇ ತನ್ನಿ ಎಂದಿದ್ದೆ. ಇಷ್ಟು ದಿನ ನೆನಪಿಟ್ಟದ್ದೀರಲ್ಲ.

ಥ್ಯಾಂಕ್ಸ್. ನಿಮ್ಮ ಹಣ್ಣನ್ನು ಹಾಯಾಗಿ ಕುಳಿತು ತಿನ್ನಲೆಂದೇ ಕಂಪನಿಯ ವ್ಯವಹಾರವನ್ನೆಲ್ಲ ಇವರಿಗೆ ಒಪ್ಪಿಸಿಬಿಟ್ಟಿದ್ದೇನೆ. ಇಷ್ಟರೊಳಗಾಗಿಯೇ ಪರಿಚಯವಾಗಿರದಿದ್ದರೆ ಇವರು ರಮೇಶ ಮಾಹುಲಿ. ದಿ ಮ್ಯಾನೇಜರ್ ಇನ್ ಚಾರ್ಜ್ ಆಫ್ ಚಿತ್ರಳಿ ಅಂಡ್ ಕಂ. ಮ್ಯಾನಿಫೆಕ್ಚರರ್ಸ್ ಆಫ್ ಆಲ್ ಕ್ಯಾಂಡ್ಸ್ ಆಫ್ ಅಯರ್ನ್ ಎಂಡ್ ಸ್ಟೀಲ್ ಮನೆ ಸಾಮಾನುಗಳು ಅಂಡ್ ಹೋಲ್‌ಸೇಲ್ ಡೀಲರ್ಸ್ ಎಟ್ಸೆಟ್ರಾ, ಎಟ್ಸೆಟ್ರಾ.

"ಹುಂ, ಸ್ವಲ್ಪ ಉಸಿರು ಎಳೆದುಕೊಳ್ಳಿ, ಸರ್. ಈಗೊಂದು ದೊಡ್ಡ ಪ್ರೊಬ್ಲೆಮ್ ಬಿಡಿಸಬೇಕಾಗಿದೆ."

ರಮೇಶ ನಡುವೆ ಮಾತನಾಡಿದ.

"ಯಾವದು, ಆ ಕ್ವನ್ಸಾರಿ ಕಂಟ್ರಾಕ್ಟರರ ಆರ್ಡರ್ ಅಲ್ಲವೆ ?"

"ಅಲ್ಲ, ಅದು ಸಿಕಾಲೆ ಆಯಿತು. ನಮ್ಮ ಲುಕ್ವಾನು ತುಂಬಿಕೊಡಲು ಅವರು ಒಪ್ಪಿದ್ದಾರೆ. ನಾನು ಹೇಳುವದು ಸ್ವಲ್ಪ ಸೀರಿಯಸ್ ಆದದ್ದು. ನೀವು ಯಾರನ್ನೋ ಕಮ್ಯುನಿಸ್ಟರನ್ನು ನಿಮ್ಮ ಸ್ಟಾಫ್‌ದೊಳಗಿಟ್ಟಿದೀರಂತೆ. ಈಗಷ್ಟೇ ವಾರಂಟು...."

"ಕಮ್ಯುನಿಸ್ಟ್ ! ಯಾರು ?"

"ನಿಮ್ಮ ಮ್ಯಾನೇಜರು. ಅವರ ವಿಚಾರವೆಲ್ಲ ಪೂರ್ಣ ಕಮ್ಯುನಿಸ್ಟ್ ತತ್ವದ್ದು. ಯಾರಾದರೂ ಬಂದಕೂಡಲೇ ಸಂಶಯದಿಂದ ಯಾರು ಏನು ಎಂದು ಕೇಳೋದು. ತಮ್ಮ ಪರಿಚಯ ಒಮ್ಮೆಲೇ ಮಾಡಿಕೊಡದಿರೋದು. ಎಲ್ಲರೂ ಜಾಣರಾಗಿ ಸರಿಸಮಾನರಾಗಿರಬೇಕು ಎನ್ನುವದಕ್ಕಿಂತ ಎಲ್ಲರೂ ದಡ್ಡರಾಗಿ ಸಮಾನವಾಗಿರಬೇಕು ಎನ್ನುವದು. ಇನ್ನೂ ಏನೇನೋ ಹೇಳಿದರು. ಇನ್ನು ನಿಮಗೂ ನಿಮ್ಮ ಕಂಪನಿಗೂ ದೇವರೇ ಗತಿ"

ಎಂದು ಹುಬ್ಬು ಹಾರಿಸಿ ನಕ್ಕಳು ಕಿರಣ.

"ಚಹಾನೇ ಗತಿ"

ಎನ್ನುತ್ತ ಆಗಲೇ ಒಳಗೆ ಹೋಗಿದ್ದ ಗಿರಿಜಾತಾಯಿ ನಾನಾನ ಕೈಲಿ ಲಾಡು, ಚಕ್ಕಲಿ, ಸಂಡಿಗೆ ಹಿಡಿಸಿಕೊಂಡು ಚಹದ ಕಿಟ್ಟಲಿ ತಂದು ಮೇಜಿನ ಮೇಲಿಡುತ್ತ ನುಡಿದಳು.

"ನೀವು ಹೇಳಿದ್ದು ನಿಜವಿರಬೇಕು, ಕಿರಣ. ರಮೇಶ ಬಂದಾಗಿನಿಂದ

ಫ್ಯಾಕ್ಟರೀಲಿ ಒಂದು ತಂಟೆ, ಜಗಳ ಇಲ್ಲ. ಹಾಗೇನಾದರೂ ಆರಂಭವಾದರೆ ಕೂಲಿಕಾರರಿಗೂ ಸಮಾಧಾನವಾಗುವ ಹಾಗೆ, ಕಂಪನಿಗೂ ಹಾನಿಯಾಗದ ಹಾಗೆ ಕೆಲಸ ಬಗೆಹರಿಸಿಬಿಡುತ್ತಾನೆ. ರಮೇಶ ಏನು ಹೇಳಿದರೂ ಈ ತಲೆ ತಿರುಕ ಕೂಲಿಕಾರರು ಕೇಳಿಕೊಂಡಿರುತ್ತಾರೆ."

ಶೇಖರಲಾಲಾ ಸಮಾಧಾನದ ಧ್ವನಿಯಿಂದ ನುಡಿದು ನಕ್ಕ.

"ಮೊನ್ನೆ ಅಣ್ಣನ ಎರಡು ಮಿಲ್ಲುಗಳನ್ನು ಎರಡು ದಿನ ಮುಚ್ಚಿಬಿಟ್ಟಿದ್ದರಂತಲ್ಲ. ನನಗೆ ಈ ಕೂಲಿಕಾರರ ಮುಷ್ಕರಕ್ಕಿಂತ ಅವರ ಅಜ್ಞಾನಕ್ಕಾಗಿ ತಲೆ ಚಿಟ್ಟುಹಿಡಿಯುತ್ತದೆ. ಆ ದಿನ ಹಾಳಾಗುವಷ್ಟು ಕಾಲ ಹಾಳಾಯಿತು ಇನ್ನಾದರೂ ಕೆಲಸಮಾಡಿ ಅಷ್ಟು ತಾಸಿನ ಕೂಲಿ ಒಯ್ಯಿರಿ ಅಂದರೆ ತಮಗೆ ಇಡೀ ದಿನದ ಕೂಲಿಬೇಕು ಅಂತ ಪಟ್ಟುಹಿಡಿದು ಕುಳಿತಿದ್ದರಂತೆ. ಹಾಳಾದ ಎರಡು ತಾಸಿಗಾಗಿ ಬೇಕಾದರೆ ಓವ್ಹರ್ ಟ್ಯಾಂ ಕೆಲಸ ಮಾಡುತ್ತಾರಂತೆ. ನಾಳೆ ಮತ್ತೆ ಓವ್ಹರ್ ಟ್ಯಾಂ ಕೆಲಸ ಮಾಡಿಸಿಕೊಂಡರು ಅಂತ ಲೇಬರ್ ಯೂನಿಯನ್ ವರೆಗೆ ತಕರಾರು ಒಯ್ಯಲೂ ಸಿದ್ಧ. ಮುಷ್ಕರ ಹಿಡಿಯದೆ ಸರಿಯಾಗಿ ಕೆಲಸ ಮಾಡಿದರೆ ತಿಂಗಳ ಅಂತ್ಯಕ್ಕೆ ಬೋನಸ್ಸು ಕೊಡುತ್ತೇವೆ ಅಂದರೂ ನಂಬಲಿಲ್ಲ. ಈ ದಡ್ಡತನಕ್ಕೆ ಯಾರೇನು ಮಾಡಬೇಕು ?"

"ದಡ್ಡತನ ಅವರ ತಪ್ಪಲ್ಲ ಮಿಸ್. ತಾವಡೇಕರ್. ಜಾಣರಾದವರು ತಮ್ಮ ಹಿತಕ್ಕಾಗಿಯೇ ಹೇಳುತ್ತಿದ್ದಾರೆ ಎಂದು ಅವರಿಗೆ ಮನವರಿಕೆಯಾದರೆ ಅವರೇಕೆ ಕೇಳುವದಿಲ್ಲ? ಜಾಣರಿಗೆ ತಮ್ಮ ಜಾಣತನದ ಹೆಮ್ಮೆಯಾದರೆ ದಡ್ಡರಾದವರಿಗೆ ತಮ್ಮ ಅಜ್ಞಾನದ ಅಂಜಿಕೆ."

ಎಂದು ಮಾತು ಸೇರಿಸಿದ ರಮೇಶ.

"ನೋಡಿ ರಮೇಶ್, ಜಾಣತನಕ್ಕೂ ನಿಮಗೂ ಬದ್ಧ ವೈರತ್ವ ಕಾಣುತ್ತದೆ. 'ಸರ್ವ್ಹೈವಲ್ ಆಫ್ ದಿ ಫಿಟೆಸ್ಟ್' (ಗಟ್ಟಿಗನಾದವನು ಬದುಕುವನು) ಥೇರಿ ಪ್ರತಿಪಾದಿಸಿದ ಡಾರ್ವಿನ್‌ನನ್ನೂ ನೀವು ಕೆಪಿಟಾಲಿಸ್ಟ್ ಅಂತ ಹೆಸರಿಡಬಹುದು."

"ಡಾರ್ವಿನ್‌ನ ತತ್ವ ಪ್ರಾಣಿಶಾಸ್ತ್ರದ ಸಂಬಂಧವಾಗಿ ಮಾತ್ರವಾಗಿತ್ತು ಮಿಸ್ ಕಿರಣ್. ಅದರ ಅರ್ಥವನ್ನು 'ಶ್ರೀಮಂತರು ಮಾತ್ರ ಬದುಕಬೇಕು, ಬಡವರು ಬದುಕಲೆತ್ನಿಸುವದು ಇಲ್ಲವೆ ಯಾರಾದರೂ ಅವರು ಬದುಕುವಂತೆ

ಪ್ರಯತ್ನ ಮಾಡುವದು ವ್ಯರ್ಥ ಪ್ರಯೋಗ ಎಂದು ಸಿದ್ಧ ಮಾಡಿದ್ದು ಇಂದಿನ ಸಮಾಜದ ದೃಷ್ಟಿಕೋನದ ಜಾಣತನ."

"ಬಡವರು ಜಾಣರಾಗುವುದಕ್ಕಾಗಲಿ, ಶ್ರೀಮಂತರಾಗುವದಕ್ಕಾಗಲಿ ನನ್ನದೇನೂ ಆತಂಕವಿಲ್ಲವಲ್ಲ. ಅವರು ಹಾಗಾಗುವಂತೆ ಸರಕಾರವೂ ಸಮಾಜ ಸಂಸ್ಥೆಗಳೂ ಬೇಕಾದ ಸಹಾಯಮಾಡಲಿ, ಬೇಡ ಅನ್ನುವದಿಲ್ಲ. ಆದರೆ ಬಡವರು ಬಡವರಾಗಿದ್ದಾರಂತ ಶ್ರೀಮಂತರನ್ನು ದ್ವೇಷಿಸುವದು ಬೇಡ. ಅದರಿಂದ ಶ್ರೀಮಂತರೇನೂ ಬಡವರಾಗುವದಿಲ್ಲ. ಬಡವರ ಬಡತನವೂ ಅಳಿಯುವದಿಲ್ಲ. ಸುಮ್ಮನೆ ಮುಷ್ಕರ, ಲಾಕ್‌ಔಟ್ ಅನ್ನುತ್ತ ಆಗಬೇಕಾದ ಕೆಲಸಗಳು ಹಾಗೆಯೇ ಉಳಿದು ಬಡವರು ಶ್ರೀಮಂತರು ಕೂಡಿಯೇ ಅಳುತ್ತಿರುವದರಲ್ಲಿ ಏನರ್ಥ?"

ಕಿರಣ ವಾದ ನಡೆಸುತಿದ್ದಂತೆ ಶೇಖರನ ಕಡೆಗೆ ನೋಡಿದಳು.

"ನೋಡು, ರಮೇಶ. ತಾವಡೇಕರ್‌ರ ಪೂರ್ಣಪರಿಚಯ ನಿನಗಿನ್ನೂ ಆಗಿಲ್ಲ. ತಾವಡೇಕರ್ ಟ್ರಸ್ಟ್ ಹಣದಿಂದ ಪರಳ್‌ದಲ್ಲಿ ಇಂದಿಗೂ ಒಂದು ಕೂಲಿಕಾರರ ಶಾಲೆ ನಡೆಯುತ್ತಿದೆ. ನಾಸಿಕದ ಅವರೂರಿನ ಮೂರು ನಾಲ್ಕು ವಿದ್ಯಾರ್ಥಿಗಳು ಸುಮಾರು ಅವರದೇ ಸಹಾಯದಿಂದ ಮುಂಬಯಿಯಲ್ಲಿ ಕಾಲೇಜು ಕಲಿಯುತ್ತಿದ್ದಾರೆ. ಪರಳ್ – ಚಿಂಚ್‌ಪೋಕಲಿಯ ನಡುವೆ ಅವರ ನಾಲ್ಕು ಅರಿವೆಯ ಮಿಲ್ಲುಗಳಿವೆ. ಅವರಿಗೆಲ್ಲ ಕ್ವಾರ್ಟರ್ಸ್ ಕಟ್ಟಿಸಿ ಕೊಟ್ಟಿದ್ದಾರೆ. ಆದರೇನು? ಮುಷ್ಕರ, ಲಾಕ್‌ಔಟುಗಳೆಲ್ಲ ಇಂದಿನ ಉದ್ಯೋಗಗಳಿಗೆ ಇನ್‌ಕಮ್‌ಟ್ಯಾಕ್ಸ್, ಸ್ಟಂಪುಗಳಷ್ಟೇ ಸಹಜ, ಕಳೆಯಲಾಗದ ವಿಷಯಗಳಾಗಿಬಿಟ್ಟವೆ."

"ಬಡವರು ಫ್ಯಾಶನೇಬಲ್ ಅಲ್ಲ ಅಂತೀರಲ್ಲ. ನೋಡಿ ಈ ಮುಷ್ಕರ ಅನ್ನೋದು ಇಂದಿನ ಫ್ಯಾಶನ್ ಆಗಿಬಿಟ್ಟಿದೆ. 'ನಾವು ಇಂಥ ಇಂಥ ದಿನ ಮುಷ್ಕರ ಹೂಡಿದೆವು. ನಿಮ್ಮ ಮಿಲ್ಲಿನಲ್ಲಿಲ್ಲವೇನು?' ಎಂದು ಒಬ್ಬ ಕೂಲಿಕಾರ ಇನ್ನೊಬ್ಬನನ್ನು ಕೇಳಿದರೆ 'ಇಲ್ಲ' ಎನ್ನಲು ಆತ ನಾಚಿ ಕೇಳುತ್ತಾನೆ – ಏನೋ ದೊಡ್ಡ ತಪ್ಪು ಮಾಡಿಬಿಟ್ಟಂತೆ."

ಎಂದು ಕಿರಣ ದನಿಗೂಡಿಸಿದಳು.

"ನನಗೆ ಮಾತ್ರ ಇಲ್ಲಿಯವರೆಗೆ ಕೂಲಿಕಾರರಲ್ಲಿ ಯಾವ ತಪ್ಪನ್ನೂ

ಹುಡುಕಲು ಅವಕಾಶವಾಗಲಿಲ್ಲ. ಮುಂದೆಯೂ ಆಗಲಾರದು ಎನ್ನುವ ಆಶೆಯಿದೆ. ಅವರ ಸರಳ, ನಿಷ್ಕಪಟ ಜೀವನವನ್ನರಿತ ಯಾರಿಗಾದರೂ ನನ್ನ ಮಾತಿನ ಸತ್ಯ ಮನಗಾಣದಿರುವದಿಲ್ಲ. ಕಾಲೇಜ್ ಹುಡುಗ ಹುಡುಗಿಯರೆಲ್ಲ ತಿಂಗಳಲ್ಲಿ ಒಂದೆರಡು ದಿನ ಒಂದೊಂದು ಮಿಲ್ಲಿಗೆ ಹೋಗಿ ಆ ಕೂಲಿಕಾರರೊಡನೆ ಸೇರಿ ಕೆಲಸ ಮಾಡಿದ್ದರೆ ಕೂಲಿಕಾರರ ವಿಷಯದಲ್ಲಿ ಎಲ್ಲರಿಗೂ ಮಮತೆ ಉಂಟಾಗಬಹುದಾಗಿತ್ತು. ಕೂಲಿಕಾರರಲ್ಲಿಯೂ ಶ್ರೀಮಂತರ ವಿಷಯಕ್ಕಿದ್ದ ಸಂಶಯ ದೂರವಾಗಲು ಅನುಕೂಲವಾಗುತ್ತಿತ್ತು. ಕೂಲಿಕಾರರ ವಿಷಯಕ್ಕಿದ್ದ ಈ ಸೋ ಕಾಲ್ಡ್ ವಿದ್ಯಾವಂತರ ಹೇಯವೂ ಕಡಿಮೆಯಾಗುತ್ತಿತ್ತು."

ಕೊಂಚ ಬಿಗುಮಾನದಿಂದಲೇ ಹೇಳಿದ ರಮೇಶ.

"ನನ್ನನ್ನೇ ಕುರಿತು ಹೇಳುತ್ತಿರಬೇಕು ಅಲ್ಲವೆ? ಎಂಟೆಂಟು ದಿನ ನೀರು ಕಾಣದೆ ನಾರುತ್ತಿರುವ ಆ ಕೂಲಿಗಳೊಡನೆ ನಾವು ಕೆಲಸ ಮಾಡಬೇಕು! ಅಂದರೇ ಅವರ ಅರ್ಥವಾಗುತ್ತದೆ ನಮಗೆ! ಹುಂ, ಎಲ್ಲರಿಗೂ ಒಂದೇ ಕೆಲಸ ಇರುವದಿಲ್ಲ. ನಿಮಗಾದರೆ ಕೂಲಿಕಾರರಲ್ಲಿಯೂ ನಿಮ್ಮಲ್ಲಿಯೂ ಏನೂ ಅಸಂಬದ್ಧತೆ ತೋರಲಿಕ್ಕಿಲ್ಲ. ನಿಮ್ಮ ಸಂಸ್ಕೃತಿಯೇ ಹಾಗಿರಬಹುದು. ಆದರೆ ನಾವೇನೂ ಹಾಗಲ್ಲವಲ್ಲ."

ಮಾತಾಡುತ್ತ ಹೋದ ಹಾಗೆ ಕಿರಣ ಉತ್ತೇಜಿತಳಾಗತೊಡಗಿದ್ದಳು. ಗುಲಾಬಿ ಬಣ್ಣದ ಗಲ್ಲಗಳು ಈಗ ರಕ್ತ ಚೆಲ್ಲುವಂತೆ ಕೆಂಪಾಗಿದ್ದವು. ಆ ದಿಟ್ಟ ಕಣ್ಣುಗಳಲ್ಲಿ ವಿಲಕ್ಷಣ ಹೊಳಪು ಬಂದಿತ್ತು. ಅಷ್ಟು ನಿಃಸಂಕೋಚವಾಗಿ, ನಿಚ್ಚಳವಾಗಿ ಆಕೆ ಯಾರಿಂದಲೂ ನುಡಿಸಿಕೊಂಡಿರಲಿಲ್ಲ. ತುಂಬ ಸಿರಿವಂತಳಾಗಿದ್ದರೂ ಶಾಲೆ ಕಾಲೇಜುಗಳಲ್ಲೆಲ್ಲ ತನ್ನ ಶಾಂತ, ಸ್ನಿಗ್ಧ ಸ್ಮಿತದಿಂದ ಎಲ್ಲರನ್ನೂ ತನ್ನವರಾಗಿಸಿಕೊಂಡಿದ್ದಳಾಕೆ.

ಎಲ್ಲರೂ ಮಿಸ್. ತಾವಡೇಕರ್‌ಳೊಡನೆ ಮಾತಾಡುವದೊಂದು ಸೌಭಾಗ್ಯ ಎಂದು ತಿಳಿಯುತ್ತಿದ್ದರು. ಆದರೆ ಯಾರೂ ಎರಡು ನಿಮಿಷಕ್ಕಿಂತ ಹೆಚ್ಚು ಅವಕಾಶ ಪಡೆಯುತ್ತಿರಲಿಲ್ಲ. ಎಷ್ಟು ಸಹಜವಾಗಿ 'ನೋಡಿ, ನೀವು ಹೀಗೆ ಕಣ್ಣಲ್ಲಿ ಕಣ್ಣಿಟ್ಟು ಮಾತಾಡುತ್ತ ನಿಂತುಬಿಟ್ಟರೆ ನೀವು ಪ್ರೇಮದಲ್ಲಿ ಬಿದ್ದಿದ್ದೀರಿ ಅಂತ ಸುತ್ತಲಿನ ಜನರೆಲ್ಲ ತಪ್ಪು ತಿಳಿಯುತ್ತಾರೆ' ಎಂದು ತಮಾಶೆಯಾಗಿ ನಕ್ಕು ಆತನಿಂದ ಏನಾದರೂ ಉತ್ತರ ಬರುವ ಮೊದಲೇ 'ಹಲೋ, ಸಾವರ್‌ಕರ್.'

ಎಂದು ಮತ್ತೆ ಯಾರನ್ನೋ ಕರೆಯುತ್ತ ಆಚೆ ತಿರುಗಿಬಿಡುತ್ತಿದ್ದಳು. ಆ ಎರಡನೇಯವನ ಗತಿಯೂ ಅಷ್ಟೆ.

"ನೋಡಿ, ನಿಮಗಾಗಿ ಕಾಲೇಜನ್ನೆಲ್ಲ ನಾಲ್ಕು ಬಾರಿ ಸುತ್ತುಹಾಕಿದೆ"

ಎಂದು ಕನಿಷ್ಟ ಅರ್ಧ ತಾಸಾದರೂ ಆಕೆಯೊಡನೆ ಮಾತಾಡುವ ಸಿದ್ಧತೆ ಯಿಂದ ಆತ ಆರಂಭಿಸುತ್ತಿದ್ದನು.

"ನನಗೂ ಹಾಗೆಯೇ ಆಯಿತು. ನಾನು ಒಂದು ಪಕ್ಕದ ತಿರುವನ್ನು ದಾಟುವಷ್ಟರಲ್ಲಿ ನೀವು ಇನ್ನೊಂದು ಗೋಡೆಯ ಮೂಲೆಯನ್ನು ದಾಟಬಿಡು ತ್ತಿದ್ದಿರಿ. ಹೇಳಿ, ಏನಾದರೂ ಕೆಲಸವಿತ್ತೆ?"

"ಹುಂ, ಮೊನ್ನೆ ಮ್ಯಾಟನಿಗೆ ಬರುತ್ತೇನೆ ಎಂದಿರಿ. ಎಲ್ಲೆಲ್ಲಿಯೂ ಕಾಣಿಸಲಿಲ್ಲ."

"ಆಯ್ ಎಮ್ ವ್ವೆರಿ ಸಾರಿ. ಅದ್ಯಾವದೋ ಮಹಿಳಾ ಮಂಡಳದ ಕಾರ್ಯಕ್ರಮಕ್ಕೆ ಒಂದು ರಂಗೋಲಿ ಬರೆದುಕೊಡು ಅಂತ ಶ್ರೀಮತಿಯಮ್ಮ, ಚಂಪಾದೇವಿ ಅಂತ ಯಾರು ಯಾರೋ ಮನೇತನಕ ಬಂದಿದ್ದರು. ಸಿನೇಮಾಕ್ಕೆ ಹೋಗಬೇಕಾಗಿದೆ ಅಂದೆ. ಆ ಮಹಿಳೆಯರನ್ನು ಕರೆದು ತಂದಿದ್ದ ಪಕ್ಕದ ಮನೆ ಮಾಲಿನಿ 'ಯಾರೋ ಅದು ಅಷ್ಟು ಪರ್ಟಿಕ್ಯುಲರ್ ಆಗಿ ಎಂಗೇಜ್‌ಮೆಂಟ್ ಕೊಟ್ಟರೋರು?' ಅಂತ ಗೇಲಿ ಮಾಡಿಬಿಟ್ಟಳು. ಅಷ್ಟಾದ ಮೇಲೆ ಇನ್ನೂ ಪಟ್ಟು ಹಿಡಿಯಲಿಕ್ಕಾಗುತ್ತದೆಯೇ ನೀವೇ ಹೇಳಿ. ಅಚ್ಛಾ – ಸೋ, ಲಾಂಗ್"

ಎಂದು ಕೈ ಮಾಡಿ ಆತ ಮುಂದಿನ ಮ್ಯಾಟನಿ ವಿಷಯ ಎತ್ತುವ ಮೊದಲೇ ಅತ್ತ ಹೋಗುತ್ತಿದ್ದ ಮತ್ತೆ ಯಾರೋ ವಿದ್ಯಾರ್ಥಿನಿಯನ್ನು ಕರೆಯುತ್ತ ಆಕೆ ಯೊಡನೆ ಎಲ್ಲಿಲ್ಲದ ಮೈತ್ರಿ ಎಂಬಂತೆ ಹೆಗಲಮೇಲೆ ಕೈ ಹಾಕಿಕೊಂಡು ಕೆಂಟೀನ ದತ್ತ ನಡೆದು ಬಿಡುತ್ತಿದ್ದಳು.

ಹಿಂದೆಯೂ ಕಾಲೇಜಿನಲ್ಲಿ, ಹೊರಗೆ ಕಿರಣ ಬಹಳಷ್ಟು ವಾದವಿವಾದ ಮಾಡಿದ್ದಳು. ಆಗಲೂ ತತ್ವಕ್ಕಾಗಿ ಎರಡೂ ಪಕ್ಷಗಳಲ್ಲಿ ಬಿಸಿ ಮಾತುಗಳಾಗು ತ್ತಿದ್ದವು. ಆದರೆ ಅಂಥ ಸಂದರ್ಭಗಳಲ್ಲೆಲ್ಲ ಕಿರಣಳ ವಾದದಂತೆಯೇ ನಿಷ್ಕರ್ಷೆಗಳಾ ಗುತ್ತಿದ್ದುದು ಬಹಳ. ಹಾಗೆ ಒಮ್ಮತವಾಗದಿದ್ದ ಕೆಲವೇ ಪ್ರಸಂಗಗಳಲ್ಲಿ 'ನೋಡಿ, ನಮ್ಮ – ನಿಮ್ಮ ವಿಚಾರಗಳು ಉಳಿದೆಲ್ಲ ವಿಷಯಗಳಲ್ಲಿ ಕೂಡುತ್ತಿದ್ದರೂ ಇದೊಂದರಲ್ಲಿ ಕೂಡುವಂತೆ ಕಾಣಲಿಲ್ಲ. ಏಳಿ ಕೆಂಟೀನಿಗೆ ಹೋಗೋಣ'

ಎಂದು ಎದುರು ಪಕ್ಷದಿಂದ ಒಪ್ಪಂದದ ಸೂಚನೆ ಬರುತ್ತಿತ್ತು. ಹಾಗೆ ಇಬ್ಬರ ವಿಚಾರಗಳೂ ಕೂಡುವ ಆ ಹಲವಾರು ಸಂಗತಿಗಳು ಯಾವವೆಂದು ಆಕೆಗೂ ಗೊತ್ತಿರಲಿಲ್ಲ, ಅವನಿಗೂ ಗೊತ್ತಿರಲಿಲ್ಲ. ಆದರೆ ಹಿಂದೆಂದೂ ಕಿರಣಳ ವ್ಯಕ್ತಿ ವಿಚಾರವನ್ನಾಗಲಿ, ವ್ಯಕ್ತಿ ಸ್ಥಾನವನ್ನಾಗಲಿ ಆಕೆಯ ಮುಂದೆಯೇ ಯಾರೂ ಹೀಗಳೆದಿರಲಿಲ್ಲ.

ಶೇಖರನಿಗೆ ಲಕ್ಷಾಧೀಶರ ಮನೆತನದ ಈ ಅಭಿಮಾನೀ ಹುಡುಗಿಯ ಈ ಎಲ್ಲ ವಿಷಯ ಪೂರ್ಣ ಪರಿಚಯವಿತ್ತು. ರಮೇಶನಂಥ ಶಾಂತ, ಮೃದು, ಸ್ವಭಾವದ ಮನುಷ್ಯ ಹಾಗೇಕೆ ಮಾತಾಡಿದ ಎಂದು ಅವನಿಗೂ ಬೇಸರ ವಾಯಿತು. ಇದನ್ನು ಮುಂದೆ ಬೆಳೆಯಗೊಡಬಾರದೆಂದು ಹೇಳಿದನು.

"ಕಿರಣ, ನೀವು ರಮೇಶನನ್ನು ಕ್ಷಮಿಸಬೇಕು, ಅವನೇನೂ ಹಾಗೆ ಹೇಳಬೇಕೆಂದು ಹೇಳಿರಲಾರನು. ಏನೋ ಮಾತಿಗೆ ಮಾತು ಬಂದಿತು. ನೋಡು, ರಮೇಶ ನಿನ್ನಂತೆ ಎಲ್ಲರ ಅಭಿಪ್ರಾಯವಿಲ್ಲ ಎಂದು ಏನೆಲ್ಲ ಆಡ ಬಾರದು. - ಮಾತಾಡುವಾಗ ಸ್ಥಾನಮಾನವನ್ನೂ ನೋಡಬೇಕು."

ಎಂದು ಹೇಳಿ ಲಾಲಾ ರಮೇಶನಿಂದ ಏನನ್ನೋ ಅಪೇಕ್ಷಿಸುವವರಂತೆ ಅವನನ್ನು ನೋಡಿದನು.

ರಮೇಶನಿಗೆ ತಾನು ಮಾಡಿದ ಮಹಾಪರಾಧದ ಅರ್ಥವಾಗದಿದ್ದರೂ ಲಾಲಾನ ದೃಷ್ಟಿ ಅರ್ಥವಾಯಿತು. ತಾನು ಆ ಹುಡುಗಿಯ ಕ್ಷಮೆಬೇಡ ಬೇಕಾಗಿತ್ತು! ಆಕೆಯೂ ತನ್ನ ಸಂಸ್ಕೃತಿಯ ಬಗ್ಗೆ ಏನೇನೋ ಹೇಳಿದ್ದಳಲ್ಲ! ಆದರೇನಾಯಿತು? ತಾನು ಯಾರು? ಲಾಲಾನ ಅಧಿಕಾರದಲ್ಲಿದ್ದ ಒಬ್ಬ ಕೆಲಸದವ. ಪರಿಚಯವಾಗಿ ಅರ್ಧ ತಾಸೂ ಆಗದಿರುವಾಗ ಕಾರಿನಲ್ಲಿ ಅಡ್ಡಾಡುವ ಈ ಚಂದ್ರಲೋಕದ ಹುಡುಗಿಗೆ ನಾಲ್ಕು ನಿಷ್ಠುರ ಮಾತು ಹೇಳಿದ್ದು ತನ್ನ ತಪ್ಪು. ತಾನು ತಮಾಷೆಗೆ ಹೇಳಿದ್ದರೇನಾಯಿತು. ಹಾಗೆ ತಮಾಶೆ ಮಾಡಲು ತನಗೇನು ಅಧಿಕಾರವಿದೆ!

ಲಾಲಾ ಹೇಳಿದನಲ್ಲ ಸ್ಥಾನ ಮಾನ ನೋಡಬೇಕು ಎಂದು. ರಮೇಶನ ಮೋರೆ ಕೆಂಪಾಯಿತು. ಸಿಟ್ಟಿನಿಂದಲ್ಲ ನಾಚಿಕೆ, ಅವಮಾನದಿಂದ. ತಾನು ಇವರೊಡನೆ ಸಮಾನವಾಗಿ ಚಹ ಕುಡಿಯುವದು ಎಂಥ ದಿಟ್ಟತನ ಎಂದು

ಕೊಂಡನು. ಅದು ಲಾಲಾನ ದೊಡ್ಡಸ್ತನ ತೋರಿಸುತ್ತದೆ ತನಗೆ ಉಚ್ಚ ಪದವಿ ಕೊಡುವದಿಲ್ಲ. ಎಂಥ ತಪ್ಪಾಗಿಬಿಟ್ಟಿತು!

ಇಷ್ಟೆಲ್ಲ ವಿಚಾರ ಕ್ಷಣಾರ್ಧದಲ್ಲಿ ರಮೇಶನ ಮನಸ್ಸಿನಲ್ಲಿ ಸುಳಿದು ಹೋಗಿದ್ದಿತು. ಚಟ್ಟನೆ ಕುಳಿತಲ್ಲಿಂದ ಎದ್ದು ನುಡಿದನು

"ಕ್ಷಮಿಸಿ, ಮಿಸ್. ತಾವಡೇಕರ್. ಮಾತಿನ ಭರದಲ್ಲಿ ಏನೇನೋ ಹೇಳಿಬಿಟ್ಟೆ. ಈಗ ನಾಚಿಕೆಯಾಗುತ್ತದೆ. ನಿಜವಾಗಿಯೆಂದರೆ ನಾವೀಗ ಮಾತಾಡಿದ ವಿಷಯ ನನಗಿನ್ನೂ ಪೂರ್ತಿ ಅರಿಯದಿದ್ದುದು. ನೀವಾದರೆ ಇಲ್ಲಿಯೇ ಹುಟ್ಟಿ ಬೆಳೆದವರು. ಮಿಲ್ಲಿನ ಮಾಲೀಕರಾಗಿದ್ದ ನಿಮಗೆ ಈ ಸಂಗತಿ ಸಹಜವಾಗಿಯೇ ಚನ್ನಾಗಿ ಮನವರಿಕೆಯಾಗಿದೆ. ನಾನಿನ್ನೂ ಬಹಳ ಕಲಿಯ ಬೇಕು. ನಾನು ಹೇಳಿದುದನ್ನು ಮರೆತುಬಿಡಿ."

ಕೈಮುಗಿದು "ಯಾರದೋ ಫೋನು ಬಂದಂತಿದೆ" ಎನ್ನುತ್ತ ರಮೇಶ ಹೋಗಲುವಾದ.

"ಚಹ ಹಾಗೆಯೇ ಬಿಟ್ಟೆಯಲ್ಲ"

ಗಿರಿಜಾತಾಯಿ ಹೇಳಿದಳು.

"ನೋಡಲೇ ಇಲ್ಲ, ಕಾಕೀ."

ಎಂದು ಕಪ್ಪಿನಲ್ಲಿ ಉಳಿದಿದ್ದ ಚಹವನ್ನು ಬಾಯಿಗೆ ಸುರುವಿಕೊಂಡು ರಮೇಶ ತನ್ನ ಖೋಲಿಗೆ ನಡೆದುಬಿಟ್ಟನು.

ಅವನ ಹಿಂದೆಯೇ ನೋಡುತ್ತ ಗಿರಿಜಾತಾಯಿ ಹೇಳಿದಳು.

"ಪಾಪ, ಕೆಲಸ ಅಂದರಾಯಿತು. ಎಲ್ಲವನ್ನೂ ಮರೆತುಬಿಡುತ್ತಾನೆ. ನಿನ್ನ ಪರಿಚಯವಿನ್ನೂ ಆಗಿರಲಿಲ್ಲ, ಕಿರಣ. ಇಲ್ಲದಿದ್ದರೆ ಹುಡುಗ ತುಂಬ ಒಳ್ಳೆಯವನು, ವಿನಯಶಾಲಿ, ಇಷ್ಟಕ್ಕೆಲ್ಲ ಮನಸ್ಸಿಗೆ ಹಚ್ಚಿಕೊಳ್ಳಬಾರದು."

"ವಿಲಕ್ಷಣ ಮ್ಯಾನೇಜರರನ್ನು ತಂದಿದೀರಿ ಲಾಲಾ. ಆದರೂ ಬಿಸಿನೆಸ್ ಮಾತ್ರ ಚನ್ನಾಯೇ ನಡೆಯುತ್ತದೆ ಅನ್ನುತ್ತೀರಲ್ಲ ಆಶ್ಚರ್ಯ. ಕ್ಷಮಿಸಿ ಎಂದು ಹೇಳಿ ದೇವರಿಗೆ ಮಾಡುವ ಹಾಗೆ ನನಗೆ ಕೈಮುಗಿದುಬಿಟ್ಟು ನಾನೇನಾದರೂ ಹೇಳುವ ಮೊದಲೇ ಓಡಿಬಿಟ್ಟರು."

"ನಾಚಿಕೊಂಡ ಅಂತ ಕಾಣಿಸುತ್ತದೆ. ಹೋಗಲಿ ಬಿಡಿ. ನಮ್ಮನೇಲಿ ಒಬ್ಬ ಜಗಳಗಂಟ ಇದ್ದಾನಂತ ಇಲ್ಲಿ ಬರುವದನ್ನೇ ಬಿಟ್ಟುಬಿಡಬೇಡಿ. ಏಳಿ,

ಬ್ಯಾಡ್‌ಮಿಂಟನ್ ಆಡದೆ ಕೈಗೆ ತುಕ್ಕುಹಿಡಿದುಹೋಗಿದೆ. ಅಷ್ಟು ಕ್ಲಬ್ಬಿಗೆ ಹೋಗಿ ಬರೋಣ."

ಇಬ್ಬರೂ ಏಳುವಷ್ಟರಲ್ಲಿ ಕಿರಣಳ ಮನೆಯ ಮನುಷ್ಯ ಹಣ್ಣಿನ ಬುಟ್ಟಿ ಹೊತ್ತು ತಂದನು.

"ನೋಡಿ ಎರಡು ಹಣ್ಣು ಅಂದರೆ ಒಂದು ಬುಟ್ಟಿ ತಂದಿದೀರಿ"

ಅದರ ತುಂಬೆಲ್ಲ ಬಣ್ಣಬಣ್ಣವಾಗಿ ಸರಿಪಡಿಸಿದ್ದ ಹಣ್ಣುಗಳನ್ನು ನೋಡಿ ಮೆಚ್ಚುತ್ತ ಲಾಲಾ ಹೇಳಿದನು.

"ತಪ್ಪು ನಂದಲ್ಲ. ನಿಮಗಾಗಿ ಎರಡು ಹಣ್ಣು ತರೋಣಾಂತ ಶೈಯಾನಾ ಬಾಗ್ ಅನ್ನೋ ಹಣ್ಣಿನ ತೋಟಕ್ಕೆ ಹೋಗಿದ್ದೆ. ಬೇಡ ಬೇಡ ಅಂದರೂ ಅಲ್ಲಿಯ ಮರಗಳು ಎರಡು ನೂರು ಹಣ್ಣು ಉದುರಿಸಿಬಿಟ್ಟವು. ನೂರನ್ನು ನಾನಿಟ್ಟುಕೊಂಡು ಮತ್ತೆ ನೂರನ್ನು ಇಲ್ಲಿಗೆ ತರಲು ಹೇಳಿದ್ದೆ."

ಗಿರಿಜಾತಾಯಿ ಎರಡು ಸಫರ್‌ಚಂದಗಳನ್ನು ಆಯ್ದು ಹೆಚ್ಚಿದಳು. ಎರಡು ತುಂಡುಗಳನ್ನೂ ಮತ್ತೆರಡು ಅಂಜೀರಿ ಹಣ್ಣುಗಳನ್ನೂ ಆಯ್ದು ಒಂದು ಬಸಿಯಲ್ಲಿಟ್ಟು ನಾನಾನನ್ನು ಕರೆದು ರಮೇಶನಿಗೆ ಕೊಡಹೇಳಿದಳು.

"ನೀನೂ ತಿನ್ನು, ಕಿರಣ. ನನ್ನ ಕೈಲಿ ಹೆಚ್ಚಿದ ಹಣ್ಣಿಗೆ ಬೇರೆ ರುಚಿ ಬರುತ್ತದೆ"

ಕಿರಣನ್ನ ಗಿರಿಜಾತಾಯಿ ಉಪಚರಿಸಿದಳು.

ಕಿರಣಳಿಗೆ ಏನೆನಿಸಿತೋ. ನಾನಾ ಕೈಯಿಂದ ಬಸಿ ಕಸಿದುಕೊಂಡು,

"ನಾನೇ ಕೊಟ್ಟು ಬರುತೀನಿ ನಿಮ್ಮ ಅಮೂಲ್ಯ ಮ್ಯಾನೇಜರರಿಗೆ"

ಎಂದು ಹೇಳಿ ರಮೇಶನ ಖೋಲಿಯತ್ತ ನಡೆದಳು.

"ನೀವೇಕೆ ಶ್ರಮವಹಿಸಿದಿರಿ? ನಾನಾ ತರುತ್ತಿದ್ದ."

"ನಾನಾ ಕೆಲಸ ನಾನೇ ಮಾಡಬೇಕು ಅನ್ನಿಸಿತು. ಶ್ರೀಮಂತರೆಲ್ಲ ಕೆಲಸಗಾರರೊಡನೆ ಸೇರಿ...."

"ನೋಡಿ, ನನ್ನನ್ನು ಮತ್ತೆ ನಾಚಿಕೆಗೀಡು ಮಾಡುತ್ತಿದ್ದೀರಿ. ನಾನು ಹಣ್ಣು ತಿನ್ನೋದಿಲ್ಲ."

"ಆಗ ಅಷ್ಟೆಲ್ಲ ದೊಡ್ಡ ಕ್ಷಮೆ ಬೇಡುವಷ್ಟು ಯಾವ ತಪ್ಪು ಮಾಡಿದಿರಿ

ಅಂತ ನನಗೇ ತಿಳೀಲಿಲ್ಲ. ಸಿಟ್ಟಿನ ಭರದಲ್ಲಿ ನಾನೂ ಒಂದೆರಡು ಮಾತು ಹೇಳಿದ್ದೆ. ಅದಕ್ಕೆ ನಾನೇ ಹಣ್ಣು ಕೊಡುತ್ತೇನೆ ಎಂದು ಹೇಳಿ ತಂದುಬಿಟ್ಟೆ."

"ಲಂಚ ಕೊಡಲು ಅಲ್ಲವೆ ?"

ಅಷ್ಟು ಹೇಳಿ ರಮೇಶ ನಾಲಿಗೆ ಕಚ್ಚಿಕೊಂಡನು. ಈ ಹೆಮ್ಮೆಯ ಮಗಳು ಮತ್ತೆ ತನಗೆ ಅಪಮಾನವಾಯಿತು ಎಂದು ತಿಳಿದುಕೊಂಡರೆ! ರಮೇಶನ ವಿಚಾರ ಆಕೆಗೂ ತಿಳಿದಿರಬೇಕು. ನಗುತ್ತ ಹೇಳಿದಳು,

"ಹುಂ, ಬಡವರನ್ನು ಹತ್ತಿಕ್ಕಲು ಲಂಚವೂ ಒಂದು ಆಯುಧ ಅಲ್ಲವೆ ಶ್ರೀಮಂತರಿಗೆ ?"

"ಮಾತಾಡಲು ನೀವು ಇಷ್ಟು ಜಾಣರಿದ್ದೀರಿ ಎಂದು ಮೊದಲೇ ತಿಳಿದಿದ್ದರೆ ನಾನು ನಿಮ್ಮೊಡನೆ ವಾದಕ್ಕೇ ಬರುತ್ತಿರಲಿಲ್ಲ"

ಎಂದು ಹೇಳಿ ರಮೇಶ ಹಣ್ಣಿನ ಹೋಳನ್ನೆತ್ತಿಕೊಂಡನು. ಕಿರಣ ತಾನೂ ಒಂದು ತುಣುಕನ್ನೆತ್ತಿ ಬಾಯಿಗೆ ಹಾಕಿಕೊಂಡು ಅಷ್ಟು ಹೊತ್ತಿಗೆ ಹೊರಗೆ ಬಂದಿದ್ದ ಲಾಲಾನೊಡನೆ ಹೊರಟು ಕಾರಿನಲ್ಲಿ ಕುಳಿತಳು. ಕಾರು ಅಯರ್ವಿನ್ ಕ್ಲಬ್ಬಿನತ್ತ ಹೋಯಿತು.

ರಮೇಶ ಹಣ್ಣು ತಿನ್ನುತ್ತ 'ಜಗತ್ತು ವಿಚಿತ್ರ' ಎಂದುಕೊಂಡನು.

೮

"ನಮಸ್ತೇ, ಪ್ರೊಫೆಸರ್"

"ಹಾಂ, ಗುಡ್ ಬ್ಯಾಡ್‌ಮಿಂಟನ್, ಮಿಸ್. ತಾವಡೇಕರ್. ನಿಮ್ಮದೇ ದಾರಿ ನೋಡುತ್ತಿದ್ದೆವು. ಆಗಲೇ ನಾವು ಆಡುತ್ತಿದ್ದ ಹಾಗೆ ಒಮ್ಮೆಲೇ ಆವೇಶ ಬಂದವರಂತೆ ಶಟ್ಲು ಕುಣಿಯತೊಡಗಿದಾಗಲೇ ಅನ್ನಿಸಿತು, ನಿಮ್ಮ ಬೆಳಕು ಇತ್ತ ಮುಂಬಯಿಯಲ್ಲಿ ಎಲ್ಲಿಯೋ ಬಿದ್ದಿರಬೇಕು ಎಂದು. ಅದಕ್ಕೆ ಇದ್ದುದನ್ನೆಲ್ಲ ಬಿಟ್ಟು ಬಾಗಿಲಿಗೆ ಬಂದು ನಿಂತುಕೊಂಡೆ. ಮಿ. ಮಾಹುಲಿ, ಇವರು ಮಿಸ್ ಚ್ಯಾಂಪಿಯನ್ ತಾವಡೇಕರ್ ಅಂತ. ವಿಲ್ಸನ್ ಕಾಲೇಜಿನ ಸ್ಟಾರುಗಳಲ್ಲಿ, ಬ್ಯಾಡ್‌ಮಿಂಟನ್‌ನಲ್ಲಿ, ಕೋಕಾಕೋಲಾ ಕುಡಿಯುವದರಲ್ಲಿ, ದಿವಸಕ್ಕೆ ಹನ್ನೆರಡು ಸಾರೆ ಸೀರೆ ಬದಲು ಮಾಡುವದರಲ್ಲಿ, ಕಾಲೇಜು ಹುಡುಗರ ಹಾರ್ಟ್ ಬ್ರೇಕ್ ಮಾಡುವದರಲ್ಲಿ – ಎಲ್ಲದರಲ್ಲಿಯೂ ಚಾಂಪಿಯನ್. ಮಿಸ್. ೧೯೫೩ ರ ಕಾಂಪಿಟೇಷನ್ನಿಗೆ ಇವರು ನಿಲ್ಲದೆ ಕುಳಿತುಬಿಟ್ಟದ್ದರಿಂದ ಆ ಚಾನ್ಸು ಇಂಡಿಯಾಕ್ಕೆ ತಪ್ಪಿಹೋಯಿತು. ಮಿಸ್ ತಾವಡೇಕರ್, ಇವರು ಮಿಸ್ಟರ್ ಮಾಹುಲಿ. ನಿಮ್ಮ ಚಿತ್ತಳೆ ಕಂಪನಿಯ ಮ್ಯಾನೇಜರರು. ಚನ್ನಾಗಿ ಬ್ಯಾಡ್ ಮಿಂಟನ್ ಆಡುತ್ತಾರೆ. ಅಪ್ಪಿತಪ್ಪಿ ಇಂಟರ್ ನ್ಯಾಷನಲ್ ಚ್ಯಾಂಪಿಯನ್ ಶಿಪ್‌ಗೆ ಇವರೂ ಹೆಸರು ಕೊಟ್ಟರೆ ನಿಮ್ಮ ಸ್ಥಾನಕ್ಕೆ ಸಂಕಟ ಒದಗಿದಂತೆಯೇ. ಅದಕ್ಕೆ ನೀವು ಇವರ ಪರಿಚಯ ಮಾಡಿಕೊಂಡು ಒಪ್ಪಂದ ಮಾಡಿಕೊಳ್ಳಬೇಕು."

"ನೀವು ಇಷ್ಟೆಲ್ಲ ಉಸಿರು ಹಾಳು ಮಾಡದಿದ್ದರೂ ನಡೆಯುತ್ತಿತ್ತು,

ಪ್ರೊಫೆಸರ್. ನನಗೆ ಈಗಾಗಲೇ ಮಾಹುಲಿಯವರ ಪರಿಚಯವಾಗಿದೆ. ನೀವು ಬಹುಶಃ ಲಾಲಾಗಾಗಿ ಕಾಯುತ್ತಿರಬೇಕಲ್ಲವೆ ? ನನಗೆ ಫೋನ್ ಮಾಡಿದ್ದರು. ಈಗಾಗಲೇ ಬರಬಹುದು"

ಎಂದು ಕಿರಣ ರಮೇಶನತ್ತ ತಿರುಗಿ ಕೇಳಿದಳು.

"ಲಾಲಾಗಾಗಿ ಎಂದೇನೂ ಇಲ್ಲ. ಪ್ರೊಫೆಸರ್‌ರೊಡನೆ ಹೀಗೆಯೇ ಬಂದಿದ್ದೆ. ಬ್ಯಾಡ್‌ಮಿಂಟನ್ ಆಡೋಣ ಅಂದರು. ಸ್ವಲ್ಪ ಹೊತ್ತು ಆಡಿ ಮಾತಾಡುತ್ತ ನಿಂತಿದ್ದೆವು"

ಎಂದು ರಮೇಶ ತನ್ನ ಆಕಸ್ಮಿಕ ಭೆಟ್ಟಿ ಬಗೆಗೆ ಹೇಳಿದ.

"ಅಂದರೆ, ಆಡುವದಂತೂ ನಿಜ ಅಂದಹಾಗಾಯಿತಲ್ಲ."

"ಏನೋ ಹೀಗೇನೇ. ನೀವು ಯಾವಾಗಲೂ ನಿಮ್ಮ ಅಯರ್ವಿನ್ ಕ್ಲಬ್ಬಿನಲ್ಲಿಯೇ ಆಡುತ್ತೀರಂತಲ್ಲ ? ಈವತ್ತು ಇಲ್ಲಿ ?"

"ಹುಂ, ಆಡುವ ಹೌಸು ಬಹಳ ಇದ್ದರೆ ಇಲ್ಲಿ ಬರುತ್ತೇನೆ. ಇಲ್ಲಿ ನಿಜವಾಗಿ ಆಡುವವರು ಸಿಕ್ಕುತ್ತಾರೆ. ಅಲ್ಲಾದರೆ ತಾನು ಅಯರ್ವಿನ್ ಕ್ಲಬ್ ಸದಸ್ಯ ಎಂದು ಹೇಳಿಸಿಕೊಳ್ಳಲು ಮಾತ್ರ ಕಾರಿನಲ್ಲಿ ಬಂದು, ಮಳೆಗಾಳಿಯಲ್ಲಿ ಛತ್ರಿ ತಿರುಗಿಸುವಂತೆ ರ್‍ಯಾಕೆಟ್ ತಿರುಗಿಸುವ ಜನ ಬರುತ್ತಾರೆ........ನೋಡಿ, ಲಾಲಾ, ನಿಮ್ಮ ಮ್ಯಾನೇಜರರೂ ಬ್ಯಾಡ್‌ಮಿಂಟನ್ ಆಡುತ್ತಾರಂತೆ. ನನಗೆ ಹೇಳಲೇ ಇಲ್ಲ"

ಎಂದು ಕಿರಣ ಆಗಲೇ ಕಾರು ಇಳಿದು ಬರುತ್ತಿದ್ದ ಲಾಲಾನನ್ನು ನೋಡಿ ಕೇಳಿದಳು.

"ತಪ್ಪು ತಿಳಿದುಕೋಬೇಡಿ, ತಾವಡೇಕರ್. ಏನೋ ಹೀಗೇ ಆಡುತ್ತೇನೆ ಎಂದು ಹೇಳಿದೆನಲ್ಲ. ನಿಮ್ಮ ಆಟ ನೋಡಿ ಇನ್ನು ಕಲಿಯಬೇಕು."

ರಮೇಶ ಹೇಳಿದನು.

"ಹೇಗೂ ನಾಲ್ಕುಜನ ಇದ್ದೇವೆ. ಕಿರಣ, ನಾನೂ ರಮೇಶನ ಆಟ ನೋಡಲಿಲ್ಲ. ಯಾವಾಗಾದರೂ ಆಡುತ್ತೇನೆ ಎಂದಿದ್ದನು. ಹೇಳಿ ಪ್ರೊಫೆಸರ್ ನಿಮಗೆ ಯಾರುಬೇಕು ?"

ಎಂದು ಲಾಲಾ ಬಂದವನೇ ಮಾತಿಗೆ ಮೊದಲು ಮಾಡಿದ.

"ಯೂನಿಯನ್ ವ್ಹರ್ಸಸ್ ಅಯರ್ವಿನ್ ಆಗಲಿ. ನಾನು ರಮೇಶ ಒಂದಾಗುತ್ತೇವೆ. ದೊಡ್ಡಮನುಷ್ಯರ ಕ್ಲಬ್ಬಿನ ದೊಡ್ಡ ಮನುಷ್ಯರು ಒಂದಾಗಲಿ."

"ಕಡೆಗೆ, ತಮ್ಮ ಪಾರ್ಟಿ ವೀಕ್ ಇತ್ತು ಅಂದರೆ ಕೇಳೋಹಾಗಿಲ್ಲ. ಸೋತವರು ಪಾರ್ಟಿ ಕೊಡಬೇಕಾಗುವದು."

ಎಂದು ಮುಗುಳು ನಕ್ಕು ನುಡಿದು ಹುಬ್ಬು ಹಾರಿಸಿದಳು ಕಿರಣ.

"ನಿನ್ನೆಯೇ ಹೇಗೂ ಪಗಾರು ಆಗಿದೆ"

ಎಂದು ಹೋಕಾರಾರ್ಥವಾಗಿ ಪ್ರೊಫೆಸರ್ ಪಾರಿಖ್ ತಲೆಯಾಡಿಸಿದರು.

ಆಡುತ್ತಿದ್ದ ಯಾರೋ ಇಬ್ಬರು ಒಳಗೆ ಬರುತ್ತಿದ್ದ ಈ 'ದೊಡ್ಡ' ಮನುಷ್ಯರನ್ನು ನೋಡಿ ತಮ್ಮ ಆಟನಿಲ್ಲಿಸಿದರು.

"ನೋ, ನೋ.....ನೀವು ಆಡಬಹುದಲ್ಲ"

ಎಂದಳು ಕಿರಣ ಸೌಜನ್ಯಕ್ಕಾಗಿ.

"ಇಲ್ಲ, ನಮ್ಮಂಥವರು ಆಡೋದಕ್ಕಿಂತಲೂ ನೀವು ಚ್ಯಾಂಪಿಯನ್ಸು ಆಡೋದು ಹೆಚ್ಚು ಚೆನ್ನು"

ಎಂದನು ಅವರೊಳಗಿನವನೊಬ್ಬ.

"ಅದರಲ್ಲಿಯೂ ಪ್ರೊಫೆಸರರು ಕುಣಿದಾಡ ತೊಡಗಿದರೆಂದರೆ ಯಾವ ಕಥಕ್ಕಳಿಯೂ ಸುಳ್ಳು ಅನಿಸುತ್ತದೆ."

ಎನ್ನುತ್ತ ಮತ್ತೊಬ್ಬನೂ ಬದಿಗಾದನು. ಅವರಿಗೂ ಆಡಿ ದಣಿವಾಗಿತ್ತು.

ಪೂರ್ಣ ೨೫ ನಿಮಿಷಗಳ ನಂತರ ಆಟ ಮುಗಿದಾಗ ರಮೇಶ– ಪ್ರೊಫೆಸರ್‌ರ ಮೇಲೆ ಹನ್ನೊಂದು 'ಲವ್' ಗಳಾಗಿ ಶೇಖರ–ಕಿರಣ ಗೇಮು ತಿಂದಿದ್ದರು. ಕಿರಣಳ ಕಡೆಯ ಮುಕ್ಕಾಲು ಆಟವನ್ನೆಲ್ಲ ಆಕೆಯೇ ಆಡಿದ್ದಳು. ಲಾಲಾ ಸುಖಪುರುಷ ಸ್ವಭಾವದವನು. ಆಟದಲ್ಲಿ ತುಂಬ ಅಭಿರುಚಿಯಿದ್ದರೂ ಬಹಳ ಶ್ರಮವಹಿಸುವ ಗೊಡವೆಗೆ ಹೋಗುತ್ತಿರಲಿಲ್ಲ. ತನ್ನ ಸುತ್ತು ಬಂದರೆ ಮಾತ್ರ ಹೊಡೆಯುತ್ತಿದ್ದನು. ಕಿರಣ ಮಾತ್ರ ಜಿಗಿಯುತ್ತ ಇಡೀ ಕೋರ್ಟನ್ನೇ ಸುತ್ತಿ ಆಡುತ್ತಿದ್ದಳು.

ರಮೇಶ ಪ್ರೊಫೆಸರ್‌ರಿಬ್ಬರೂ ಕಿರಣಳಷ್ಟಲ್ಲವಾದರೂ ಚನ್ನಾಗಿಯೇ ಆಡುತ್ತಿದ್ದುದರಿಂದ ಕಡೆಗೆ ಗೆಲುವು ಅವರಿಗೇ ಆಗಿತ್ತು.

ತುಂಬ ದಣಿದು ಎಲ್ಲರೂ ಕ್ಲಬ್ ಕೆಂಟೀನ್ ಕಡೆಗೆ ನಡೆದರು.

" ಏನೋ ಹೀಗೇ ಎಂದು ಸುಳ್ಳುಹೇಳಿಬಿಟ್ಟೆರಿ, ನಾವು ಬೇಹುಷಾರಾಗಿರಲಿ ಅಂತ. ಇದೂ ಒಂದು ಡಿಪ್ಲೊಮಸಿ ಅಂತ ಕಾಣುತ್ತದೆ. ಬಹಳ ಚನ್ನಾಗಿ ಆಡುತ್ತೀರಿ."

ಹೋಗುತ್ತ ಕಿರಣ ಹೇಳಿದಳು. ಆಕೆಗಿಂದು ತುಂಬ ಸಮಾಧಾನವಾಗಿತ್ತು. ಅಷ್ಟು 'ಟಫ್ ಫ್ಯಾಟ್' ಆಕೆಗೆ ಅಂದಿನವರೆಗೆ ಯಾರೂ ಕೊಟ್ಟಿರಲಿಲ್ಲ.

" ನೋಡಿ ಬರೇ ಇಂಟರ್ ನ್ಯಾಶನಲ್ ಅಲ್ಲ. ಮಂಗಳ ನಕ್ಷತ್ರದೊಡನೆ ಆಗಲಿದ್ದ ಇಂಟರ್ ಯೂನಿವ್ವರ್ಸಲ್ ಪಂದ್ಯಕ್ಕೂ ನೀವು ನಿಲ್ಲುವಂತಿದ್ದೀರಿ ಎನ್ನುವವನಿದ್ದೆ ನಾನು. ಅದಕ್ಕೂ ಮೊದಲೇ ನೀವು ನನ್ನನ್ನು ಹೊಗಳಿಬಿಟ್ಟು ಕೆಡಿಸಿಬಿಟ್ಟೆರಿ. ಈಗ ನಾನೇನೆಂದರೂ 'ಉಪಚಾರಕ್ಕಾಗಿ' ಎಂದಾಗಿ ಬಿಡುತ್ತದೆ."

ಎಂದು ರಮೇಶನೂ ನುಡಿಯಬೇಕಾಯಿತು.

" ಹಾಗಾದರೆ ಹೇಳಲೇ ಬೇಡಿರಿ. ಬರೆದು ಕೊಟ್ಟುಬಿಡಿರಿ"

ಎಂದು ಸೂಚಿಸಿದರು ಪ್ರೊಫೆಸರರು.

" ಹಾಗೂ ಬೇಡ. ಇಬ್ಬರೂ ನನ್ನ ಕಿವೀಲಿ ಹೇಳಿಬಿಡಲಿ. ಅವರವರು ಹೀಗೆ ಹೀಗೆ ಹೇಳಿದರಂತ ಸುದ್ದಿ ಮುಟ್ಟಿಸುವ ಕೆಲಸ ನನ್ನದು"

ಎಂದು ಲಾಲಾ ಅನ್ನುತ್ತಿರುವಷ್ಟರಲ್ಲಿ ಪ್ರೊಫೆಸರರು ಕ್ಯಾಂಟೀನದಲ್ಲಿಯ ಹೆಚ್ಚು ಸುಖವಾಗಿದ್ದ ಒಂದು ಕುರ್ಚಿಯನ್ನು ಆರಿಸಿ ಕುಳಿತುಕೊಳ್ಳುತ್ತ ವೇಟರ್‌ಗೆ ಆರ್ಡರು ಕೊಟ್ಟರು.

" ಚಾರ್ ಎಕ್ಸಾಟ್ರ ಸ್ಪೆಶಲ್ ಗುಲಾಬ್ ಜಾಮೂನ್, ಚಾರ್ ಸ್ಪೆಶಲ್ ವಡಾ, ಚಾರ್ ಪ್ಲೇಟ್ ಸಮೂಸಾ, ಏಕ್‌ದಮ್ ಫಸ್ಟ್ ಕ್ಲಾಸ್ ಮಾಂಗ್‌ತಾ ಹೈ....ದೇಖೋ,....ಔರ್....ಚಾರ್ ಪ್ಲೇಟ್ ದಹಿ ವಡಾ....ಪೀನೇಕೋ.... ಅಭಿ ಚಾರ್ ಪ್ಯಾನಾಪಲ್ ಗ್ಲಾಸ್....ಬಾದ್‌ಮೆ ಔರ್ ಬೋಲೇಂಗೆ"

ಗಾಬರಿಗೊಂಡ ವೇಟರ್ ದಂಗಾಗಿ ತಮ್ಮೆಡೆ ನೋಡುವವದನ್ನು ಲೆಕ್ಕಿಸದೆ ಅವನನ್ನು ಕೈವಾಡಿ ಕಳಿಸಿ ಪ್ರೊಫೆಸರರು ಬದಿಯಲ್ಲಿಯ ಫ್ಯಾನ್ ಬಟನ್ ಒತ್ತಿ ಉಸ್ಸಪ್ಪಾ ಎಂದು ಕುಳಿತುಕೊಂಡು ನುಡಿದರು.

"ಆಚೆಗೆ ಹೋಗಿ ಫೋನುಮಾಡಿ ಬರುವ ಶಕ್ತಿಯೂ ಉಳಿಯಲಿಲ್ಲ. ಅಷ್ಟು ದಣಿವಾಗಿ ಬಿಟ್ಟದೆ."

"ಅದೇನ್ರಿ ಅಷ್ಟು ಅವಸರವಾಗಿ ಫೋನು ಮಾಡಬೇಕಾದ್ದು ?"

ಎಂದು ಹೇಳುತ್ತ ನಕ್ಕಳು ತಾವಡೇಕರ್.

"ವಿಶೇಷ ಏನಿಲ್ಲ. ಮನೆಯವಳಿಗೆ ಈವತ್ತಿನ ಊಟ ಕಾಥಾ ಎಂದು ಈಗಲೇ ತಿಳಿಸಿದ್ದರೆ ಒಂದು ಹೊತ್ತಿನ ಒಂದು ವ್ಯಕ್ತಿಯ ರೇಶನ್ ಉಳಿತಾಯ ವಾಗುತ್ತಿತ್ತು – ನನಗೂ, ರಾಷ್ಟ್ರಕ್ಕೂ ಕೂಡಿಯೇ – ಆ ಮುನ್ನಿಯ ಹೊಟ್ಟೆಯೂ ತಣ್ಣಗಾಗುತ್ತಿತ್ತು. ನೋಡು ರಮೇಶ್, ಪ್ರೊಫೆಸರರಿಗೆ ಸಿ. ಎಸ್. (ಕಾಮನ್ ಸೆನ್ಸ್ – ವ್ಯವಹಾರ ಜ್ಞಾನ) ಇಲ್ಲ ಎನ್ನುತ್ತಾರೆ. ನೋಡನೋಡುತ್ತಲೇ ಐದು ರೂಪಾಯಿ ಪಾರ್ಟಿಗಿಟ್ಟಸಿದೆ. ಇದು ಯಾರಿಗೆ ಶಕ್ಯವಿತ್ತು ?"

"ನಾವೇ ಸೋತಿದ್ದರೆ ?"

ಎಂದು ರಮೇಶ ಪ್ರಶ್ನಿಸಿದ.

"ಈಹೊತ್ತು ಶನಿವಾರ. ಹೋಟೆಲ್ ಫುಡ್ಡಿನಲ್ಲಿದ್ದ ಉಳ್ಳಾಗಡ್ಡೆ ಎಟ್ಸೆಟ್ರಾ ನಿಷಿದ್ಧ ಪದಾರ್ಥಗ್ಳನ್ನ ತಿನ್ನಬಾರದಂತ ಪವಿತ್ರ ಧರ್ಮ ಶಾಸ್ತ್ರಗಳಲ್ಲಿ ಹೇಳಿದ್ದನ್ನು ಎಲ್ಲರಿಗೂ ನೆನಪು ಮಾಡಿಕೊಡುತ್ತಿದ್ದೆ. ಪಾರ್ಟಿ ಸಹಜವಾಗಿ ಮುಂದಕ್ಕೆ ಪೋಸ್ಟ್‌ಪೋನ್ ಆಗುತ್ತಿತ್ತು. ಹೇಗಾದರೂ ಮಾಡಿ ನಾಳಿನ ರವಿವಾರವೊಂದನ್ನು 'ಔಡಲೆಣ್ಣೆಯ ಮೇಲೆ' ಕಳೆದುಬಿಟ್ಟೆನೆಂದರೆ ಮತ್ತೆ ಆರು ದಿನ ಯಾರ ಕಣ್ಣಿಗೂ ಬೀಳುತ್ತಿರಲಿಲ್ಲ. ಅರ್ಥಾತ್ ಪಾರ್ಟಿ ಇನ್ನೊಂದು ರವಿವಾರವೆನ್ನುವದರೊಳಗೆ ಮರೆತು ಹೋಗುತ್ತಿತ್ತು."

"ಇದು ವ್ಯವಹಾರ ಜ್ಞಾನ!"

ಎಂದು ವ್ಯಾಪಾರೀ ದೃಷ್ಟಿಯ ಮನೋಭಾವ ವಿವರಿಸಿದ ಲಾಲಾ.

"ಲಾಲಾಭಾಯ್, ಈ ಯುಗವನ್ನು ಆಟಂಯುಗ ಎಂದೋ, ಪ್ಲಾಸ್ಟಿಕ್ ಯುಗ ಎಂದೋ, ಸ್ತ್ರೀ ಪೋಲೀಸು ದಳದ ಯುಗ ಎಂದೋ ಏನೇನೋ ಹೆಸರಿಡುತ್ತಾರೆ. ಅದೆಲ್ಲ ಬಿಸ್ಸಾಡ್ ದಿ ಮಾರ್ಕ್. ಇದು ಡಿಪ್ಲೊಮೆಟಿಕ್ ಯುಗ.

“ನೀವು ಎಷ್ಟು ಹೆಚ್ಚು ಸುಳ್ಳು ಹೇಳುತ್ತೀರೋ, ಆ ಸುಳ್ಳಿನಿಂದ ಯಾವುದಕ್ಕಾದರೂ ಯಾರಿಗಾದರೂ ಉಪಯೋಗವಾಗುತ್ತದೆ ಎಂದು ಎಷ್ಟು ಹೆಚ್ಚು ಮನಗಾಣಿಸಲು ಶಕ್ಯರಾಗುತ್ತೀರೋ – ಆ ಉಪಯೋಗದಲ್ಲಿ ನಿಮ್ಮ ಸ್ವಂತದ ಲಾಭವಿದ್ದುದು ಮಾತ್ರ ಯಾರಿಗೂ ತಿಳಿದಿರಬಾರದು! – ಅಷ್ಟು ಹೆಚ್ಚಾಗಿ ಜನರಿಂದ ನೀವು ದೊಡ್ಡ ಮನುಷ್ಯರು, ಪ್ರಾಮಾಣಿಕರು, ದೇಶಪ್ರೇಮಿಗಳು ಎಂದೆಲ್ಲ ಅನಿಸಿಕೊಂಡು ಮರ್ಯಾದೆಗೆ ಪಾತ್ರರಾಗುತ್ತೀರಿ.

“ಹಿಟ್ಲರ್ ಕೆಲದಿನ ಹಾಗೆ ಸಿದ್ಧಮಾಡಲು ಶಕ್ಯನಾಗಿದ್ದನು. ಆದರೆ ತಲೆಯಿಲ್ಲದ ಮನುಷ್ಯ. ತನ್ನಲ್ಲಿ ಅಡಕವಾಗಿದ್ದ ಸ್ವಾರ್ಥವನ್ನು ಮುಚ್ಚಿಕೊಳ್ಳಲಾರದೆ ಹೋದನು. ನೆಪೋಲಿಯನ್ನಂದೂ ಅದೇ ಪಾಡಾಯಿತು. ಶೇಖ್ ಅಬ್ದುಲ್ಲಾಂದೂ ಇನ್ನೊಂದು ಉದಾಹರಣೆ.

“ಈಗ ಅಮೇರಿಕಾ, ರಷ್ಯಾ ಈ ಎಲ್ಲ ದೇಶಗಳೂ ಮಾಡುತ್ತಿದ್ದುದು ಇದನ್ನೇ. ಯಾರ ಸುಳ್ಳು ಹೆಚ್ಚು ಜನರ ಮನಸ್ಸಿಗೆ ಹಿಡಿಸುತ್ತದೋ ಅವರು ಜಯಶೀಲರಾಗುತ್ತಾರೆ. ಯಾರದು ಹಾಗೆ ಸಿದ್ಧವಾಗುವದಿಲ್ಲವೋ ಅವರು ಡೆಮಾಕ್ರಸಿಯ ವೈರಿಗಳು, ಶಾಂತಿಯ ಕುಠಾರಿಗಳು, ಜಗತ್ತಿನ ಮುನ್ನಡೆಗೆ ಅಡ್ಡಿ ಮಾಡುವವರು ಎಂದೆಲ್ಲ ಹೇಳಿಸಿಕೊಳ್ಳಬೇಕಾಗುತ್ತದೆ.

“ದೇಶದಲ್ಲಿ ಎಂಬೆಸಡರ್ಸ್ ಇರೋದು ಇದಕ್ಕೇನೇ. ಅವರಿಗೆ ಏನು ಕಲಿಸುತ್ತಾರೆ ಗೊತ್ತೆ? ‘ಸುಳ್ಳು ಹೇಳು.’ ಆದರೆ ಆ ಸುಳ್ಳಿನಿಂದ ಜಗತ್ತಿನ ಕಲ್ಯಾಣ ಮಾಡುತ್ತೇನೆ ಎಂದು ತೋರಿಸು. ಅದನ್ನು ಮುಚ್ಚಿಡುವ ವ್ಯರ್ಥ ಪ್ರಯತ್ನ ಮಾಡಬೇಡ. ಏಕೆಂದರೆ ಆ ಇನ್ನೊಂದು ಪಕ್ಷದವನೂ ಸುಳ್ಳು ಹೇಳಲೆಂದೇ ಬಂದಿದ್ದು ಅವನಿಗೆ ನೀನು ಸುಳ್ಳು ಹೇಳುತ್ತಿರುವ ಬಗ್ಗೆ ಪೂರ್ಣ ಖಾತ್ರಿ ಇದೆ.

“ತನ್ನ ಸುಳ್ಳನ್ನು ಖಾತ್ರಿ ಮಾಡಿದಷ್ಟು ಹೆಚ್ಚು ಆತ ತನಗೂ ತನ್ನ ದೇಶಕ್ಕೂ ಹೆಸರು ತರುತ್ತಾನೆ, ಹೆಸರಿನ ಸಂಗಡ ಮರ್ಯಾದೆಯು ದೊಡ್ಡಸ್ತನ ಬರುತ್ತದೆ, ಅದರ ಸಂಗಡ ಅಧಿಕಾರ ಬರುತ್ತದೆ. ಮಾನವ ಲೋಕವೇ ವ್ಯಕ್ತಿಶಃವಾಗಲಿ, ಸಂಸ್ಥೆಗಳಿಂದಾಗಲಿ ಅಧಿಕ್ಕಾರಕ್ಕಾಗಿ ಹವಣಿಸುತ್ತದೆ.”

ತಮ್ಮ ಮಾತು ಮುಗಿಸಿ ಪ್ರೊಫೆಸರರು ಸುತ್ತಲೂ ನೋಡಿದರು, ಕ್ಲಾಸಿನಲ್ಲಿ ಲೆಕ್ಚರು ಮುಗಿಸಿ ಗಂಭೀರವಾಗಿ ಸುತ್ತಲೂ ನೋಡುವಂತೆ. ಕ್ಷಣಕಾಲ

ಯಾರೂ ಮಾತಾಡಲಿಲ್ಲ. ಕುಳಿತವರಿಗೆಲ್ಲ ಬಹುಶಃ ತಾವು ಕಾಲೇಜಿನಲ್ಲಿದ್ದಂತೆಯೇ ಅನಿಸಿರಬೇಕು. ಪ್ರೊಫೆಸರರು ಆರೀತಿ ಗಂಭೀರವಾಗಿ ಮಾತಾಡುವದು ತೀರ ಅಪರೂಪವಾಗಿತ್ತು. ಜೀವನದ ವಿಷಯಕ್ಕೆ ತೀರ ನಿರ್ಲಿಪ್ತವಾಗಿದ್ದರೂ ಯಾವಾಗಲೂ ಹತ್ತಿರ ಇದ್ದವರನ್ನು ನಗಿಸುತ್ತ ಅವರೊಡನೆ ತಾವೂ ನಗುತ್ತಿರುವದೇ ಪ್ರೊಫೆಸರರ ಸ್ವಭಾವವೆಂದು ಅಲ್ಲಿದ್ದವರಿಗೆಲ್ಲರಿಗೂ ಗೊತ್ತಿತ್ತು.

## ೯

ಟೇಬಲ್ಲಿನ ಮೇಲಿನ ಈ ಗಂಭೀರತೆ ಕಿರಣಳಿಗೆ ಸಹನವಾಗಲಿಲ್ಲ. ಹೇಳಿದಳು,

" ನಿಮ್ಮನ್ನೇಕೆ ಎಂಬೇಸಡರ್‌ಶಿಪ್‌ಗೆ ಆರಿಸಲಿಲ್ಲ, ಸರ್ ?"

" ಏಕೆಂದರೆ ಸುಳ್ಳನ್ನು ಸತ್ಯ ಮಾಡುವದಷ್ಟೇ ಅಲ್ಲ, ಸತ್ಯವನ್ನೂ ಸುಳ್ಳು ಮಾಡುವ ಅಂಜಿಕೆ ಇದೆ ನಮ್ಮಂಥವರಿಂದ. ನಾವು ಕಾಲೇಜಿಗೇ ಯೋಗ್ಯ."

ಎಂದರು ಇನ್ನೂ ಅದೇ ಗಂಭೀರತೆಯ ಗುಂಗಿನಲ್ಲಿ ಪ್ರೊಫೆಸರ್.

" ನೀವು ಹೇಳುವ ರೀತಿಯಲ್ಲಿ ' ಜಗತ್ತಿನಲ್ಲಿ ಹೀಗಾಗದೇ ಗತ್ಯಂತರವೇ ಇಲ್ಲ ' ಎನ್ನುವ ಅಸಹಾಯಕತೆ ಇದೆ. ಅಂದಮೇಲೆ ' ಇದು ತಪ್ಪು ' ಎಂದು ಯಾರಿಗೂ ಅನ್ನಲು ಬರುವಹಾಗಿಲ್ಲವಲ್ಲ."

ರಮೇಶ ವಾದ ಆರಂಭಿಸಿದ.

" ನಾನೆಲ್ಲಿ ಅನ್ನುವ ಪ್ರಯತ್ನ ಮಾಡುತ್ತೇನೆ ? ಇಂದಿನ ಜಗತ್ತಿನ ರೀತಿಯನ್ನು ಬಣ್ಣಿಸಿದೆನಷ್ಟೆ. ಅದನ್ನು ತಪ್ಪು ಒಪ್ಪು ಎಂದು ನಿರ್ಣಯಿಸುವಷ್ಟು ಮೂರ್ಖತನಕ್ಕೆ ನಾನು ಹೋಗುವದಿಲ್ಲ. ಸೆಂಟ್ರಲ್ ರೈಲ್ವೆ ಹತ್ತಿ ಠಾಣೆಗೆ ಹೋಗುವದು ನನಗೆ ಎಂದೂ ಸೇರುವದಿಲ್ಲ."

" ಹಾಗಾದರೆ ಏನು ಸಾಧಿಸಿದ ಹಾಗಾಯಿತು ? ಹಿಟ್ಲರ್, ಶೇಖ್ ಅಬ್ದುಲ್ಲಾರು ಹುಟ್ಟುತ್ತಲೇ ಇರುತ್ತಾರೆ. ರಷ್ಯ – ಅಮೇರಿಕಗಳು ಒಂದರೆಡೆಗೆ ಒಂದು ಆಟಂಬಾಂಬುಗಳನ್ನು ಎಸೆಯುತ್ತಲೇ ಇರುತ್ತವೆ. ನೀವು ಕಾಲೇಜಿನ

ಹೊದೋಟದಲ್ಲಿ ಕುಳಿತು 'ಹೀಗಾಗದೇ ಇನ್ನೇನು ಆಗುತ್ತದೆ?' ಎಂದು ಕೈ ಕೊಡವಿ ಚಹ ಕುಡಿಯುತ್ತಲೇ ಇರುತ್ತೀರಿ"

ಪ್ರೊಫೆಸರನ್ನು ಮಾತಿಗೆ ಹಚ್ಚುವ ಬಯಕೆಯಿಂದ ನುಡಿದ ರಮೇಶ.

"ಊಹುಂ, ಕೋಕೋ....ಏ ಬಾಯ್ ನಾಲ್ಕು ಕಪ್ಪು ಸ್ಪೆಶಲ್ ಕೋಕೋ ಹೇಳು. ಗಡಬಡೆ ಮಾಡಬೇಡ. ಫಸ್ಟ್‌ಕ್ಲಾಸ್ ಆಗಿರಬೇಕು."

ಪ್ರೊಫೆಸರ್ ತನ್ನ ಗಮನವನ್ನು ವೇಟರ್ ಕಡೆಗೆ ತಿರುಗಿಸಿ ನುಡಿದರು.

"ಹಿಂದೊಮ್ಮೆ ಹೀಗೆಯೇ ಏನೋ ಮಾತು ಬಂದಾಗ ನಾನು ಹೇಳಿದ್ದು ನೆನಪಿದೆಯೆ, ಪ್ರೊಫೆಸರ್? ಜಗತ್ತಿನಲ್ಲಿಯ ಜನರಲ್ಲಿ ಸಾಂಸ್ಕೃತಿಕ ಏಕತೆಯ ವಿಚಾರ ಹುಟ್ಟಬೇಕು, ಸಾಂಸ್ಕೃತಿಕ ಒಮ್ಮುಖತೆ ಜನರ ಪ್ರಕೃತಿಯಾಗಿ ಬೆಳೆದು ಬಂದಿರಬೇಕು. ಒಬ್ಬ ಕಮ್ಯುನಿಸ್ಟು ಒಬ್ಬ ಕೆಪಿಟಾಲಿಸ್ಟು ಮಿತ್ರರಾಗಿ ಕೂಡಿರಲು ಶಕ್ಯವಾದರೆ ಒಂದು ಕಮ್ಯುನಿಸ್ಟ್ ರಷ್ಯಾ, ಒಂದು ಡೆಮಾಕ್ರೆಟಿಕ್ ಅಮೆರಿಕ ಏಕೆ ಕೂಡಿರಲು ಶಕ್ಯವಾಗುವದಿಲ್ಲ? ಎರಡು ದೇಶಗಳಲ್ಲಿ ರಾಜ್ಯ ವ್ಯವಸ್ಥೆಯ ವಿಷಯಕ್ಕೆ, ಸಮಾಜ ರಚನೆಯ ವಿಷಯಕ್ಕೆ ಜನಜೀವನದ ರೀತಿ-ಸಂಸ್ಥೆಗಳ ವಿಷಯಕ್ಕೆ ಮತಬೇಧವಿದ್ದರೇನಾಯಿತು? ಜಗತ್ತಿನ ಉನ್ನತಿಗಾಗಿ ತಾವಿಬ್ಬರೂ ಕೂಡಿ ಪ್ರಯತ್ನಿಸಬೇಕು ಎನ್ನುವ ಭಾವನೆ ಏಕೆ ಹುಟ್ಟಬಾರದು? ತಮಗಿಬ್ಬರಿಗೂ ಅನ್ನ, ಅರಿವೆ, ಹಾಡು, ಸಿನೇಮ, ಆಟ, ಕಲೆ, ವಿಜ್ಞಾನ ಒಂದೇ ತೆರನಾದುದು, ಒಂದೇ ಧ್ಯೇಯವುಳ್ಳದ್ದು ಬೇಕೆಂಬ ವಿಚಾರ ಏಕೆ ಬರಬಾರದು? ಅದಕ್ಕೆ ಹೇಳಿದೆ. ಜನರಲ್ಲಿ ತಮ್ಮೆಲ್ಲರ ಮೂಲಸಂಸ್ಕೃತಿ ಒಂದು, ಅದು ಮಾನವ ಸಂಸ್ಕೃತಿ ಎನ್ನುವ ಭಾವನೆ ಇನ್ನೂ ಒಡಮೂಡಿಲ್ಲ. ಅದು ಹುಟ್ಟಲು ಶಕ್ಯವಾದರೆ ಯಾವ ಯುದ್ಧವೂ ಆಗಬೇಕಾಗಿಲ್ಲ, ಯಾವ ಹಿಟ್ಲರನೂ ಹುಟ್ಟಬೇಕಾಗಿಲ್ಲ, ಯಾವ ರಾಯಭಾರಿ ಹೇಳಿದ ಸುಳ್ಳೂ ಇನ್ನೊಂದು ಪಕ್ಷದ ತಲೆ ತಿನ್ನಬೇಕಾಗಿಲ್ಲ."

"ಒನ್ಸ್ ಮೋರ್....ವೆರಿ ಗುಡ್...."

ಲಾಲಾ ಕಿರಣಳ ಮಾತಿಗೆ ಕೈ ತಟ್ಟಿ ಉದ್ಗಾರ ತೆಗೆದ. ಪ್ರೊಫೆಸರ್ ಗಂಟಲು ಸರಿಪಡಿಸಿಕೊಂಡು ನುಡಿದರು—

"ತಾವಡೇಕರ್, ಸುಳ್ಳು ಯಾವಾಗಲೂ ಸುಳ್ಳೇ. ಅದನ್ನು ಸಾಧಿಸುವಾಗ ಯಾವ ಸಂಸ್ಕೃತಿಯ ವಿಷಯದ ತತ್ವವೂ ಎದುರಿಗೆ ಬರುವದಿಲ್ಲ. ದೇಶಕ್ಕಾಗಿ

ಬರೇ ರಾಯಭಾರಿಗಳಷ್ಟೇ ಸುಳ್ಳು ಹೇಳಬೇಕಾಗಿಲ್ಲ. ತನ್ನ ದೇಶದಿಂದ ಯಾವ ಉದ್ದೇಶಕ್ಕಾಗಿಯಾದರೂ ಪರದೇಶಕ್ಕೆ ಹೋಗುವ ಪ್ರತಿ ಒಬ್ಬನೂ ತನ್ನ ದೇಶದ ರಾಯಭಾರಿಯೇ. ಟೂರಿಸ್ಟರೂ ರಾಯಭಾರಿಗಳೇ. ಇವರೆಲ್ಲ ತಮ್ಮ ದೇಶ ದಿಂದ ಇನ್ನೊಂದು ದೇಶಕ್ಕೆ ಹೋದಾಗ ಅಲ್ಲಿಯೂ ತಮ್ಮದೇ, ತಮ್ಮ ದೇಶದ್ದೇ ಸಂಸ್ಕೃತಿಯನ್ನು ಅಪೇಕ್ಷಿಸಿ ಹೋಗುವದಿಲ್ಲ. ತಮ್ಮದಕ್ಕಿಂತಲೂ ಎಷ್ಟು ಭಿನ್ನ ವಾಗಿದೆ, ತಾವು ಎಷ್ಟು ವಿಷಯಗಳಲ್ಲಿ ಉಳಿದವರಿಗಿಂತ ಹೆಚ್ಚಿನವರಾಗಬಹುದು ಅಥವಾ ಕಡಿಮೆಯವರಾಗುವ ಸಂಭವವಿದೆ ಎನ್ನುವದನ್ನು ಕಾಣುವ ಪ್ರಯತ್ನ ಮಾಡುತ್ತಾರೆ. ಅದರ ಸಹಜ ಪರಿಣಾಮವೆಂದರೆ ಸುಳ್ಳಿನ ಕಂತೆ. ಈ ಸ್ವಭಾವ ನಿಮ್ಮ ಏಕಮೇವ ಸಂಸ್ಕೃತಿಯ ಯಾವ ಪಾಠದಿಂದಲೂ ಹೋಗತಕ್ಕುದಲ್ಲ. ಮೊದಲು ಸಂಸ್ಕೃತಿ, ಪಾಠ ಹೇಳುವ ವಸ್ತುವೇ ಅಲ್ಲ. ಸಂಸ್ಕೃತಿ ಸಂಸ್ಕೃತಿಯೇ. ಅಂದರೆ ಹುಟ್ಟಿನಿಂದ ಬರಬೇಕಾದದ್ದು. ಯುನೋದವರು ಜಗತ್ತಿನಲ್ಲೆಲ್ಲ ನಾಳಿ ನಿಂದ ಒಂದೇ ಸಂಸ್ಕೃತಿ ಇರಬೇಕು ಎಂದು ಹತ್ತು ಕಮಾಂಡ್‌ಮೆಂಟುಗಳನ್ನು ಪ್ರಕಟಿಸಿ ಎಲ್ಲರಿಂದಲೂ ಅವುಗಳನ್ನು ಪಾಠ ಮಾಡಿಸಿದಷ್ಟಕ್ಕೆ ಅದು ಅವರ ಜೀವನದಲ್ಲಿ ಬರುವದಿಲ್ಲ. ಸಂಸ್ಕೃತಿ ಒಂದು ತಪಸ್ಸು, ಒಂದು ಆಶೀರ್ವಾದ."

ಇದುವರೆಗೂ ಕೇಳುವದಷ್ಟನ್ನೇ ಸಾಧಿಸಿದ್ದ ಲಾಲಾ ಹೇಳಲು ಮುಂದಾದ,

"ಹೌದು, ಮನುಷ್ಯ ಸುಸಂಸ್ಕೃತನಾಗಿಯಾದರೂ ಹುಟ್ಟುತ್ತಾನೆ, ಇಲ್ಲವೆ ಅಸಂಸ್ಕೃತಿಯ ರಾಕ್ಷಸನಾಗಿಯಾದರೂ ಹುಟ್ಟುತ್ತಾನೆ. ಇವೆರಡು ಜಾತಿಗಳನ್ನು ತಪ್ಪಿಸಲಿಕ್ಕೆ ಯಾರಿಂದಲೂ ಸಾಧ್ಯವಿಲ್ಲ ಪ್ರೊಫೆಸರ್.

"ಸಾಧ್ಯವಿಲ್ಲವೇಕೆ? ತಪಸ್ಸು ಯಾವಾಗಲೂ ಸಾಧಿಸಬೇಕಾದ ವಸ್ತು. ಸಂಸ್ಕೃತಿಯನ್ನೂ ಸಾಧಿಸಿ ಪಡೆಯಬಹುದು."

ಎಂದು ರಮೇಶ ಮರುತ್ತರ ನೀಡಿದ.

"ಹೌದು, ಆದರೆ ಆ ಸಾಧನೆ ಬರಬೇಕಾದರೆ ಅದಾಗಲೇ ಸಂಸ್ಕೃತಿಯ ನೆಲಗಟ್ಟು ಕಟ್ಟಿರಬೇಕು. ಅದಕ್ಕೇ ಅದು ಆಶೀರ್ವಾದವೂ ಹೌದು – ಅಂದೆ ನಾನು."

"ಅಲ್ಲಾಂದ್ರೆ – ಪ್ರೊಫೆಸರ್, ಸಂಸ್ಕೃತಿ ಎಂಬುದೊಂದು ಕಟ್ಟಿಟ್ಟ ಗಂಟು ಎಂಬಂತೆ ಮಾತಾಡುತ್ತೀರಲ್ಲ. ಸಂಸ್ಕೃತಿಯ ತಿರುಳು, ಧ್ಯೇಯ ಒಂದಾಗಿರು ವಂತೆ ಸಂಸ್ಕೃತಿ ವಿವಿಧವಾಗಿಯೇ ಇರಬೇಕು. ನಾವು ಸುಸಂಸ್ಕೃತರೆಂದು ನಮ್ಮ

ಸಂಸ್ಕೃತಿಯನ್ನು ಆಫ್ರಿಕದ ನಿಗ್ರೋ ಜನರ ಮೇಲೆ ಹೊರಿಸ ಬರುವದಿಲ್ಲವಲ್ಲ." ಎಂದಳು ಕಿರಣ.

"ಮತ್ತೆ ನೀವೆಲ್ಲ ನನ್ನ ವಿಚಾರದ ಹಾದಿಗೇ ಬರುತ್ತಿದ್ದೀರಿ. ಮನುಷ್ಯ ಸ್ವಭಾವ, ಅಭಿರುಚಿಗಳ ವೈವಿಧ್ಯ ತಪ್ಪಿಸಲಾಗುವದಿಲ್ಲ. ಆದ್ದರಿಂದ ಅವರ ಸಂಸ್ಕೃತಿಯ ವೈವಿಧ್ಯವನ್ನೂ ತಪ್ಪಿಸಲಾಗುವದಿಲ್ಲ. ಅವು ಒಂದಕ್ಕೊಂದು ವಿರುದ್ಧವಾಗುವದನ್ನೂ ತಪ್ಪಿಸಲಾಗುವದಿಲ್ಲ; ಕಮ್ಯುನಿಝಂನ್ನೂ, ಕೆಪಿಟಾಲಿಸಂನ್ನೂ ತಪ್ಪಿಸಲಾಗುವದಿಲ್ಲ. ಹಾಗೇ....ಮೂರನೇ ಮಹಾ ಯುದ್ಧವನ್ನೂ ತಪ್ಪಿಸಲಾಗುವದಿಲ್ಲ. ಆದ್ದರಿಂದ...."

ಪ್ರೊಫೆಸರರ ಮಾತುಗಳ ಮಾಲೆಗೆ ಕತ್ತರಿಹಾಕಿ ರಮೇಶ ನುಡಿದ,

"....ಸ್ಪೆಶಲ್ ಕೋಕೋವನ್ನೂ ತಪ್ಪಿಸಲಾಗುವದಿಲ್ಲ. ಆ ಸಕ್ಕರೆಯನ್ನಷ್ಟು ಇತ್ತ ಸರಿಸಿರಿ, ಪ್ರೊಫೆಸರ್."

"ನಾನೆಲ್ಲಿ ವೈವಿಧ್ಯವನ್ನು ಅಲ್ಲಗಳೆಯುತ್ತೇನೆ? ಜಗತ್ತಿನ ಜನರೆಲ್ಲರ ಸುಖವನ್ನು ಒಳಗೊಂಡ ವಿಷಯಕ್ಕೆ ಜಗತ್ತಿನ ಜನರೆಲ್ಲರ ವಿಚಾರಮಾರ್ಗ ಒಂದಾಗಬೇಕು ಎಂದು ಹೇಳಿದೆ. ಮೈಮೇಲೆ ಅರಿವೆ ಧರಿಸಬೇಕು ಎನ್ನುವದು ಈಗ ಎಲ್ಲರ ಸಂಸ್ಕೃತಿಯಾಗಿಲ್ಲವೆ? ಒಬ್ಬರೊಬ್ಬರು ಪರಿಚಯದವರು ಭೆಟ್ಟಿಯಾದಾಗ ಕೈಮುಗಿದು, ಕೈಕುಲುಕಿ, ಕೈಎತ್ತಿ ಅಂತೂ ಯಾವದಾದರೊಂದು ರೀತಿಯಿಂದ ತಮ್ಮ ಪರಿಚಯವನ್ನು ವ್ಯಕ್ತಮಾಡಬೇಕು ಎನ್ನುವದು ಇಂದು ಎಲ್ಲರ ಸಂಸ್ಕೃತಿಯಾಗಿಲ್ಲವೆ? ಹಾಗೆಯೇ ಜಗತ್ತಿನಲ್ಲಿ ಶಾಂತಿಬೇಕು – ಯುದ್ಧ ಬೇಡ ಅನ್ನುವದು ಬರೇ ಅವಶ್ಯಕತೆಯ ವಿಷಯವಷ್ಟೇ ಆಗಿರದೆ ಎಲ್ಲರ ಸಂಸ್ಕೃತಿಯ ಒಂದು ಭಾಗವಾಗಬೇಕು."

ಮಿಸ್ ತಾವಡೇಕರ್ ಮಾತನಾಡುತ್ತಾ ಪ್ರೊಫೆಸರ್‌ರನ್ನೂ ಲಾಲಾನನ್ನೂ ನೋಡಿ ಹೇಳಿದಳು—

"ಒಬ್ಬರಮೇಲೊಬ್ಬರು ಬಾಂಬು ಎಸೆಯುವದು ಹಾನಿಕಾರಕ ಎಂದಿಷ್ಟೆ ಆಗಿರದೆ ಅದು ಅಸಂಸ್ಕೃತಿ ಎನ್ನುವ ಭಾವನೆ ಬಂದಿರಬೇಕು. ನಾವು ಒಬ್ಬರ ಮೇಲೊಬ್ಬರು ಉಗುಳುವದು ಕಾಡು ಸ್ವಭಾವ ಎನ್ನುವದಿಲ್ಲವೆ? ಹಾಗೆ. ಅಂದರೆ ಕಮ್ಯುನಿಸಂ ವಿರುದ್ಧ ಯಾವ ಆರ್ಥಿಕ ಯೋಜನೆಯ ಕೋಟೆಯನ್ನೂ

ಕಟ್ಟಬೇಕಾಗಿಲ್ಲ, ಕೆಪಿಟಾಲಿಸಂ ಬರುತ್ತದೆಂದು ಅಯರ್ನ್ ಕರ್ಟನ್ ಎಳೆಯಬೇಕಾಗಿಲ್ಲ."

ಹುಂ, ಮಿಸ್ ತಾವಡೇಕರ್ ಈ ಸಂಸ್ಕೃತಿಯನ್ನು ನೀನು ಡಲ್ಸ್, ಚರ್ಚಿಲ್, ಮಲೆಂಖೋವ್ ಇವರಿಗೆಲ್ಲ ಕಲಿಸುವವಳು "

ಎಂದು ಉದ್ಗಾರ ತೆಗೆದರು ಪ್ರೊಫೆಸರ್.

"ಒಂದು ದಿನದಲ್ಲಿ ಆಗುವ ವಿಷಯವಲ್ಲ ನನಗೆ ಗೊತ್ತು. ಆದರೆ ಈ ರಾಜಕಾರಣಿಗಳಿಗೆಲ್ಲ ಇದು ಮನಗಾಣುವಂತೆ ಒಂದು ಜಾಗತಿಕ ಮೂವ್ ಮೆಂಟ್ ಉಂಟಾಗಬೇಕು."

"ನೋಡಿ, ಆ ಮೂವ್ ಮೆಂಟಿನ ರೂಪರೇಷೆ, ಕಾರ್ಯಕ್ರಮ ಯಾವುದನ್ನೂ ನಿಮಗೆ ಹೇಳಲಿಕ್ಕೆ ಬರುವದಿಲ್ಲ. ಅದಕ್ಕೆ ಹೇಳಿದೆ, ಸಂಸ್ಕೃತಿ ಅರ್ಥ ಹುಟ್ಟಿನಿಂದ ಅರ್ಥ ಸಾಧನೆಯಿಂದ ಬರುತ್ತದೆ ಅಂತ. ಅದಕ್ಕಿನ್ನು ಎಷ್ಟು ವಂಶಪರಂಪರೆ ಕಳೆಯಬೇಕೋ. ಒಬ್ಬ ಕಳ್ಳನಿಗೆ 'ನೀನು ಮಾಡುತ್ತಿದ್ದುದು ಕುಸಂಸ್ಕೃತಿ' ಎಂದರೆ ಆತನಿಗೆ ಏನೂ ಅರ್ಥವಾಗಲಿಕ್ಕಿಲ್ಲ. ಸಂಸ್ಕೃತಿಗೂ ದುಡ್ಡಿದ್ದವರ ಹಣ ಕಳುವದಕ್ಕೂ ಏನು ಸಂಬಂಧ ಎಂದು ಕೇಳಬಹುದು. ಆದರೆ ನೀನು ಮಾಡುತ್ತಿದ್ದುದು ಅಪರಾಧ ಎಂದರೆ ಮಾತ್ರ ಅವನಿಗೆ ಜೇಲಿನ ಅಂಜಿಕೆ ಬಂದು ಓಡಿಹೋಗಬಹುದು. ನಮ್ಮ ರಾಜಕಾರಣಿಗಳ ಗತಿಯೂ ಅಷ್ಟಾಗಿದೆ. ಒಬ್ಬರೊಬ್ಬರ ಅಂಜಿಕೆಯಿಂದಲೇ ಅವರು ಬದುಕಿದ್ದಾರೆ. ಅವರಿಗೆ ಈ 'ಒಂದು ಸಂಸ್ಕೃತಿ'ಯ ಅರ್ಥವಾಗುವದಿಲ್ಲ. ನನಗೆ ಠಾಣೆಗೆ ಹೋಗುವದೂ ಸೇರುವದಿಲ್ಲ."

ಎಂದು ಪ್ರೊಫೆಸರು ಇನ್ನಷ್ಟು ಮಾತಿಗೆ ಸಿದ್ಧವಾಗಿರುವಂತೆ ನೇರವಾಗಿ ಕುಳಿತರು.

ಲಾಲಾಗೆ ಈ 'ತಲೆಹರಟೆ'ಯೆಲ್ಲ ಸಾಕನಿಸಿ ಬಹಳ ಹೊತ್ತಾಗಿತ್ತು. ಆ ದಿನ ರಾತ್ರಿ ಆಡಲಿದ್ದ ಬ್ರಿಜ್ಜು, ನಾಳೆ ಆಗಲಿದ್ದ ಕೆಪಿಟೋಲ್‌ದಲ್ಲಿಯ ಚ್ಯಾರಿಟಿ ಡಾನ್ಸ್ ಪ್ರೊಗ್ರಾಮ್, ಇನ್ನೆಂಟು ದಿನಕ್ಕೆ ಬರಲಿದ್ದ ಕ್ರಿಸ್‌ಮಸ್ ನಿಮಿತ್ತ ಕೊಳ್ಳಲಿದ್ದ ಚಹದ 'ಸೆಟ್ಟು' – ಇಂಥ ತುರ್ತದ ಮತ್ತು ಮುಖ್ಯವಾದ ವಿಷಯಗಳನ್ನು ಕುರಿತು ಮಾತಾಡದೆ ಮೂರನೇ ಮಹಾಯುದ್ಧ, ಚರ್ಚಿಲ್‌ರಂತ ಗಹನ, ದೂರ, ಒಣ ವಿಷಯಗಳನ್ನು ಮಾತಿಗಾಗಿ ಆರಿಸುವ ಈ ಬೆಪ್ಪು ತಕ್ಕಡಿ

ಗಳ ಮೇಲೆ ಅವನಿಗೆ ದಯೆ, ಕೋಪ ಎರಡೂ ಬಂದಿತ್ತು. ಆದರೂ ಕಿರಣಳಿಗೆ ಉತ್ಸುಕತೆಯಿದ್ದ ವಿಷಯಕ್ಕೆ ತಾನು ನೀರಸನಾಗಬಾರದಲ್ಲ ಎಂದುಕೊಂಡು ಸಹಿಸಿಕೊಂಡಿದ್ದನು. ಇನ್ನು ಮಾತ್ರ ತಾನು ಕೈಹಾಕಬೇಕಾಗುವದು ಎನ್ನಿಸಿತು ಅವನಿಗೆ.

"ಠಾಣೆಯಲ್ಲಿ ತುರ್ತ ನೋಪ್ಡೇಕನ್ನಿ ಅಂತೆ. ಅದಕ್ಕೆ ಯಾರಿಗೆ ಹೋಗ ಬೇಕಾದರೂ ವೇಟಿಂಗ್‌ಲಿಸ್ಟ್‌ದಲ್ಲಿ ಹೆಸರು ನಮೂದಿಸಬೇಕು. ಅಲ್ಲಿಯವರೆಗೆ ಯಾವದಾದರೂ ಪಿಕ್ಚರಿಗೆ ಹೋಗಿಬರೋಣ. ತಾವಡೇಕರ್, ಒಲ್ಲೆ ಎನ್ನ ಬಾರದು."

ಪ್ರೊಫೆಸರರಂತೂ ಎಂದೂ ಸಿನೀಮಕ್ಕೆ ಹೋದವರಲ್ಲ.

"ನೀವೂನೂ ನಿಮ್ಮ ಸಿನೀಮಾನೂ ಗಂಟು"

ಎನ್ನುತ್ತ ಬ್ರಿಜ್ಜ್ ರೂಮಿನತ್ತ ನಡೆದುಬಿಟ್ಟರು. ರಮೇಶ ವಾಚು ನೋಡಿ ಕೊಂಡು,

"ಹೊತ್ತಿನ ಅರಿವೇ ಆಗಲಿಲ್ಲ. ಅಲ್ಲಿ ಕೆಲಸ ರಾಶಿಯಾಗಿ ಬಿದ್ದಿದೆ"

ಎನ್ನುತ್ತ ಎದ್ದನು.

"ಇದ್ದರೆ ಇರುತ್ತದೆ. ಹಾಯಾಗಿ ನಾಲ್ಕು ಹಾಡು ಕೇಳುವಿರಂತೆ ನಡೆಯಿ ರಲ್ಲ. ಮಧುವನ ಪಿಕ್ಚರ್ಸ್‌ದ 'ಆರ್ಯಾವೃತ್ತ' ಇದೆ ಮೆಜಸ್ಟಿಕ್‌ದಲ್ಲಿ"

ಎಂದಳು ಕಿರಣ ಲಾಲಾನತ್ತ ನೋಡುತ್ತ.

"ಹೌದು, ನಡೆಯಲ್ಲ"

ಎಂದನು ಲಾಲಾ.

"ಕ್ಷಮಿಸಿ, ಒಬ್ಬಿಬ್ಬರಿಗೆ ಭೆಟ್ಟಿಯಾಗುವದಾಗಿ ಹೇಳಿದ್ದೆ. ಮಾತು ಮುರಿಯಬಾರದಲ್ಲ. ನೀವು ಹೋಗಿಬನ್ನಿ"

ಎಂದು ಹೇಳಿ ರಮೇಶ ಹೊರಟುಬಿಟ್ಟನು.

ಉಪಚಾರಕ್ಕಾಗಿ ಕೊಟ್ಟ ಆಮಂತ್ರಣದ ದುರುಪಯೋಗ ಮಾಡಿಕೊಳ್ಳ ಬಾರದಲ್ಲ!

# ೧೦

ಲಾಲಾ ಇದ್ದ ಬಂಗ್ಲೆಯಲ್ಲಿಯೇ ಎರಡನೆಯ ಮಾಳಿಗೆಯ ಮೇಲಿನ ಮೂರು ಖೋಲಿಗಳು ಪ್ರೊಫೆಸರ್‌ರ ಮನೆಯಾಗಿತ್ತು. ಪ್ರೊಫೆಸರ್ ಪಾರೀಖರ ಹಿರಿಯರು ಹಿಂದಕ್ಕೆ ರಾಜಸ್ಥಾನದಲ್ಲಿ ಬಹುದೊಡ್ಡ ವ್ಯಾಪಾರಿಗಳಾಗಿದ್ದರಂತೆ. ಒಂದನೇ ಮಹಾ ಯುದ್ಧದ ಕಾಲದಲ್ಲಿ· ಅದೇನೋ ಮೂರ್ಖತನದಿಂದ ಪ್ರೊಫೆಸರ್‌ರ ತಂದೆಯವರು ಇದ್ದುಬದ್ದುದನ್ನೆಲ್ಲ ಕಳೆದುಕೊಂಡಾಗ ಪ್ರೊಫೆಸರ್‌ರದು ಹ್ಯಾಸ್ಕೂಲು ಜೀವನವಾಗಿತ್ತು. ಒಂದು ರಾತ್ರಿ ಬೆಳಗಾಗುವದರೊಳಗೆ ಕೋಟ್ಯಾಧೀಶರಾಗಿದ್ದ ತಾವು ಊರಲ್ಲಿಯ ತಮ್ಮ ಅರಮನೆಯಂಥ ಮನೆಯನ್ನೂ ಮಾರಿಕೊಳ್ಳ ಬೇಕಾದಷ್ಟು ಬಡವರಾದುದಾಗಿ ಪ್ರೊಫೆಸರರಿಗೆ ತಿಳಿದಿತ್ತು. ಈಗಲೂ ಯಾರಾದರೂ ಕೇಳಿದರೆ ಪ್ರೊಫೆಸರರು ಹಿಂದೆ ತಮ್ಮದಾಗಿದ್ದ ವೈಭವವನ್ನೂ ಮುಂದೆ ತಮ್ಮ ಎಮ್. ಎ. ಆಗುವ ವರೆಗೆ ಅನುಭವಿಸಬೇಕಾದ ಅವಮಾನವನ್ನೂ 'ಯಾರದೋ' ರಸವತ್ತಾದ ಕಥೆ ಹೇಳುವಂತೆ ಬಣ್ಣಿಸುತ್ತಾರೆ.

ಪಾರೀಖರ ಲಗ್ನವಾದಾಗ ಅವರ ಬಿ. ಎ. ಪರೀಕ್ಷೆ ಮಾತ್ರ ಮುಗಿದಿತ್ತು. ಅವರ ಹೆಂಡತಿ ಮುಂಬಯಿಯಲ್ಲಿಯೇ ಇದ್ದ ಒಬ್ಬ ಬ್ಯಾಂಕ್ ಮ್ಯಾನೇಜರ್‌ರ ಮಗಳು. ಇಬ್ಬರಿಗೂ ಕಾಲೇಜಿನಲ್ಲಿ ಪರಿಚಯವಾಗಿ, ಪರಿಚಯ ಸ್ನೇಹದಲ್ಲಿ ರೂಪಾಂತರವಾಗಿತ್ತು. ಬಿ.ಎ. ಪರೀಕ್ಷೆ ಮುಗಿದಾಗ 'ಮುಂದೇನು ಮಾಡುವಿರಿ' ಎಂದು ಕೇಳಿದ್ದಕ್ಕೆ ಪಾರೀಖರು 'ಎಲ್ಲಿಯಾದರೂ ಗುಮಾಸ್ತೆಗಿರಿ. ನಿಮ್ಮ ತಂದೆಯವರ ಬ್ಯಾಂಕಿನಲ್ಲಿ ಸ್ಥಳವಿದೆಯೋ ಕೇಳಿ ನೋಡಿ' ಎಂದು ಸೂಚಿಸಿದ್ದರು.

ಮರುದಿನವೇ ಪಾರೀಖರ ಈ ಸ್ನೇಹಿತೆ ೨೦೦೦ ರೂಪಾಯಿ ತಂದು ಅವರ ಕೈಯಲ್ಲಿಟ್ಟದ್ದಳು.

"ಎಮ್. ಎ. ಮುಗಿಸಿ ಪ್ರೊಫೆಸರ್ ಆಗುವ ನಿಮ್ಮ ಧ್ಯೇಯ ಪೂರ್ತಿ ಮಾಡಿಕೊಳ್ಳಿ. ನನ್ನ ತಂದೆಗೆ ಹಿಂದಿನಿಂದ ರೊಕ್ಕ ಸಲ್ಲಿಸಿದರಾಯಿತು"

ಎಂದು ಆಕೆ ನುಡಿದಾಗ ಅವಮಾನದಿಂದ ಉರಿಯುತ್ತಿದ್ದ ಪಾರೀಖರು ನೋಟುಗಳನ್ನು ಹರಿದೊಗೆಯುವದರಲ್ಲಿದ್ದರು. ಆದರೆ ಆ ಕ್ಷಣಕ್ಕೆ ಅವರ ದೃಷ್ಟಿ ಈ ಸ್ನೇಹಿತಳ ಕಣ್ಣನೋಟವನ್ನು ಹಿಡಿದಿತ್ತು. ಅದರಲ್ಲಿ ಏನು ಕಂಡುಕೊಂಡರೋ ನೋಟು ಹರಿಯುವದು ಹಾಗೆಯೇ ಉಳಿಯಿತು.

"ಮುಂದೇನಾಯಿತು ?" ಎಂದು ಕೇಳುವವರು ಉತ್ಸುಕತೆಯಿಂದ ಪ್ರೊಫೆಸರ್‌ರನ್ನು ಕೇಳಿದರೆ ಅವರು ಹೇಳುತ್ತಾರೆ—

"ಆಗುವದೇನು? ಇಂಥ ಪ್ರಸಂಗದಲ್ಲಿ ಎಲ್ಲ ಕಡೆಗೆ ಏನಾಗುತ್ತದೋ ಅದೇ ಆಯಿತು. ಆಜನ್ಮ ಹನುಮಂತನ ಮರಿಯಾಗಬೇಕೆಂದು ಪಣತೊಟ್ಟ ಪ್ರೊಫೆಸರ್ ಪಾರಿಖರು ಎಸೋಸಿಯೇಟೆಡ್ ಬ್ಯಾಂಕ್ ಮ್ಯಾನೇಜರರ ಮಗಳು ಮಿಸ್. ತಾರಿಣೀಬೇನ್‌ಳೊಡನೆ ಲಗ್ನವಾಗಿ ಸುಖಸಂತೋಷದಿಂದಿರುವ ಪ್ರಯತ್ನ ಮಾಡಿದರು."

ಎಂದು ತಮ್ಮ ಕಥೆ ಮುಗಿಸುತ್ತಾರೆ. ಆದರೆ ಆ ಎರಡು ಸಾವಿರ ರೂಪಾಯಿಯ ನಿಜವಾದ ಕಥೆ ಪ್ರೊಫೆಸರ್‌ರಿಗೆ ಲಗ್ನವಾದ ಮೇಲೆಯೇ ತಿಳಿಯಿತು. ಹಿಂದಿನ ರಾತ್ರಿ ತಾನು ಪಾರೀಖರೊಡನೆ ಲಗ್ನವಾಗುವದಾಗಿಯೂ ಅವರಿಗೆ ತುರ್ತ ಎಮ್. ಎ. ಕಲಿಯಲಿಕ್ಕೆ ೨೦೦೦ ರೂಪಾಯಿ ಬೇಕೆಂದೂ ತಾರಿಣೀಬೇನ್ ತಂದೆಯನ್ನು ಕೇಳಿದಾಗ, ಕಾಲೇಜು ಕಲಿಯಲೂ ಕಾಸಿಲ್ಲದ ಇಂಥ ಪಾಪರಗೆ ತನ್ನ ಮಗಳನ್ನು ಕೊಡೋದಿಲ್ಲ, ೨೦೦೦ ರೂಪಾಯಿಯಂತೂ ಶಕ್ಯವೇ ಇಲ್ಲ. ಈಗ ಬ್ಯಾಂಕ್ ಬಡ್ಡೀದರ ಏರುತ್ತಿದೆ. ಒಂದಕ್ಕೆ ನಾಲ್ಕಾಗುವ ಕಾಲ. ಎಂದು ಮಗಳ ಬಾಯಿ ಮುಚ್ಚಿಸಿದ್ದನು. ಆದರೆ ತಾರಿಣೀಬೇನ್‌ಗೆ ತಂದೆಯ ಬ್ಯಾಂಕಿಂಗ್ ಲೆಕ್ಕಕ್ಕಿಂತ ತನ್ನ ಹೃದಯದ ಕರೆ ಹೆಚ್ಚು ಬೇಕಾದುದಾಗಿ ಕಂಡಿತು. ತನ್ನದಾಗಿದ್ದ ಆಭರಣಗಳನ್ನೆಲ್ಲ ಸ್ವಲ್ಪವೂ ಹಿಂದೆ ಮುಂದೆ ನೋಡದೆ ಮಾರಿ ಪ್ರೊಫೆಸರರಿಗಾಗಿ ೨೦೦೦ ರೂಪಾಯಿ ತಂದುಕೊಟ್ಟದ್ದಳು.

ಕೆಲವು ಕಾಲ ಪ್ರೊಫೆಸರರ ಜೀವನ ಸುಖವಾಗಿಯೇ ಸಾಗಿತ್ತು. ಅವರ

ಮಗ ಬಿ. ಇ. ಪಾಸಾಗಿ ಉತ್ತರ ಹಿಂದುಸ್ಥಾನದಲ್ಲಿ ಯಾವದೋ ಒಂದು ಅಣೆಕಟ್ಟಿನ ಕೆಲಸದಲ್ಲಿ ಅಸಿಸ್ಟಂಟ್ ಎಂಜಿನಿಯರ್ ಆಗಿ ಹೋದಾಗಿನಿಂದ ಪ್ರೊಫೆಸರ್‌ರ ಮನೆಯಲ್ಲಿ ಅಶಾಂತಿ ಆರಂಭವಾಗಿತ್ತು. ಈ ಸುಪುತ್ರ ಅಲ್ಲಿಯೇ ಯಾವದೋ ಪಂಜಾಬಿ ಪಾತರಗಿತ್ತಿಯನ್ನು ಗಂಟುಹಾಕಿಕೊಂಡು ಒಂದು ದಿನ ಇದ್ದಕ್ಕಿದ್ದಂತೆ 'ನಾಡಿದ್ದು ಲಗ್ನ, ತೀವ್ರ ಹೊರಟು ಬನ್ನಿ' ಎಂದು ತಾರು ಬಿಟ್ಟಿದ್ದನು! ಪಾರೀಖರ ಹೆಂಡತಿ ಎರಡೆರಡು ದಿನ ಕಣ್ಣೀರಿಟ್ಟಳು. ಆದರೆ ಬದಲಾಗುತ್ತಿದ್ದ ಈ ದಿನಗಳಲ್ಲಿ ಲಗ್ನದಂಥ ವಿಷಯದಲ್ಲಿ ತಂದೆ ತಾಯಿಗಳಿಗೆ ಎಷ್ಟು ಅಧಿಕಾರವಿದೆ ಎಂದು ಮನಗಂಡಿದ್ದ ಪಾರೀಖರು ಮಗನೊಡನೆ ಜಗಳಕ್ಕೆ ನಿಲ್ಲಲಿಲ್ಲ. 'ನಿನ್ನಿಂದ ಇಂಥದನ್ನು ಅಪೇಕ್ಷಿಸಿರಲಿಲ್ಲ' ಎಂದು ಮಾತ್ರ ನುಡಿದಿದ್ದರು. 'ನಿನ್ನ ತಾಯಿಯನ್ನು ನೋಡಲಿಚ್ಛಿಸಿದರೆ ನೀನು ಅಥವಾ ನೀವು ಯಾವಾಗ ಬೇಕಾದಾಗ ಮನೆಗೆ ಬಂದು ಹೋಗಬಹುದು ನನ್ನದು ಯಾವಾಗಲೂ ಅಭ್ಯಂತರವಿಲ್ಲ' ಎಂದಿದ್ದರು.

ಇಷ್ಟರನಂತರ ತಾನೇನು ಮಾಡಬೇಕು ಅನ್ನುವ ಬಗ್ಗೆ ಮಗನಿಗೂ ಸಂಶಯ ಉಳಿದಿರಲಿಲ್ಲ. ತುಂಬ ಧಾರ್ಮಿಕಳಾಗಿದ್ದ ಆ ತಾಯಿ ಕಡೆಯ ವರೆಗೆ ಕಣ್ಣೀರು ಸುರಿಸಿದಳೇ ವಿನಹ ಒಮ್ಮೆಯಾದರೂ ಸೊಸೆಯನ್ನು ನೋಡುವ ಇಚ್ಛೆ ವ್ಯಕ್ತಮಾಡಲಿಲ್ಲ. ಹಡೆದವರ ಇಚ್ಛೆಯಂತೆ ವರ್ಷ ಎರಡು ವರ್ಷಗಳಿಗೊಮ್ಮೆ ನಾಲ್ಕೆಂಟು ದಿನಗಳ ಮಾತಿಗೆ ಮಗನು ಮನೆಗೆ ಬಂದಾಗ ತಪ್ಪಿಯಾದರೂ ಹೆಂಡತಿಯ ವಿಷಯ ಎತ್ತುತ್ತಿರಲಿಲ್ಲ.

ಕಳೆದ ವರ್ಷ ಮಾತ್ರ ಮಗನು ಮುಂಬಯಿಗೆ ಬಂದಾಗ ಅವನ ಮಗ ನಾಲ್ಕು ವರ್ಷದ ದಿಲೀಪನೂ ಒಂದು ಹೊಟೆಲ್‌ದಲ್ಲಿ ಉಳಿದಿದ್ದಾನೆ ಎಂದು ತಿಳಿದಾಗ ಪ್ರೊಫೆಸರ್‌ರ ಹೆಂಡತಿ ಹುಡುಗನನ್ನು ಕರೆಸಿಕೊಂಡು ಅವನಿಗೆ ಅರಿವೆ, ಆಟಿಗೆ ಎಂದು ಏನೇನೋ ತೆಗೆಸಿಕೊಟ್ಟು ಮುದ್ದಿಸಿ ಕಳಿಸಿದ್ದಳು.

ಪ್ರೊಫೆಸರ್‌ರ ಮಗಳು ಲಗ್ನವಾಗಿ, ಮಗನನ್ನೂ ಹಡೆದು ತೀರಿಕೊಂಡು ಇಂದಿಗೆ ೬ ವರ್ಷಗಳಾಗಿದ್ದವು. ಅಳಿಯ ಇನ್‌ಕಮ್ ಟ್ಯಾಕ್ಸ್ ಇನ್ಸ್‌ಪೆಕ್ಟರನಾಗಿದ್ದನು. ಮಗನ ವಿಷಯಕ್ಕೆ ನಿರಾಶಳಾದ ಪ್ರೊಫೆಸರ್‌ರ ಹೆಂಡತಿ ಮಗಳ ಸುಖ ಜೀವನ ನೋಡಿ ಸಮಾಧಾನ ತಂದುಕೊಂಡಿದ್ದಳು. ಆದರೆ ಆ ಸುಖವೂ

ಬಹಳ ದಿನ ನಿಲ್ಲದೆ ಮಗಳು ತೀರಿಕೊಂಡಾಗ ಪಾರೀಖರು ಅಳಲಿಲ್ಲ. ಅಳುವ ಹೆಂಡತಿಯನ್ನೂ ಸಮಾಧಾನ ಗೊಳಿಸುವಗೊಡವೆಗೆ ಹೋಗಲಿಲ್ಲ. ಶೇಕ್ಸ್ ಪಿಯರ್‌ನ ಹ್ಯಾಮ್ಲೆಟ್ ನಾಟಕದ ಪುಸ್ತಕ ಹಿಡಿದು ಓದುತ್ತ ಕುಳಿತುಬಿಟ್ಟರು.

ಇದೆಲ್ಲದರ ನಂತರವೂ ಪ್ರೊಫೆಸರ್‌ರು ಉಳಿಸಿಕೊಂಡ ಆ ಆಶಾವಾದಿತ್ವ ಆಶ್ಚರ್ಯಕಾರಕವಾಗಿತ್ತು. ಮನೆಯಲ್ಲೀಗ ಗಂಡ ಹೆಂಡತಿ ಇಬ್ಬರೇ ಇದ್ದರು. ಯಾವಾಗಲಾದರೊಮ್ಮೆ ಮನೆಯ ಕೆಲಸದವನು ಅಳಿಯನ ಮನೆಗೆ ಹೋಗಿ ನಾಲ್ಕು ವರ್ಷದ ಜಗತ್‌ನನ್ನು ಕರೆತರುತ್ತಿದ್ದನು. ಅವನಿರುವ ಮಟ್ಟಿಗೆ ಪ್ರೊಫೆಸರ್‌ರ ನಿರ್ಲಿಪ್ತತೆ ಇಲ್ಲದಾಗಿ ಅವನೊಡನೆ ಹುಡುಗನಂತೆ ಆಡುತ್ತಿದ್ದರು. ಅವನಿಲ್ಲದಾಗ ಏನೋ ಕನಸುಕಂಡು ಎಚ್ಚರಾದವರಂತೆ ಎಲ್ಲವನ್ನೂ ಮರೆತು ದಿನದ ಕೆಲಸದಲ್ಲಿ ತೊಡಗುತ್ತಿದ್ದರು. ತಮ್ಮ ಕಾಲೇಜು ಕೆಲಸದಲ್ಲಿ ಅವರಿಗೆ ತುಂಬ ತೃಪ್ತಿ ಇತ್ತು. ವಿರಾಮದಲ್ಲಿ ಲಾಲಾ – ರಮೇಶರಂಥ ತರುಣರೊಡನೆ ಬ್ಯಾಡ್‌ಮಿಂಟನ್ನು, ಬ್ರಿಜ್ಜು, ಹರಟೆ ಎಂದು ಹೊತ್ತು ಕಳೆಯುತ್ತ ತಮ್ಮ ಐವತ್ತನೆಯ ವಯಸ್ಸಿನಲ್ಲಿಯೂ ಇನ್ನೂ ಮನಸ್ಸು, ದೇಹಗಳಲ್ಲಿ ತರುಣರಾಗಿಯೇ ಇದ್ದರು. ಲಹರಿ ಬಂದಾಗ ತಮ್ಮ ಉತ್ಸಾಹವನ್ನು ಹತ್ತಿರವಿದ್ದ ತರುಣರಲ್ಲಿಯೂ ತುಂಬುತ್ತಿದ್ದರು.

## ೧೧

“ದೊಡ್ಡ ಮನುಷ್ಯನಾಗಿಬಿಟ್ಟೆಯಪ್ಪಾ. ಈಗ ನಮ್ಮ ಮನೆಗೇಕೆ ಬರುತ್ತೀ?”

ದಾದರ್ ಸ್ಟೇಶನ್‌ದಲ್ಲಿ ಅಕಸ್ಮಾತ್ ಭೆಟ್ಟಿಯಾದ ರಮೇಶನನ್ನು ನೋಡಿ ವೆಂಕಟರಾಮು ಹೇಳಿದನು.

“ಅಲ್ಲವೆ ಮತ್ತೆ. ಹಿಂದೆ ಕುರ್ಲಾಕ್ಕೆ ಬಂದ ಮೇಲೆ ಇಲ್ಲೀ ವರೆಗೆ •೦೪ ಇಂಚು ಎತ್ತರವಾಗಿದ್ದೇನೆ. ನೋಡು ನೀನೊಂದು ಐದು ನಿಮಿಷ ನಿಲ್ಲುವದಾದರೆ ಈವತ್ತು ರಾತ್ರಿ ಬರುವದಿಲ್ಲವೆಂದು ನನ್ನ ‘ರಾಯರ’ ಮನೆಗೆ ಫೋನ್ ಮಾಡಿಬಿಟ್ಟು ಬರುತ್ತೇನೆ. ಇಬ್ಬರೂ ಕೂಡಿ ಸ್ವಲ್ಪ ಪೇಟೆ ಸುತ್ತಿಕೊಂಡು ಗಾಡಿ ಹತ್ತೋಣ.”

ರಮೇಶ ಅಷ್ಟು ಸಹಜವಾಗಿ ಮನೆಗೆ ಬಂದು ರಾತ್ರಿಯೂ ಇರಲು ಒಪ್ಪಿದ್ದಕ್ಕೆ ಉಬ್ಬಿಹೋದ ವೆಂಕಟರಾಮು ಒಪ್ಪಿಕೊಂಡನು. ಇಬ್ಬರೂ ಪೇಟೆಯತ್ತ ನಡೆದರು. ರಮೇಶ ಭರಭರನೆ ನಾಲ್ಕೆಂಟು ಅಂಗಡಿಗಳನ್ನು ಮಗುಚಿ ಹಾಕಿ ಅಕ್ಕನಿಗೆರಡು ಪತ್ತಲ, ಮೋಹಿನಿಗೆ ಸಿಲ್ಕಿನ ಕಾಶ್ಮೀರಿ ಚಣ್ಣ – ಅಂಗಿ, ವಸಂತನಿಗೆ ಒಂದು ಜೊತೆ ಪ್ಯಾಂಟು, ಬುಶ್ ಶರ್ಟು ಕೊಂಡುಕೊಂಡು, ಇಬ್ಬರು ಹುಡುಗರಿಗೂ ಮನಸ್ಸಿಗೆ ಕಂಡ ಒಂದೆರಡು ಆಟದ ಒಡವೆಗಳನ್ನೂ ಕೊಂಡುಕೊಂಡನು. ವೆಂಕಟರಾಮು ಕಡೆಗೆ ತಡೆಯಲಾರದೆ ಕೇಳಿದನು,

“ನನಗೇನು ಕೊಳ್ಳುತ್ತಿ?”

ರಮೇಶ ಕ್ಷಣಕಾಲ ಅವನನ್ನು ನೋಡಿ ಅಂಗಡಿಯವನಿಗೆ ಹೇಳಿದನು,

'ದಸ್ ಬ್ಲೇಡ್‌ಕಾ ಎಕ್‌ಜಿಲೆಟ್ ಪ್ಯಾಕೆಟ್ ಲಾವೋ.'

ಭಾವ – ಭಾವ ಇಬ್ಬರೂ ಮನಸ್ವೀ ನಗುತ್ತ, ಹೊಟೆಲ್‌ದಲ್ಲಿ ತಿಂದು ಸ್ಟೇಶನಿಗೆ ಬಂದು ಗಾಡಿ ಹತ್ತಿದರು.

ಇಬ್ಬರೂ ಮನೆ ಸೇರಿದಾಗ ಘಂಟೆ ಎಂಟಾಗಿತ್ತು. ಮೋಹಿನಿ ಈ ಸಾರೆ ರಮೇಶನ ಕೈಯಲ್ಲಿಯದನ್ನೆಲ್ಲ ನೋಡುವ ಮೊದಲೇ ಅವನ ಹೆಗಲೇರಲೆತ್ನಿಸಿ ಅವನಿಗೆ 'ಪಾಪಾ' ಸಲ್ಲಿಸಿದಳು. ಪುಟ್ಟ ವಸಂತನೂ ಗೋಡೆ ಹಿಡಿದುಕೊಂಡು ನಡೆಯುತ್ತ ಮಾಮಾ ಮಮ್ಮ ಎಂದು ಸ್ವಾಗತಿಸಿದನು. ಇಂದ್ರಾಣಿ ಸಂತೋಷದ ಆವೇಗದಲ್ಲಿ ಆಗಲೇ ತಂದಿದ್ದ ರೇಷನ್ ಅವಲಕ್ಕಿಯನ್ನು ಡಬ್ಬಿಯಲ್ಲಿ ತುಂಬು ತ್ತಿದ್ದವಳು ಕೈತುಂಬ ಹಿಡಿದು ತಂದು ರಮೇಶನ ಬೊಗಸೆಯಲ್ಲಿ ಹಾಕಿಬಿಟ್ಟಳು.

" ಇದೇನೇ, ಅಪರೂಪದ ತಮ್ಮಂಗೆ ಒಣ ಅವಲಕ್ಕಿ ತಿನ್ನಿಸ್ತಿ "

ವೆಂಕಟರಾಮು ಕೇಳಿದನು.

" ಪರವಾಗಿಲ್ಲ, ಸಣ್ಣವನಿರುವಾಗ ಯಾವಾಗಲೂ ಅವಲಕ್ಕಿ ಕೊಡು ಎಂದು ಪೀಡಿಸುತ್ತಿದ್ದ. ತನ್ನ ಪಾಲಿನದನ್ನು ಮುಗಿಸಿಬಿಟ್ಟು ನನಗೆ ಕೊಟ್ಟುದ ರಲ್ಲಿಯೂ ಪಾಲು ಬೇಡುತ್ತಿದ್ದ, ಕಳ್ಳ. ಈಗ ರಾಜ ಆದ ಅಂತ ನಾ ಕೊಟ್ಟ ಅವಲಕ್ಕಿ ತಿನ್ನೋದಿಲ್ಲವೆ ?"

" ಸುದಾಮ – ಕೃಷ್ಣಂಗೆ ಅವಲಕ್ಕಿ ಕೊಟ್ಟದ್ದಕ್ಕೆ ದ್ವಾರಕೆಯ ಸಿರಿಯನ್ನೆಲ್ಲ ಅವನಿಗೆ ಕೊಟ್ಟದ್ದನಂತೆ ಕೃಷ್ಣ. ನಿನ್ನ ತಮ್ಮನ್ನ ನೋಡು ಏನೇನು ತಂದಿದಾನೆ ?"

ಎಂದ ಹೆಂಡತಿ ಕಡೆ ತಿರುಗಿ ನಗುತ್ತ ವೆಂಕಟರಾಮು.

ಇಂದ್ರಾಣಿ ಗಂಟಿನಲ್ಲಿಯ ಪತ್ತಲ, ಹುಡುಗರ ಅರಿವೆ ಎಲ್ಲ ನೋಡಿ ಹೇಳಿದಳು,

" ಹೀಗೆ ಬಂದ ಬಂದಾಗಲೆಲ್ಲ ಯಾಕೆಂತ ತರುತ್ತಿ ? ನಾನೇನು ಇಲ್ಲಿ ಅಂಗಡಿ ಇಡಬೇಕೆ ಇದನ್ನೆಲ್ಲ ಇಟ್ಟುಕೊಂಡು ?"

" ಹಾಗೆಯೇ ಮಾಡು ಅಕ್ಕ. ಒಂದು ಸಾವಿರ ರೂಪಾಯಿ ಬಂಡವಲು ಕೊಡುತ್ತೇನೆ. ಒಂದು 'ವೆಂಕಟೇಂದ್ರ ಲಕಿಸ್ಟೋರ್' ಹಚ್ಚಿಬಿಡು.

ಬಂದದ್ದರಲ್ಲಿ ಅರ್ಧ ಲಾಭ ನನಗೆ – ಅರ್ಧ ನಿನಗೆ. ಅದರಲ್ಲಿ ಚಾಕಲೇಟು, ಬಿಸ್ಕತ್ತುಗಳ ಡಿಪಾರ್ಟ್‌ಮೆಂಟ್ ಮೋಹಾ ನೋಡಿಕೋತಾಳೆ."

ತಮಾಷೆ ಮಾಡಬೇಡ, ರಮಾ. ಮೊದಲು ಎಷ್ಟು ಜಪ್ಪಿಸಿ ಖರ್ಚು ಮಾಡುತ್ತಿದ್ದೆ! ಈಗಾದರೆ ಹೀಗೆಲ್ಲ ಸೂರೆಹೊಡೆಯುತ್ತಿ. ಹೆಚ್ಚಿದ್ದ ದುಡ್ಡನ್ನು ಕೊಡಿಟ್ಟರೆ ಹಾಳಾಗಿಹೋಗುವದೆ? ನಿನಗೂ ಲಗ್ನ, ಮಕ್ಕಳು, ಮರಿ ಅಂತ ಆಗಬೇಕಲ್ಲ."

"ಹೌದು, ರಮೇಶ. ಹೆಣ್ಣಿನೊಡಗೆ ಎಲ್ಲರಿಗೂ ದುಡ್ಡುಸಿಗುವದಿಲ್ಲ. ನನಗಂತೂ ಸಿಗಲಿಲ್ಲ.

ವೆಂಕಟರಾಮುವಿನ ತುಂಟದೃಷ್ಟಿ ಹೆಂಡತಿಯನ್ನು ನೋಡುತ್ತಿತ್ತು.

"ನೀನು ಪುಣ್ಯವಂತ ಭಾವ. ಎಲ್ಲರಿಗೂ ನಿನಗಿದ್ದಂಥ ಹೆಂಡತಿ ದೊರೆಯುವದಿಲ್ಲ. ಲಕ್ಷ್ಮಿಯೇ ನಿನ್ನ ಮನೆಗೆ ಬಂದಿದ್ದಾಳಲ್ಲ. ಸಣ್ಣವನಿರುವಾಗ ಅಕ್ಕನನ್ನು ಗೋಳುಹೊಯ್ದುಕೊಂಡು ಕಾಡಿಸಿ ಅಷ್ಟು ತರಬೇತು ಮಾಡಿರದಿದ್ದರೆ ನಿನಗೆ ಇಂಥ ಹೆಂಡತಿ ಸಿಗುತ್ತಿದ್ದಳೆ? ನೀನು ಹಿಂದಿನ ಜನ್ಮದಲ್ಲಿ ಪಾರ್ವತಿ ಪೂಜೆಮಾಡಿರಬೇಕು."

"ಹುಂ ಬಹಳ ಮಾಡಿರಬೇಕು. ಅದಕ್ಕೆ ಮೊನ್ನೆ ಕುತ್ತಿಗೆಗಿದ್ದ ಒಂದು ಜನಿವಾರದ ಎಳೆಯನ್ನೂ ಕಳೆದು ಅಲ್ಲಿ ತೂಗುಹಾಕಿದ್ದಾರೆ."

ಎಂದಳು ರಮಾ.

"ಅದಕ್ಕೆ ಕಾರಣ ಇದೆ, ರಮೇಶ. ಒಮ್ಮೆ ಕತ್ತಲೆಯಲ್ಲಿ ಹಾಳು ಜನಿವಾರ ಈಕೆಯ ಕುತ್ತಿಗೆಗೆ ಸುತ್ತಿ ಕೊಂಡು ಬಿಟ್ಟಿತು. ಸರಸವೆಲ್ಲ...."

"ಹೋಗ್ರೀ, ಸ್ವಲ್ಪಾದ್ರೂ ನಾಚಿಕೆ, ಸಂಕೋಚ ಅನ್ನೋದು ಇದ್ದಿದ್ದರೆ.... ಮೊನ್ನೆ ಅಪ್ಪನ ಪತ್ರ ಬಂದಿತ್ತು ರಮೇಶ. ಇನ್ನು ಕಚೇರಿಯತನಕ ಹೋಗಿ ದುಡಿಯಬೇಡ ಎಂದು ನೀನು ಬರೆದಿದ್ದೀಯಂತೆ. ತಿಂಗಳಾ ೧೫೦ ರೂಪಾಯಿ ನೀನು ಕಳಿಸಿದ್ದು ಯತೇಚ್ಛ ಸಾಕಾಗುತ್ತದೆ ಎಂದು ಬರೆದಿದ್ದನು. ಮುದುಕ ಇನ್ನಾದರೂ ಹಾಯಾಗಿ ಕುಳಿತುಕೊಂಡಿರಲಿ. ಈ ಸಾರೆ ಮೇ ತಿಂಗಳಲ್ಲಿ ಇವರೂ ಊರಿಗೆ ಹೋಗೋಣ ಎಂದಿದ್ದಾರೆ. ಬರುವಾಗ ಅಪ್ಪನನ್ನೂ ಬಾ ಎನ್ನುತ್ತೇನೆ. ನೀನೂ ಈಗ ದೊಡ್ಡ ಮನುಷ್ಯನಾಗಿದ್ದಿಯಂತಲ್ಲ....ಇವರು ಹೇಳುತ್ತಿದ್ದರು. ಮಗನ ದೊಡ್ಡಸ್ತನವನ್ನು ಅಪ್ಪನೂ ಕೋಡಿಕೊಳ್ಳಲಿ."

“ನೋಡು ದೊಡ್ಡಸ್ತನದಿಂದ ಹೊಟ್ಟೆತುಂಬುವದಿಲ್ಲ. ನಿನ್ನ ತಮ್ಮ ಹಗಲೆಲ್ಲ ದುಡಿದು ದಣಿದು ಬಂದಿದ್ದಾನೆ. ‘ಬಾಯಿ ಉಪಚಾರ’ ಎಂದೆನಿಸುವಂತೆ ಮಾಡಬೇಡ”

ಎಂದು ವೆಂಕಟರಾಮು ಊಟದ ನೆನಪುಮಾಡಿಕೊಟ್ಟನು. ಇಂದ್ರಾಣಿ ಲಗುಬಗೆಯಿಂದ ತಾಟು ಬಡಿಸತೊಡಗಿದಳು.

## ೧೨

ಆದಿನ ರಾತ್ರಿ ರಮೇಶನಿಗೆ ಬಹಳಹೊತ್ತು ನಿದ್ದೆ ಬರಲಿಲ್ಲ. ಊರಿನಲ್ಲಿಯ ತನ್ನ ತಂದೆಯನ್ನೇ ಕುರಿತು ಯೋಚಿಸುತ್ತ ಹೊರಜಗುಲಿಯಲ್ಲಿ ಮಲಗಿ ಕೊಂಡಲ್ಲಿಂದಲೇ ಶೂನ್ಯವಾಗಿ ನಕ್ಷತ್ರಗಳನ್ನು ನೋಡುತ್ತ ಅದೆಷ್ಟೋ ಹೊತ್ತು ಎಚ್ಚತ್ತಿದ್ದನು.

ರಮೇಶನಿಗೆ ತಿಳಿಯತೊಡಗಿದಾಗ ಅವನ ತಂದೆ ಊರಿನ ಕರಣಿಕರಾಗಿ ತಿಂಗಳಿಗೆ ೨೭ ರೂಪಾಯಿ ಗಳಿಸುತ್ತಿದ್ದರು ! ಅದೊಂದು ವರ್ಷ ಮನೆಯವ ರಿಗೆಲ್ಲ ಒಂದಲ್ಲ ಒಂದು ತರದ ಬೇನೆ ಬೆನ್ನು ಹತ್ತಿತ್ತು. ತಾಯಿಗೋಪಾಲನ ಬಾಣಂತಿತನದಲ್ಲಿ ಮೃತ್ಯುಮುಖಿಳಾಗಿ ಎರಡು ತಿಂಗಳು ಹಾಸಿಗೆ ಹಿಡಿದಿದ್ದಳು. ಮನೆಯಲ್ಲಿ ನೋಡಿಕೊಳ್ಳುವ ಹಿರಿಯರು ಮತ್ತೆಯಾರೂ ಇರದ್ದರಿಂದ ತಂದೆಯೇ ರಜೆ ತಗೊಂಡು ಮನೆಯಲ್ಲಿರಬೇಕಾಯಿತು. ರಜೆಯೂ ಉಳಿದಿರಲಿಲ್ಲ. ಅದೇ ನಾಲ್ಕು ತಿಂಗಳ ಹಿಂದೆ ಕಾಲಿಗೇನೋ ಹುಣ್ಣಾದುದಕ್ಕೆ ಒಂದುವರೆ ತಿಂಗಳು ರಜಪಡೆದು ಮನೆಯಲ್ಲಿರಬೇಕಾಗಿತ್ತು. ಈಗ ಒಂದು ತಿಂಗಳು ಪೂರ್ಣ ರಜೆ ದೊರಕಿದ್ದರೂ ಮತ್ತೊಂದು ತಿಂಗಳನ್ನು ಅರ್ಧ ಪಗಾರಿನ ಮೇಲೆಯೇ ಪಡೆಯ ಬೇಕಾಯಿತು. ಅಂದರೆ ೧೩॥ ರೂಪಾಯಿ ! ಅದರಲ್ಲಿ ಪ್ರೊವ್ಹಿಡೆಂಟ್ ಫಂಡಿನ ೧॥ ರೂಪಾಯಿ ಮುರಿದುಕೊಂಡು ಹೋಗಿ ೧೨ ರೂಪಾಯಿ ಕೈಗೆ ಹತ್ತಿತ್ತು. ಅಷ್ಟರಲ್ಲಿ ತಾಯಿಯ ಜಡ್ಡಿನ ಉಪಚಾರದ ಖರ್ಚು, ತಾನು, ಅಕ್ಕ, ತಂಗಿ, ತಮ್ಮ ಇವರ ಸಂಸಾರದ ಖರ್ಚು ಇಷ್ಟೆಲ್ಲ ನೀಗಬೇಕಾಗಿತ್ತು. ಆದರೂ

ಆ ತಂದೆ ಪಿಟ್ ಎಂದು ಒಂದು ಮಾತಾಡಿರಲಿಲ್ಲ. ಒಂದು ದಿನವಾದರೂ ಮಕ್ಕಳಮೇಲೆ ಹರಿಹಾಯ್ದಿರಲಿಲ್ಲ. ತಂದೆಗೆ ನೆರವಾಗಲೆಂದು ತಾನು ಮನೆಯಲ್ಲಿಯೇ ಇರುತ್ತೇನೆ ಎಂದರೆ 'ನೀನೇಕಪ್ಪ? ಶಾಲೆಗೆ ಹೋಗಿ ಚನ್ನಾಗಿ ಕಲಿತುಕೊಂಡಿರು. ನೀನು ನೆರವಾಗೋ ದಿನಗಳೂ ಬರಬಹುದು. ಈಗಲ್ಲ' ಎಂದು ರಮೇಶನನ್ನು ಶಾಲೆಗೆ ಕಳಿಸಿದ್ದರು.

ಇಂಥ ಸ್ಥಿತಿಯಲ್ಲಿಯೂ ಊರಲ್ಲಿಯೇ ಶ್ರೀಮಂತನಾದ ತನ್ನ ತಮ್ಮನಲ್ಲಿ ಒಂದು ಪೈಯನ್ನೂ ಕೇಳಿರಲಿಲ್ಲ ಅವರು. ರಮೇಶನ ಅಜ್ಜನ ಕಾಲಕ್ಕೆ ಅವರದೊಂದು ಅರಳೆಯ ದಳ್ಳಾಳಿ ಅಂಗಡಿ ಇತ್ತು. ರಮೇಶನ ತಂದೆ ಮುಲ್ಕಿ ಪಾಸಾದ ಕೂಡಲೇ ಅವರು ನೌಕರಿ ಮಾಡುವದು, ತಮ್ಮ ವ್ಯಾಪಾರ ನೋಡುವದು ಎಂದು ನಿಶ್ಚಯವಾಯಿತು. ಅವರ ತಂದೆ ತೀರುವವರೆಗೂ ಈ ವ್ಯವಸ್ಥೆ ಚನ್ನಾಗಿಯೇ ಸಾಗಿತ್ತು. ತಂದೆಯವರಿಗೆ ಕೆಲಸದ ಮೇಲೆ ವರ್ಗವಾಗಿ ಅಲ್ಲಿ ಇಲ್ಲಿ ಹೋಗಬೇಕಾಗುತ್ತಿದ್ದದರಿಂದ ಸಹಜವಾಗಿಯೇ ವ್ಯಾಪಾರದ ವಿಷಯಕ್ಕೆ ದುರ್ಲಕ್ಷ್ಯ ಬಂದಿತ್ತು. ಅದರ ಪರಿಣಾಮವಾಗಿ ತಂದೆ ಸತ್ತ ಒಂದು ವರ್ಷದಲ್ಲಿಯೇ ಆ ತಮ್ಮನು ಅಂಗಡಿಯ ಲೆಕ್ಕದಲ್ಲಿ ಹಾನಿ ತೋರಿಸಿ ದಿವಾಳಿ ಹೊಡೆಸಿದ್ದನು. ಅಂಗಡಿ ಮಾರಿ ಬಂದ ಹಣದಲ್ಲಿ ಆದ ಸಾಲವನ್ನೆಲ್ಲ ತೀರಿಸಲಾಯಿತು ಎಂದು ರಮೇಶನ ತಂದೆ ಇದ್ದಲ್ಲಿಗೇ ಪತ್ರ ಬಂದಿತು.

ಆದರೆ ಮುಂದೆ ಒಂದೇ ವರ್ಷದಲ್ಲಿ ಆ ತಮ್ಮ ಜಯಿದುಲ್ಲಾ ಖಾನರ ಕಂಚು ತಾಮ್ರದ ವ್ಯಾಪಾರದಲ್ಲಿ ಪಾಲುಗಾರನಾಗಿ ಮುಂದೆ ಸ್ವಂತ ಅಂಗಡಿ ತೆರೆದಾಗ ಬಹಳ ಜನ ತಿಳಿದವರು 'ತಮಗೇನೂ ಆಶ್ಚರ್ಯವಾಗಿಲ್ಲ' ಎಂದುಕೊಂಡರು. ಆದರೆ ರಮೇಶನ ತಂದೆ ಮಾತ್ರ ತಮ್ಮನೊಡನೆ ಅದಕ್ಕೆಲ್ಲ ಹಣ ಎಲ್ಲಿಂದ ಬಂತು ಎಂದು ಕೇಳುವ ಗೋಜಿಗೆ ಹೋಗಲಿಲ್ಲ. ಅವನ ಸಂಬಂಧವನ್ನು ಮಾತ್ರ ಪೂರ್ಣವಾಗಿ ಕಡಿದುಕೊಂಡುಬಿಟ್ಟರು.

ಪ್ರತಿ ಸಾರೆ ತಂದೆಯ ಪತ್ರ ಬಂದಾಗಲೆಲ್ಲ ರಮೇಶನಿಗೆ ತನ್ನ ತಂದೆಯ ವಿಷಯಕ್ಕೆ ಎಲ್ಲಿಲ್ಲದ ಅನುಕಂಪ ಉಂಟಾಗುತ್ತಿತ್ತು. ಆ ತಂದೆ 'ಸುಖ' ಎನ್ನುವದನ್ನು ತನ್ನ ಜೀವಮಾನದಲ್ಲಿ ಒಂದು ದಿನವೂ ಕಂಡಿರಲಿಕ್ಕಿಲ್ಲ. ತಮ್ಮ ಹೆಂಡತಿ ಮಕ್ಕಳಿಗಾಗಿ ತಮ್ಮ ಜೀವ ತೇದು ಈಗ ಹಣ್ಣಾಗಿದ್ದರು. ಆದರೂ

ಇನ್ನೂ ಒಂದು ಮಾತಾಡುತ್ತಿರಲಿಲ್ಲ. ಒಂದು ಸಾರೆಯೂ ರಮೇಶನಿಗೆ ಇಷ್ಟು ಹಣ ಕಳಿಸು ಎಂದು ಬರೆದಿರಲಿಲ್ಲ. ಅವಕಾಶವಾದಾಗಲೆಲ್ಲ ಆದರ್ಶದ ಉದ್ದ ಲೇಖ ಬರೆದು ಕಳಿಸುತ್ತಿದ್ದರು! ಅದರಲ್ಲಿಯೂ ರಮೇಶನು ಯಾವದೋ ಕಾರಖಾನೆಯ ಮ್ಯಾನೇಜರ್‌ನಾಗಿರುವನೆಂದು ತಿಳಿದಾಗಿನಿಂದ ಈ ಆದರ್ಶದ ತೀಕ್ಷ್ಣತೆ ಇನ್ನೂ ಹೆಚ್ಚಾಗಿತ್ತು.

ರಮೇಶನಿಗೆ ಆ ದಿನ ಕಿರಣಳೊಡನೆ ಆದ ವಾದದ ನೆನಪಾಯಿತು. ಸಿರಿನಂತರನ್ನು ಬಡವರನ್ನಾಗಿಸಿ ಸಮಾಜ ಸಮಾನತೆಯನ್ನು ಸಾಧಿಸುವವ ಎಂದು ಆಕೆ ಟೀಕಿಸಿದ್ದಳು. ತನ್ನ ತಂದೆಯೂ ಬಯಸಿದ್ದರೆ ಎಲ್ಲರಂತೆ ಸಿರಿವಂತನಾಗಲಿಕ್ಕೆ ಬರುತ್ತಿತ್ತು. ಕರಣಿಕರಾಗಿದ್ದ ಬಹಳ ಜನ ಹಾಗೆ ಗುಡಿಗುಂಡಾರಗಳನ್ನು ಕಟ್ಟಿಕೊಳ್ಳಲು ಸಾಲುವಷ್ಟು ಹಣ ಗಳಿಸಿಯೂ ಇದ್ದರು. ಆದರೆ ತನ್ನ ತಂದೆ ಪೈ ಮುಟ್ಟಿರಲಿಲ್ಲ. ಶ್ರೀಮಂತನೂ ಆಗಲಿಲ್ಲ. ಯಾರಾದರೂ 'ನೀವು ಲಂಚ ತಿಂದು ಶ್ರೀಮಂತರಾಗಬಹುದಿತ್ತಲ್ಲ' ಎಂದು ಕೇಳಿದ್ದರೆ 'ಆಗಿ ಏನು ಮಾಡಬೇಕಾಗಿತ್ತು?' ಎಂದು ಸಹಜವಾಗಿ ಕೇಳುತ್ತಿದ್ದರು.

ಚಿತ್ತಳೆ ಕಂಪನಿಯ ಲಾಲಾ, ತಾವಡೇಕರ್ ಕಂಪನಿಯ ಕಿರಣನ ಅಣ್ಣನಂಥವರೆಲ್ಲ ನಿತ್ಯ ಕೂಲಿಕಾರರ ಬೆವರಹನಿ ಕೂಡಿ ರಾಶಿಯಾದ ರೂಪಾಯಿಯ ನೋಟುಗಳನ್ನು ತಮ್ಮ ಬ್ಯಾಂಕಿನಲ್ಲಿ ತುಂಬುತ್ತಿದ್ದಾರೆ! ಈ ಜನ ತನ್ನ ತಂದೆಯಂಥವರೊಡನೆ ಸಮಾನರಾಗಿರುವದೆಂದರೆ ಸಮಾಜವೇ ನಾಶವಾದಂತೆ ಎಂದು ತಿಳಿಯುತ್ತಾರೆ! ರಮೇಶನಿಗೆ ತಾನು, ತನ್ನ ತಂದೆ, ತನ್ನ ಆದರ್ಶ, ತನ್ನ ತಂದೆಯ ಕರ್ತವ್ಯ ಜೀವನ ಇವೆಲ್ಲ ಈ ಎಲ್ಲ ಲಕ್ಷಾಧೀಶ, ಕೋಟ್ಯಾಧೀಶರ ಚೆಕ್‌ಬುಕ್‌ಗಳಿಗಿಂತಲೂ ಹೆಚ್ಚಿನದು ಎನ್ನಿಸಿತು.

ಆದರೆ ಸ್ವಲ್ಪಹೊತ್ತು ಮಾತ್ರ. ಎದುರಿನಲ್ಲಿ ವಿದ್ಯುದ್ದೀಪದಿಂದ ಝಗಝಗಿತವಾಗಿ ಭವ್ಯವಾಗಿ ನಿಂತ ಯಾರೋ ಗುಜರಾತಿ ಮಿಲ್ ಒಡೆಯನೊಬ್ಬನ ಬಂಗ್ಲೆಯನ್ನು ನೋಡಿ ತನ್ನದು ದುಡ್ಡಿಲ್ಲದ ದರಿದ್ರನು ಹಚ್ಚಿಕೊಳ್ಳುವ ಒಣ ಸಮಾಧಾನ ಎಂದುಕೊಂಡನು.

ಮುಂಬಯಿಗೆ ಮೊಟ್ಟಮೊದಲು ಬಂದಾಗ ಮರಿನ್ ಡ್ರ್ಯಾವ್ಸ್‌ದಲ್ಲಿ ಭರ್ರನೆ ಓಡುವ ಕಾರುಗಳು, ಆಚೆಗೆ ನಾಲ್ಕಾರು ಮಾಳಿಗೆಗಳವರೆಗೆ ಸಾಲಾಗಿ ಕಟ್ಟಿದ ಭವ್ಯ ಕಟ್ಟಡಗಳನ್ನು ನೋಡಿ ರಮೇಶನಿಗೂ ಅನಿಸಿತ್ತು – ತಾನೂ ಇಂಥ

ದೊಂದು ಮನೆಯಲ್ಲಿರಬೇಕು, ತನ್ನದೇ ಆದ ಕಾರಿನಲ್ಲಿ ಹೀಗೆಯೇ ಅಡ್ಡಾಡುತ್ತಿರಬೇಕು. ತನ್ನ ತಂದೆ, ತಮ್ಮ, ತಂಗಿಯರನ್ನು ಕರೆದು ತಂದು ಇಂಥದೊಂದು ಮನೆಯಲ್ಲಿಟ್ಟು ಕೈಗೊಬ್ಬ ಕಾಲಿಗೊಬ್ಬ ಆಳನ್ನಿಟ್ಟುಕೊಂಡು ಕಾರಿನಲ್ಲಿ ಮಲಬಾರ್ ಹಿಲ್ಲಿಗೋ, ಜುಹುವಿಗೋ ಸುತ್ತಾಡಿಸಿಕೊಂಡು ಬರಬೇಕು.

"ನೀನು ರಕ್ತ ಚೆಲ್ಲಿ, ಬೆಳಸಿ ಕಾಪಿಟ್ಟ ಗಿಡವೀಗ ಹೂ ಬಿಡುತ್ತಿದೆ, ನಿನಗಾಗಿ ಫಲ ಬಿಡುತ್ತಿದೆ. ನಿನಗೇನು ಬೇಕು ಹೇಳು" ಎಂದು ತನ್ನ ತಂದೆಯನ್ನು ಹೆಮ್ಮೆಯಿಂದ ಕೇಳಬೇಕು ಎಂದು ಏನೇನೆಲ್ಲ ಕನಸು ಕಂಡಿರಲಿಲ್ಲ!

ಕಾರಿನಲ್ಲಿ ಅಕ್ಕಪಕ್ಕದಲ್ಲಿ ಕುಳಿತು ನಗುತ್ತ ಕೆಲೆಯುತ್ತ ಅಡ್ಡಾಡುವ ಗಂಡ ಹೆಂಡಿರನ್ನೋ, ಗಂಡು–ಹೆಣ್ಣನ್ನೋ ನೋಡಿ ಅವನಿಗೂ ಅನಿಸಿತ್ತು–ತಾನೂ ಒಂದು ದಿನ ಸಿರಿವಂತ ಹುಡುಗಿಯೊಬ್ಬಳನ್ನು ಹೆಂಡತಿಯೆಂದು ಹೀಗೆಯೇ ಕೂಡ್ರಿಸಿಕೊಂಡು ಮುಂಬಯಿಯ ತುಂಬೆಲ್ಲ ಅಡ್ಡಾಡಬೇಕು! ಆ ಹೆಣ್ಣು ಸುಂದರಿಯೂ ಇರಬೇಕು, ಸಿರಿವಂತಳೂ ಇರಬೇಕು, ಆದರೆ ತುಂಬ ವಿನಯಶಾಲಿಯೂ ಆಗಿರಬೇಕು..... ರಮೇಶನಿಗೆ ತನ್ನಷ್ಟಕ್ಕೇ ನಗೆ ಬಂದಿತು.

ಸಿರಿವಂತಳೂ ಆಗಿರಬೇಕು! ವಿನಯಶಾಲಿಯೂ ಆಗಿರಬೇಕು!

ತಟ್ಟನೆ ಕಿರಣಳ ಚಿತ್ರ ಅವನ ಕಣ್ಮುಂದೆ ಬಂದು ನಿಂತಿತು. ಸಿರಿವಂತಿಕೆ-ವಿನಯ ಎರಡಕ್ಕೂ ಎಷ್ಟು ದೂರ ಎನ್ನುವದಕ್ಕೆ ತಾನೇ ಉದಾಹರಣೆ ಎನ್ನುವಂತಿತ್ತು ಕಿರಣಳ ವ್ಯಕ್ತಿತ್ವ. ಆದರೂ ಕಿರಣಳ ಸ್ವಭಾವದ ಅರ್ಥ ತನಗಿನ್ನೂ ಆಗಿಲ್ಲವೆಂಬುದನ್ನು ಒಪ್ಪಿಕೊಳ್ಳಬೇಕು. ಅವಳ ಪರಿಚಯವಾದ ಈ ಮೂರು ತಿಂಗಳಲ್ಲಿಯೇ ಇಬ್ಬರಲ್ಲಿಯೂ ಬಹಳ ಸಲುಗೆ ಬೆಳೆದಿತ್ತು. ಮೊದಲು ರವಿವಾರ ಶನಿವಾರ ಮಾತ್ರ ಬ್ರಿಜ್ಜು, ಬ್ಯಾಡ್‌ಮಿಂಟನ್ ಆಡಲು ದಾದರದಲ್ಲಿಯ ತನ್ನ ಮನೆಯಿಂದ ಲಾಲಾನ ಮನೆಗೆ ಬರುತ್ತಿದ್ದ ಕಿರಣ ಈಗ ಬಹುಶಃ ನಿತ್ಯ ಕಾಲೇಜಿಗೆ ಬಂದಾಗಲೊಮ್ಮೆ ಲಾಲಾನ ಮನೆಗೆ ಬಂದು ನಾಲ್ಕು ಚೇಷ್ಟೆಯ ಮಾತಾಡದೆ ಹೋಗದಿರುತ್ತಿರಲಿಲ್ಲ. ಉಳಿದ ಕ್ಲಬ್‌ಗಳಲ್ಲಿಯಾಗಲಿ, ಕಾಲೇಜಿನ ಮಿತ್ರ ವೃಂದಕ್ಕಾಗಲಿ ಅಪರೂಪಳಾದ ಕಿರಣ ಲಾಲಾನ ಮನೆಯಲ್ಲಿ ಅಷ್ಟು ಸಲಿಗೆಯಿಂದ ಬಂದು ಹೋಗುತ್ತಿದ್ದುದರ ಅರ್ಥ ಒಂದು ದಿನ ಲಾಲಾನೊಡನೆ ಮಾತಾಡುತ್ತಿರುವಾಗ ರಮೇಶನಿಗೆ ತಿಳಿದಿತ್ತು.

ಆ ದಿನ ಯೂನಿಯನ್ ಕ್ಲಬ್ಬಿನಲ್ಲಾದಂತೆ ಮತ್ತೂ ಎರಡು ಮೂರು

ಸಾರೆ ಸಿನೇಮಕ್ಕೋ ತಿರುಗಾಡಲಿಕ್ಕೋ ಹೋಗಬೇಕೆಂದು ನಿಶ್ಚಯವಾದಾಗ ಕಿರಣ ಯಾವಾಗಲೂ ರಮೇಶನನ್ನು ಕರೆಯುತ್ತಿದ್ದಳು. ರಮೇಶನು ಯಾವದೊಂದು ವಿಷಯವನ್ನೆತ್ತಿಕೊಂಡು ಹೂಡುವ ವಾಗ್ಯುದ್ಧ ಆಕೆಗೆ ಬಹಳ ಸೇರುತ್ತಿತ್ತು. ಇಬ್ಬರೂ ಸೇರಿದಾಗ ಶೇಕ್ಸ್‌ಪಿಯರ್‌ನಿಂದ ಹಿಡಿದು ಕೊಟಿಲ್‌ವಾಲಾ ಹಿಂದುಸ್ಥಾನಕ್ಕೆ ಬಂದು ನೆಹರೂನ ಭೆಟ್ಟಿಯಾದ ಸಂಗತಿಯ ವರೆಗೆ ಬೇಕಾದ ವಿಷಯವನ್ನೆತ್ತಿಕೊಂಡು ಚರ್ಚಿಸುತ್ತಿದ್ದರು. ಕಿರಣನ ಇಚ್ಛೆಗೆ ತಾನು ಹಿಂದಾಗಬಾರದೆಂದು ಲಾಲಾನು ರಮೇಶನಿಗೆ 'ಬಾ' ಅನ್ನುತ್ತಿದ್ದನು. ಆದರೆ ಆ 'ಬಾ'ದಲ್ಲಿ ಸ್ವಲ್ಪವೂ ಹಾರ್ದಿಕತೆಯಿಲ್ಲದಿರುವದು ರಮೇಶನಿಗೆ ಅರಿವಾಗಿತ್ತು. ಲಾಲಾ ಆದಷ್ಟು ಕಿರಣನೊಡನೆ ಒಬ್ಬನೇ ಇರುವ ಸಂಧಿ ಹುಡುಕುತ್ತಿದ್ದನು. ರಮೇಶನಿಗಾದರೂ ಅವರಂತೆ ದಿನವೆಲ್ಲ ಸಿನೇಮ, ತಿರುಗಾಟ ಎಂದು ವೇಳೆ ಕಳೆಯಲು ಸಂಧಿಯೂ ಇರುತ್ತಿರಲಿಲ್ಲ. ಯಾವಾಗಾದ ರೊಂದುದಿನ ಲಾಲಾನೂ ತೀರ ಒತ್ತಾಯ ಮಾಡಿದರೆ, ಇಲ್ಲವೆ ಅವನಿಲ್ಲದಾಗ ಕಿರಣನೇ 'ನೋಡಿ, ದಿಲ್ಲಿಯಲ್ಲಿ ಈವತ್ತು ನೆಹರೂನೂ ಮ್ಯಾಟನಿಗೆ ಹೋಗುತ್ತಾನಂತೆ ಇದೇ ಈಗ ರೇಡಿಯೋದಲ್ಲಿ ಹೇಳಿದರು. ಅವನಿಗಿಂತಲೂ ಹೆಚ್ಚಿನ ಕೆಲಸ ನಿಮಗಿರಲಿಕ್ಕಿಲ್ಲವಲ್ಲ. ನಡೆಯಿರಿ ಲಿಬರ್ಟಿಗೆ ಹೋಗಿಬರೋಣ' ಎಂದು ರಮೇಶನ ಯಾವ ನೆವಗಳಿಗೂ ಅವಕಾಶವಿಲ್ಲದಂತೆ ಕರೆದರೆ ಹೋಗಿ ಬರುತ್ತಿದ್ದನು.

ಅಂಥದೊಂದುದಿನ ಎರಡನೆಯ ಶೋ ಮುಗಿಸಿಕೊಂಡು ಕಿರಣಳನ್ನು ಮನೆಗೆ ಮುಟ್ಟಿಸಿ ಲಾಲಾ, ರಮೇಶ ಇಬ್ಬರೂ ಫೋರ್ಟಿನ ತಮ್ಮ ಮನೆಯತ್ತ ಕಾರಿನಲ್ಲಿ ನಡೆದಿದ್ದರು. ಈಗಾಗಲೇ ಡ್ರಾೖವಿಂಗ್ ಕಲಿತಿದ್ದ ರಮೇಶನೇ ವೀಲು ಹಿಡಿದಿದ್ದನು. ತನ್ನ ಬಹು ದಿನದ ಸಂಶಯವನ್ನು ದೂರಮಾಡಿಕೊಳ್ಳಬೇಕೆಂದು ರಮೇಶ ಆರಂಭಿಸಿದನು.

"ನಿಮಗೀಗ ಎಷ್ಟು ವರ್ಷ, ಲಾಲಾ ?"

"ಇಪ್ಪತ್ತಾರಲ್ಲಿದ್ದೇನೆ. ಏಕಪ್ಪಾ ವರ್ಷಗಿರ್ಷ ಅಂತ ಕೇಳಹತ್ತಿದೆಯಲ್ಲ ?"

"ಹುಂ, ವೈನಿ ಮನೆಗೆ ಬರಲಿಕ್ಕೆ ಇನ್ನೂ ಒಂದು ವರ್ಷ ಇದೆಯಲ್ಲ. ಅಲ್ಲಿಯವರೆಗೆ ನೀವು ಕಾಯಬೇಕಾದೀತು ಎಂದು ಲೆಕ್ಕಹಾಕುತ್ತಿದ್ದೆ."

"ಅಂದರೆ ನನ್ನ ಲಗ್ನ ಇಪ್ಪತ್ತೇಳನೆಯ ವರ್ಷಕ್ಕೆ ಆಗುತ್ತದಂತ ಯಾರಾದರೂ ಭವಿಷ್ಯ ಹೇಳಿದರೇನು ?"

"ಭವಿಷ್ಯವಲ್ಲ."

"ಅಂದರೆ....?"

"ಆದರೆ – ಒಬ್ಬರ ಬಿ. ಎ. ಪರೀಕ್ಷೆ ಮುಗಿಯಲಿಕ್ಕೆ ಇನ್ನೂ ಒಂದು ವರ್ಷ ಚಿಲ್ಲರೆ ತಿಂಗಳು ಇದೆಯಲ್ಲ. ಅಲ್ಲಿಯವರೆಗೆ ಕಾಯಬೇಕಾಗುವದು."

"ನೋಡು, ಒಗಟು ಮಾತಾಡಬೇಡ. ಎಲ್ಲಿಯಾದರೂ ಹೆಣ್ಣು ನೋಡಿಟ್ಟಿದ್ದರೆ ಹೇಳಿಬಿಡು. ಈಗಲೇ ಟ್ರಿಪ್ ಹೊಡೆಸಿಬಿಡೋಣ. ನಿನ್ನ ತಂಗಿಯಂತೂ ಇನ್ನೂ ಸಣ್ಣ ಹುಡುಗಿ ಎಂದೆಯಲ್ಲ."

"ನನ್ನ ತಂಗಿ ನಿಮ್ಮಂಥವರನ್ನೆಲ್ಲ ಲಗ್ನವಾಗುವಷ್ಟು ಬಡವಾಗಿ ಕುಳಿತಿಲ್ಲ. ಯಾವ ದಫ್ತರಿನ ದೊರೆ ಆ ಪುಣ್ಯ ಪಡೆದಿದ್ದಾನೆ ನೋಡಬೇಕು. ಆಖೈರ ನೂರೈವತ್ತು – ಇನ್ನೂರು ರೂಪಾಯಿ ತಿಂಗಳ ಪಗಾರಿನ ಹಿಂದುಸ್ಥಾನ ಸರಕಾರದ ಯಾರಾದರೊಬ್ಬ 'ಯುವರ್ ಒಬೀಡಿಯಂಟ್ ಸರ್ವ್ಹಂಟ್' ಆದರೂ ದೊರೆಯಬಹುದು ಎನ್ನುವ ಆಶೆಯಿದೆ. ಆದರೆ ಅದಕ್ಕಿನ್ನೂ ನಾಲ್ಕಾರು ವರ್ಷ ದೂರ ಇದೆ. ನಾಸೀಗ ಹೇಳ್ತಾ ಇರೋದು ಜ್ಯೂ. ಬಿ.ಎ. ದಲ್ಲಿ ಇದ್ದವರ ಸಂಗತಿಯನ್ನು. ಬೇಕಂತ ತಿಳಿಯದವರ ಹಾಗೆ ನೋಡುತ್ತೀರಲ್ಲ."

ಲಾಲಾ ರಮೇಶನನ್ನೇ ನೋಡುತ್ತಿದ್ದವನು ರಸ್ತೆಯ ಕಡೆಗೆ ತಿರುಗಿ ಒಂದು ಭಾರವಾದ ನಿಶ್ವಾಸಬಿಟ್ಟನು.

"ನನ್ನ ಹೃದಯದ ಭಾವನೆಗಳು ನನಗೆ ಮಾತ್ರ ತಿಳಿದಿವೆ ಎಂದುಕೊಂಡಿದ್ದೆ. ಆದರೆ ನಿನ್ನ ದೃಷ್ಟಿಯಿಂದಂತೂ ಮುಚ್ಚಿಡಲಾಗಲಿಲ್ಲವಲ್ಲ. ತಾವಡೇಕರ್ ಮತ್ತು ನಮ್ಮ ಪರಿಚಯ ನನ್ನ ತಂದೆಯ ಕಾಲದಿಂದಲೂ ಬಂದದ್ದು. ಕಾರಣ ಚಿಕ್ಕಂದಿನಿಂದಲೂ ನಮ್ಮ ಮನೆಗೆ ಬಂದು ಹೋಗುತ್ತಲೇ ಇದ್ದಳು. ನನ್ನೊಡನೆ ತುಂಬ ಸಲಿಗೆಯಿಂದ ನಡೆದುಕೊಂಡು ಬಂದಿದ್ದಾಳೆ. ನೋಡುತ್ತಲೇ ಇದ್ದೀಯಲ್ಲ. ಆದರೂ ಇಷ್ಟು ಸನಿಹವಾಗಿದ್ದರೂ ಬಹಳ ದೂರ ಇದ್ದಂತೆ ವರ್ತಿಸುತ್ತಾಳೆ. ಅದೆಷ್ಟೋ ಸಾರೆ ಪ್ರಯತ್ನಿಸಿದೆ. ನನ್ನ ಹೃದಯವನ್ನು ಬಿಚ್ಚಿ ನನ್ನ ಭಾವನೆಗಳನ್ನು ಆಕೆಯ ಮುಂದೆ ತೋಡಿಕೊಳ್ಳೋಣ ಎಂದು. ಆದರೆ ಆಕೆಯ ರೀತಿಯನ್ನು ನೋಡಿ ಅಂಜಿಕೆಯಾಗುತ್ತದೆ. ಆಕೆ

ಯಾವುದಕ್ಕೂ ಅವಕಾಶವನ್ನೇ ಕೊಡುವದಿಲ್ಲ. ತಾನಾಗಿಯೇ ಬೇಕಷ್ಟು ಸಲುಗೆ ತೋರಿಸುತ್ತಾಳೆ. ಆದರೆ ಅದರಿಂದ ಉತ್ತೇಜಿತರಾಗಿ ನಾವೂ ನಮ್ಮ ಸ್ನೇಹದ ಗೆರೆಯನ್ನು ಅತಿಕ್ರಮಿಸಿದರೆ ಮರುಕ್ಷಣ ಅತಿ ಔಪಚಾರಿಕ ಆಗಿ ಬಿಡುತ್ತಾಳೆ. ಒಮ್ಮೆ ಭಾವಪರವಶನಾಗಿ 'ಕಿರಣ,' ಎಂದು ಏನೆಲ್ಲ ಹೇಳುವವನಿದ್ದೆ. ಆದರೆ ನನ್ನ ಬಾಯ ಮೇಲೆ ಕೈಯಿಟ್ಟು ಏನೂ ಹೇಳಲು ಅವಕಾಶ ಕೊಡದೆ 'ನೀವು ಆ ದನಿಯಲ್ಲಿ ಮಾತಾಡಲಾರಂಭಿಸಿದರೆ ನಾನೆದ್ದು ಹೊರಟು ಬಿಡುತ್ತೇನೆ' ಎಂದು ನಗುತ್ತ ಎದ್ದುಬಿಟ್ಟಿದ್ದಳು. ಅದರ ನಂತರ ಮತ್ತೆ ಆ ಸಾಹಸ ಮಾಡಹೋಗಲಿಲ್ಲ. ತನ್ನ ತೀರ ಹತ್ತಿರದ ಕಾಲೇಜು ಮಿತ್ರರಿಗಿಂತಲೂ ಹೆಚ್ಚಿನ ಸಲಿಗೆಯಿಂದ ಮನೆಗೆ ಹೋಗಿ ಬರುತ್ತಿರುತ್ತಾಳಲ್ಲ. ಅದೇ ದೊಡ್ಡದು ಎಂದುಕೊಂಡಿದ್ದೇನೆ. ಇಂದಲ್ಲ ನಾಳೆಯಾದರೂ ನನ್ನ ಮನೆಯ ಲಕ್ಷ್ಮಿ, ನನ್ನ ಹೃದಯಲಕ್ಷ್ಮಿ ಆಗಬಹುದು ಎಂದುಕೊಂಡಿದ್ದೇನೆ."

"ಈ ವಿಷಯ ಕಾಕೀಗೆ ತಿಳಿದಿಲ್ಲವೆ?"

"ನನ್ನ ಭಾವನೆ – ತಿಳಿದಿಲ್ಲ. ಆದರೆ ಕಿರಣನೇ ತನ್ನ ಸೊಸೆಯಾದರೆ ಆಗಬಹುದಿತ್ತಲ್ಲ ಎಂದು ಮಾತ್ರ ಅವಳದೂ ಅಭಿಲಾಷೆಯಿದೆ. ಹಾಗೆಂದು ಒಂದೆರಡುಸಾರೆ ಹೇಳಿಯೂ ಬಿಟ್ಟಿದ್ದಳು, ತಮಾಶೆಗಾಗಿ ಎಂಬಂತೆ. 'ಈಗೇನು ಬೇರೆ ಇದ್ದೇನೆಯೇ?' ಎಂದು ಹೇಳಿ ಕಿರಣನೂ ತಮಾಷೆಯಾಗಿಯೇ ಆ ಮಾತನ್ನು ಹಾರಿಸಿಬಿಡುತ್ತಾಳೆ."

"ಆಗದಿರಲು ಯಾವ ಅಭ್ಯಂತರವೂ ಇಲ್ಲವಲ್ಲ. ತಾವಡೇಕರ್ ಸ್ವಲ್ಪ ಸ್ವತಂತ್ರ ಮನಸ್ಸಿನವರು. ಅದಕ್ಕೆ ಯಾರು ಹೇಳಿ ಕೇಳಿ ಏನೂ ಅವರ ಒಲವು ರೂಪಗೊಳ್ಳಲು ಶಕ್ಯವಿಲ್ಲ. ನಿಮಗಿಂತಲೂ ಯೋಗ್ಯರಾದ ಪತಿ ಯಾವ ಹೆಣ್ಣಿಗಾದರೂ ದೊರಕಬಹುದೆಂದು ನನಗನಿಸುವದಿಲ್ಲ. ನೀವಿಬ್ಬರೂ ಒಂದೇ ಮಟ್ಟದವರು, ಒಂದೇ ದೃಷ್ಟಿಕೋನದವರು. ಏಕಾಗಬಾರದು? ಅಂತೂ ಮುಂದಿನ ವರ್ಷ ನನಗೆ ವೈನಿ ಬರುವದು ಖಾತ್ರಿ."

"ನಿನ್ನ ಬಾಯಿಗೆ ಸಕ್ಕರೆ ಬೀಳಲಿ. ಆದರೆ ಆಕೆಯೊಡನೆ ಹಾಗೇನಾದರೂ ಹೇಳಿಬಿಟ್ಟೀಯ."

"ಇಲ್ಲರೀ ಇಲ್ಲ. ಹೇಳುವದಾದರೆ ಸೂಕ್ಷ್ಮವಾಗಿ ಸೂಚಿಸುತ್ತೇನೆ.

ನಿಮ್ಮ ಸ್ವಂತದ ಭಾವನೆಯನ್ನು ಬಯಲು ಮಾಡುವದಿಲ್ಲ. ಅದನ್ನು ನೀವೇ ಹೇಳಿಕೊಳ್ಳಿ ಒಂದು ಉತ್ತಮ ನಕ್ಷತ್ರದ ದಿನ."

ರಮೇಶ ಮಾತು ಮುಗಿಸಿದ್ದನು. ಆದರೆ ಕಿರಣಳ ಹೆಚ್ಚು ಪರಿಚಯ ವಾದಂತೆ ಲಾಲಾನಂತೆ ರಮೇಶನಿಗೂ ಆಕೆಯ ವಿಷಯ ಒಂದು ಗೂಢ ವಾಗಿಯೇ ತೋರುತ್ತಿತ್ತು. ಲಾಲಾ ಕಿರಣಳೊಡನೆ ಹೆಚ್ಚು ಹೆಚ್ಚು ಒಬ್ಬನೇ ಇರಲು ಪ್ರಯತ್ನಿಸುತ್ತಿದ್ದರೆ ಆಕೆ ಅದನ್ನು ಆದಷ್ಟು ತಪ್ಪಿಸಲು ಪ್ರಯತ್ನಿಸುತ್ತಿದ್ದಳು. ಹಾಗೆ ತಪ್ಪಿಸುತ್ತಿದ್ದುದನ್ನು ಮುಚ್ಚಿಡಲೂ ಯತ್ನಿಸುತ್ತಿರಲಿಲ್ಲ. 'ನೀವೊಬ್ಬರಾದರೆ ಬರುವದಿಲ್ಲ. ಏನೆಲ್ಲ ಹರಟುತ್ತೀರಿ. ವೈನಿಯನ್ನೂ (ಗಿರಿಜಾ ತಾಯಿ) ಕರೆಯಿರಿ' ಎಂದುಬಿಡುತ್ತಿದ್ದಳು.

ರಮೇಶನೂ ಯಾವಾಗಲಾದರೂ ಲಾಲಾನ ವಿಷಯವೆತ್ತಿ ಅವನು ತನಗೆ ಮಾಡಿದ ಉಪಕಾರ, ಅವನ ದೊಡ್ಡ ಗುಣಗಳನ್ನು ಹೊಗಳತೊಡಗಿದರೆ 'ನೀವೇನೋ ನಿಮ್ಮ ಲಾಲಾ ಏನೋ. ಅವರನ್ನು ಬಿಟ್ಟರೆ ಬೇರೆ ವಿಷಯವೇ ಇಲ್ಲವೆ? ನೋಡಿ, ಇಬ್ಸೆನ್ಸ್ 'ಡೋಲ್ಸ್ ಹೌಸ್' ಬರೆದು ಇಂಗ್ಲಂಡ್‌ದಲ್ಲಿ ಸಾಮಾಜಿಕ ಕ್ರಾಂತಿ ಮಾಡಿದನಂತೆ. ಅಂಥದಾದರೂ ಏನಿದೆ ಅದರಲ್ಲಿ?' ಎಂದು ಏನಾದರೂ ಕೇಳಿಬಿಟ್ಟು ಕಿಲಕಿಲನೆ ನಕ್ಕುಬಿಡುತ್ತಿದ್ದಳು. ಆದರೂ ಲಾಲಾನ ಮನೆಗೆ ಬರುವದನ್ನಾಗಲಿ ಆತನೊಡನಿದ್ದ ಮೊದಲಿನ ಸಲಿಗೆ ಯನ್ನಾಗಲಿ ಸ್ವಲ್ಪವೂ ಕಡಿಮೆ ಮಾಡಿರಲಿಲ್ಲ. ರಮೇಶನೊಡನೆಯೂ ಮೊದಲಿನ 'ಕಂಪನಿಯ ಮ್ಯಾನೇಜರ್' ಭಾವನೆ ಹೋಗಿ ಸರಿಕರ ಸಲುಗೆ ಯಿಂದ ನಡೆದುಕೊಳ್ಳುತ್ತಿದ್ದಳು. ಶ್ರೀಮಂತರ ವಿಷಯಕ್ಕಿರಲಿ, ಆಕೆಯ ವಿಷಯಕ್ಕಾದರೂ ರಮೇಶ ತಮಾಶೆಗಾಗಿ ಏನಾದರೂ ಟೀಕೆ ಮಾಡಿದರೆ ಮೊದಲಿನಂತೆ ಈಗ ಸಿಟ್ಟಾಗುತ್ತಿರಲಿಲ್ಲ. ಬದಲು ತಾನು ಸೇರಿಗೆ ಸವ್ವಾಸೇರು ಮುಟ್ಟಿಸುತ್ತಿದ್ದಳು.

ರಮೇಶ ತನ್ನ ಹೆಂಡತಿಯನ್ನು ಕುರಿತು ಕಲ್ಪನಾ ರಾಜ್ಯಕಟ್ಟುತ್ತ ಮಲಗಿದಾಗ ಕಿರಣಳ ವಿಷಯದ ಇದೆಲ್ಲ ಸಂಗತಿ ನೆನಪಿಗೆ ಬಂದು ಆತನಿಗೆ ಮತ್ತೆ ನಗೆಬಂದಿತು. ಆ ಹುಡುಗಿ ಹೆಮ್ಮೆಯ ಕೊಂಪೆ ಎಂದುಕೊಂಡನು. ಬಹುಶಃ ತನಗೊಬ್ಬ ಮಹಾರಾಜನ ಮಗನೇ ಮಾಲೆಹಿಡಿದು ನಿಂತಿರುತ್ತಾನೆಂದು ತಿಳಿದು ಆಕೆ ಲಾಲಾನನ್ನೂ ಬದಿಗಿಟ್ಟು ಕುಳಿತಿರಬೇಕು. ಸಿರಿವಂತಿಕೆಯ

ದರ್ಪ ಇದು. ಇದಕ್ಕೆ ಅವರು ಕರೆಯುತ್ತಿದ್ದುದು ಸಂಸ್ಕೃತಿ ಎಂದು! ಆದರೂ ಆ ಹುಡುಗಿ ದರ್ಪದ ಹುಡುಗಿ ಎನ್ನುವಂತಿರಲಿಲ್ಲ. ಯಾವುದರ ಅಹಂಕಾರ ವಿದ್ದರೂ ಸಿರಿವಂತಿಕೆಯ ಅಹಂಕಾರ ಮಾತ್ರ ಆಕೆಗಿಲ್ಲವೆಂಬುದನ್ನು ರಮೇಶ ಕಂಡುಕೊಂಡಿದ್ದನು.

## ೧೩

ಒಂದು ದಿನ ಆಫೀಸಿನಲ್ಲಿ ಕುಳಿತಿದ್ದಾಗ ಕಿರಣ ಎಲ್ಲಿಂದಲೋ ಫೋನ್ ಮಾಡಿದ್ದಳು,

"ನಿಮಗೆ ಅನಾನುಕೂಲವಾಗದಿದ್ದರೆ ನನ್ನದೊಂದು ಕೆಲಸ ಮಾಡಿ ಕೊಡಬೇಕು."

"ಅಪ್ಪಣೆಯಾಗಲಿ. ನಿಮಗೂ ಅಲ್ಲ ಅನ್ನುತ್ತೀನೆಯೇ ?"

"ಈ ಉಪಚಾರ ಬೇಡ. ಈಗ ಎರಡು ಮೂರು ತಾಸಿನಷ್ಟು ನನಗಾಗಿ ವೇಳೆ ಕಳೆಯುವಂತಿದೆಯೇ ಹೇಳಿ. ಸಂಗತಿ ಸ್ವಲ್ಪ ಅರ್ಜಂಟಾಗಿದೆ."

ರಮೇಶ ತನ್ನ ಡೈರಿ ತೆರೆದು ನೋಡಿ ಆ ದಿನ ಯಾರಿಗೂ ಭೆಟ್ಟಿಯಾಗುವ ಪ್ರೊಗ್ರಾಮ್ ಇಲ್ಲದುದನ್ನು ನೋಡಿಕೊಂಡು ಹೇಳಿದನು,

"ನೀವು ಇಚ್ಛೆಪಟ್ಟರೆ ಇಂಡಿಯಾದ ಸ್ಟೆಂಡರ್ಡ್ ಟ್ಯಾಂ ಬೇಕಾದರೂ ಎರಡು ತಾಸು ನಿಲ್ಲಿಸಿಡಬಲ್ಲಿರಿ. ನಮ್ಮಂಥ ಹುಲುಮನುಜರ...."

"ಸಾಕು ಮಾಡಿರಿ. ಹಾಗಾದರೆ ಒಂದು ಟ್ಯಾಕ್ಸಿ ಮಾಡಿಕೊಂಡು ಸೀದಾ ವಿಲ್ಸನ್ ಕಾಲೇಜಿನ ಕ್ಯಾಂಟೇನಿಗೆ ಬಂದುಬಿಡಿ. ಬರುತ್ತೀರಿ ತಾನೆ ?"

ರಮೇಶ ಒಪ್ಪಿಗೆ ಸೂಚಿಸಿ ಕ್ಯಾಂಟೇನಿಗೆ ಬಂದಾಗ ಕಿರಣ ಮೂಲೆಯ ಒಂದು ಟೇಬಲ್ಲಿನ ಬದಿಗೆ ಮತ್ತಾರೊಡನೆಯೋ ಕುಳಿತು ಅವನದೇ ಹಾದಿ ನೋಡುತ್ತಿದ್ದಳು. ಮೂರು ಲೆಮನ್‌ಜೂಸಿನ ಆರ್ಡರ್ ಆಯಿತು.

"ನಮ್ಮ ಕಾಲೇಜು ಕೆಂಟೀನ್ ನೀವಿನ್ನೂ ನೋಡಿರಲಿಲ್ಲ ಅಲ್ಲವೆ ?"

"ಅದಕ್ಕಾಗಿಯೇ ಕರೆಸಿದಿರೇನು ? ಎರಡು ತಾಸಿನಲ್ಲಿ ವಿಮಾನದ ಮೇಲೆ ಮುಂಬಯಿ ರಾಜ್ಯವನ್ನೇ ಸುತ್ತಬಹುದಲ್ಲ."

"ತುರ್ತ ಅಷ್ಟು ದೂರ ಬೇಡ. ನಿಮಗೆ ಇವರ ಪರಿಚಯ ಮಾಡಿ ಕೊಡುತ್ತೇನೆ. ಹಿಂದೆ ಅಕೋೞಕರ್‌ರ ವಿಷಯ ಹೇಳಿದ್ದು ನೆನಪಿದೆಯಲ್ಲ. ಇವರೇ ಆ ಯುಗಪುರುಷರು. ಕಾಲೇಜಿನ ಸ್ಕಾಲರ್‌ರು, ಡಿಬೇಟಿಂಗ್ ಯೂನಿಯನ್‌ದ ಸೆಕ್ರೆಟರಿ, ಮರಾಠಿ ಸ್ನೇಹ ಮಂಡಳದ ಕಾರ್ಯಕರ್ತರೂ ಹೌದು. ಚನ್ನಾಗಿ ಹಾಡುತ್ತಾರೆ. ಹುಡುಗಿಯರು ಎದುರಿಗೆ ಬಂದರೆ ಮಾತ್ರ ಮೋರೆ ಗಂಟುಹಾಕುತ್ತಾರೆ. ಹಾಗೆ ಮಾಡಿದರೆ ನೀವು ಚಂದ ಕಾಣುತ್ತೀರಿ ಎಂದು ಅವರಿಗೆ ಯಾರೋ ಹೇಳಿದ್ದಾರಂತೆ.

ಮುರಲಿ, ಇವರು ಮಿ. ಮಾಹುಲಿ. ನನ್ನ ಸುಮಾರು ಹತ್ತಿರದ ಮಿತ್ರರು. ತೀರ ವಾಚಾಳಿ. ಯಾವಾಗಲೂ ನರಕದಲ್ಲಿದ್ದ ಮಾರ್ಕ್ಸ್‌ನೊಡನೆ ವಾಯರ್‌ಲೆಸ್‌ದಿಂದ ಮಾತಾಡುತ್ತಲೇ ಇರುತ್ತಾರೆ. ಆವರ ಕಾಲಕ್ಕೆ ಅವರೂ ಸ್ಕಾಲರ್‌ರಾಗಿದ್ದರಂತೆ. ಅದಕ್ಕೆ ನಿಮ್ಮಿಬ್ಬರ ಪರಿಚಯ ಆಗಲಿ ಅಂತ...."

ರಮೇಶ ನಮಸ್ಕಾರ ಎನ್ನಬೇಕೋ ಕೈ ಕುಲುಕಬೇಕೋ ಎಂದು ಅನುಮಾನಿಸುತ್ತಿರುವಾಗಲೇ ಆ ಯುವಕ ಕುಳಿತಲ್ಲಿಂದ ಎದ್ದು ಕೈಜೋಡಿಸಿ 'ನಮಸ್ಕಾರ' ಎಂದನು.

"ನನಗೆ ಕೈಕುಲುಕಲಿಕ್ಕೆ ಬರುವದಿಲ್ಲ"

ಎಂದು ರಮೇಶನ ಇಂಗಿತವನ್ನರಿತವನಂತೆ ನುಡಿದು ನಕ್ಕನು.

ರಮೇಶ ಅವನನ್ನೇ ನೋಡುತ್ತಿದ್ದನು. ಮುಂಬಯಿಯ ಕಾಲೇಜಿನಲ್ಲಿಯೂ ಅಷ್ಟು ಸರಳ ವಿದ್ಯಾರ್ಥಿ ಇರಬಹುದೆ? ಎಂದು ಅವನಿಗೆ ಆಶ್ಚರ್ಯವಾಯಿತು. ತೊಟ್ಟುದು ಒಂದು ಪ್ಯಾಜಾಮು, ಅದರ ಮೇಲೆ ಉದ್ದವಾದ ನೆಹರೂ ಶರ್ಟು – ಎರಡೂ ಮನೆಯಲ್ಲಿಯೇ ಮಡಿಯಾಗಿ ಒಗೆದದ್ದು. ಕಾಲಲ್ಲಿ ಒಂದು ಸಾದಾ ಚಪ್ಪಲು. ಸಣ್ಣದಾಗಿ ಹೊಡೆಸಿದ ತಲೆಯ ಕ್ರಾಪು. ಅಗಲವಾದ ಮೋರೆ. ಅದು ಯಾವಾಗಲೂ ಗಂಭೀರವಾಗಿ ತೋರಿದರೂ 'ಬೇಕಾದಾಗ ಸಿದ್ಧವಾಗಿದ್ದೇನೆ' ಎನ್ನುವಂತಿದ್ದ ತುಟಿಯ ಮೇಲಿನ ನಗೆ. ಎಲ್ಲಿ ಯಾರು ಪರಿಚಿತರು ಕಂಡರೂ ಅವರನ್ನು ಮಾತಾಡಿಸಿ, ಸುಖದುಃಖ ಕೇಳುವ

ವೃತ್ತಿ ಕುಳಿತ ಐದು ನಿಮಿಷದಲ್ಲಿಯೇ ರಮೇಶನಿಗೆ ಅರಿವಾಯಿತು. ತಾನು ಬಡವನೆನ್ನುವ ದೈನ್ಯವಾಗಲಿ, ಕೀಳ್ತನವಾಗಲಿ ಆತನಲ್ಲಿ ಸ್ವಲ್ಪವೂ ಇರಲಿಲ್ಲ.

ತನಗೂ ಇವನಿಗೂ ಎಷ್ಟು ಅಂತರ! ಎಂದುಕೊಂಡನು ರಮೇಶ. ತನ್ನ ತೀರ ಹತ್ತಿರದ ನಾಲ್ಕಾರು ಮಿತ್ರರೊಡನೆ ಬಿಟ್ಟರೆ ರಮೇಶ ಮತ್ತಾರೊಡನೆಯೂ ಮಾತಾಡುತ್ತಲೇ ಇರಲಿಲ್ಲ. ಪರಿಚಿತರು ಎದುರಿನಿಂದ ಬಂದರೆ ಅವರು ಯಾರೋ ಅನ್ನುವಷ್ಟು ನಿರ್ಲಕ್ಷದಿಂದ ತನ್ನಷ್ಟಕ್ಕೆ ಏನೋ ವಿಚಾರಿಸುತ್ತ ನಡೆದು ಬಿಡುತ್ತಿದ್ದನು. ಕಾಲೇಜಿನಲ್ಲಿಯ ಒಬ್ಬಿಬ್ಬರು ಸಿರಿವಂತ ಹುಡುಗರು ಈ ಸ್ಕಾಲರ್‌ನಿಂದ ತಮಗೇನಾದರೂ ಉಪಯೋಗ ಬೀಳಬಹುದೆಂದು ರಮೇಶನ ಪರಿಚಯ ಮಾಡಿಕೊಳ್ಳಲೆತ್ನಿಸಿದ್ದರು. ಆದರೆ ರಮೇಶನಿಂದ ಅದಕ್ಕೆ ಬೇಕಾದ ಸ್ವಾಗತ ದೊರೆಯುತ್ತಿರಲಿಲ್ಲ. ತನ್ನ ಬಡತನ, ದೈನ್ಯಕ್ಕಾಗಿ ರಮೇಶನಿಗೆ ತನ್ನಷ್ಟಕ್ಕೇ ನಾಚಿಕೆಯುಂಟಾಗುತ್ತಿತ್ತು.

ತನ್ನದೇ ಪರಿಸ್ಥಿತಿಯಲ್ಲಿದ್ದ ಈ ತರುಣನಿಗೂ ತನಗೂ ಎಷ್ಟು ಅಂತರ! ಎಂದು ರಮೇಶ ಮತ್ತೊಮ್ಮೆ ತನ್ನಲ್ಲಿಯೇ ಎಂದುಕೊಂಡನು. ಕ್ಯಾಂಟೀನಿಗೆ ಬಂದ ಯಾರೊಡನೆಯಾದರೂ ತೀರ ಸಹಜ ರೀತಿಯಿಂದ ಮಾತಾಡಿ ತನ್ನ ವ್ಯಕ್ತಿತ್ವವನ್ನು ಎಲ್ಲರ ಮೇಲೆ ಹರಡುತ್ತಿದ್ದ ಈತನೆಲ್ಲಿ, ಯಾರ ಸಂಗವೂ ಬೇಡವಾಗಿ ಯಾವಾಗಲೂ ಏಕಾಂತವಾಗಿದ್ದುಕೊಂಡು ಹಗಲುಗನಸು ಕಟ್ಟುವ ತಾನೆಲ್ಲಿ! ಆದರೇನಾಯಿತು? ನಾನಿದ್ದ ರೀತಿಯೇ ಸಮಾಧಾನಕರವಾದದ್ದು. ಕೇಕು, ಸಿಗರೇಟು, ಗ್ಲುಕೋಕೋಲಾ, ಚಾಕಲೇಟುಗಳನ್ನು ಬಿಟ್ಟು ಹೊರಗಿನ ಜಗತ್ತನ್ನರಿಯದ ಈ ಜನರ ಸ್ನೇಹದಿಂದ ತನಗೇನಾಗಬೇಕಾಗಿದೆ ಎಂದುಕೊಂಡನು.

ಮಾತುಕಥೆ ಸಾಗಿಯೇ ಇತ್ತು. ಮಾತಿನ ಕಡೆಗೆ ಲಕ್ಷವಿಲ್ಲದೆ ರಮೇಶ ಖರೇ, ಹ್ಞೂ, ಅಲ್ಲ ಎಂದು ಗೋಣು ಹಾಕುತ್ತಿದ್ದುದು ಕಿರಣಳಿಗೆ ತಿಳಿಯ ದಿರಲಿಲ್ಲ.

"ಏಕೆ? ಮುನಿವರ್ಯರು ಬಹಳ ವಿಚಾರಕ್ಕೆ ಬಿದ್ದಿದ್ದೀರಿ?"

ಎಂದು ಆಕೆ ಕೇಳಿದಾಗಲೇ ರಮೇಶನಿಗೆ ತನ್ನ ವಿಚಾರ ವಿಲಾಸದಿಂದ ಪೂರ್ಣ ಎಚ್ಚರಾಯಿತು. ಸಾವಧಾನವಾಗಿ ಕೈಗಡಿಯಾರ ನೋಡುತ್ತ ಹೇಳಿದನು.

"ಆ ಎರಡು ತಾಸಿನ ಅರ್ಜಂಟ್ ಕೆಲಸ ಯಾವಾಗ ಬರುತ್ತದೆ ಎಂದು ವಿಚಾರಮಾಡುತ್ತಿದ್ದೆ. ನಿಮ್ಮ ಮಿತ್ರರ ಇಂಟ್ರಡಕ್ಷನ್ ಅಂತೂ ಎರಡು ನಿಮಿಷ ಗಳಲ್ಲಿ ಮುಗಿಯಿತು. ಇನ್ನು ನಿಮ್ಮ ಹದಿನೆಂಟು ನೂರು ಕಾಲೇಜು ಮೇಟ್ಸ್ ಗಳನ್ನು ಪರಿಚಯಮಾಡಿಕೊಳ್ಳುವ ಉತ್ಸುಕತೆ ನನಗಂತೂ ಇಲ್ಲ."

"ಅವರಿಗೂ ಇರಲಿಕ್ಕಿಲ್ಲ. ಆದ್ದರಿಂದ ನ್ಯೂ ಎಂಪಾಯರ್‌ಗೆ ಫೋನು ಮಾಡಿದ್ದೇನೆ ಮೂರು ಟಿಕೆಟ್ಟುಗಳನ್ನು ರಿಝರ್ವ್ ಮಾಡಿರಿ ಎಂದು. ಮುರಲಿ ಎಂದೆಂದೂ ಸಿನೀಮ ನೋಡಿದವರಲ್ಲ. ಈ ಹೊತ್ತು ಹ್ಯಾಮ್ಲೆಟ್ ನೋಡಲು ಸಿದ್ಧರಾಗಿದ್ದಾರೆ. ಮೂರೂಕಾಲು ಘಂಟೆಯಾಗುವದನ್ನೆ ಕಾಯುತ್ತಿದ್ದೆ. ಇನ್ನು ನಡೆಯಿರಿ."

"ಹಂ, ಕೆಲಸ ಅಂದರೆ ಏನೋ ಅಂತ ಬಹಳ ಗಡಬಡೆಮಾಡಿಬಿಟ್ಟೆ."

ಎಲ್ಲರೂ ಕೆಂಟೀನ್‌ನ ಹೊರಗೆ ಬಂದರು. ಅಷ್ಟರಲ್ಲಿ ಭರ್ರನೆ ಕಾರನ್ನು ತಿರುಗಿಸಿಕೊಂಡು ಸರಿಯಾಗಿ ಬಾಗಿಲಿಗೆ ತಂದು ನಿಲ್ಲಿಸಿ ರಾಜಕುಮಾರನಂತೆ ಸರ್ಜ್ ಪ್ಯಾಂಟು, ಸಿಲ್ಕಿನ ಶರ್ಟು, ಪ್ಯಾರಿಸ್ ಟಾಯ್ ಕಟ್ಟಿದ ಯಾರೋ ಕಾರಿನಿಂದ ಇಳಿಯುತ್ತ ಕಿರಣನನ್ನು ಕುರಿತು ಹೇಳಿದನು,

"ಹಲೋ, ತಾವಡೇಕರ್. ಹೊತ್ತಿಗೆ ಸರಿಯಾಗಿ ಬಂದೆ ಅಲ್ಲವೆ?"

"ಯಾವುದಕ್ಕೆ? ಪೀರಿಯಡ್ ಅಂತೂ ಆಗಲೇ ಮುಗಿಯಿತಲ್ಲ."

"ನೋಡಿ ಹೀಗೆಲ್ಲ ಹಾರಿಸಿ ಮಾತಾಡಬೇಡಿ. ಈವತ್ತು ಹ್ಯಾಮ್ಲೆಟ್ ಮ್ಯಾಟನಿಗೆ ಬರುವದಾಗಿ ಮಾತು ಕೊಟ್ಟಿದ್ದೀರಿ."

"ವ್ಹೆರಿ ಸಾರಿ. ಮಿಸ್ಟರ್ ಜಗನ್. ನನ್ನ ಈ ಅತಿಥಿಗಳೊಡನೆ ನಾನು ಹೋಗಬೇಕಾಗಿದೆ. ನಿಮಗೆ ಇವರ ಪರಿಚಯ ಮಾಡಿಕೊಡುತ್ತೇನೆ. ಮೀಟ್ ಮಿಸ್ಟರ್ ಮಾಹುಲಿ. ನನ್ನಣ್ಣನ ಮಾವನ ಮನೆಯವರು. ನಾಗಪುರದ ನಗರ ಸಭೆಯ ಅಧ್ಯಕ್ಷರು. ಮುಂಬಯಿಗೆ ಏನೋ ಕೆಲಸಕ್ಕೆ ಬಂದಿದ್ದರು. ಅವರಿಗೆ ಮುಂಬಯಿ ತೋರಿಸಿ ಅವರ ಮನರಂಜನೆಯ ವ್ಯವಸ್ಥೆ ಮಾಡುವದು ನನ್ನ ಪಾಲಿಗೆ ಬಿದ್ದಿದೆ. ಅಚ್ಛಾ ಟಾ ಟಾ."

ಎಂದು ಕಿರಣ ಅತ್ತ ಇನ್ನೊಂದು ದೃಷ್ಟಿಯಿಡುವ ಗೋಜಿಗೂ ಹೋಗದೆ ರಮೇಶ ಮುರಲಿಯರನ್ನು ಕರೆದುಕೊಂಡು ತನ್ನ ಕಾರಿನತ್ತ ನಡೆದುಬಿಟ್ಟಳು.

ರಸ್ತೆಯ ಮೇಲೆ ರಮೇಶ ಹೇಳಿದನು.

"ಲೇಡಿ ಜನರು ಸುಳ್ಳು ಹೇಳೋದಿಲ್ಲ ಅಂತ ಸುಳ್ಳೇ ಒಂದು ಗಾದೆ ಮಾಡಿದಾರೆ."

"ಸಭ್ಯಗೃಹಸ್ತರಲ್ಲಿ ಮಾತ್ರ ಸುಳ್ಳು ಹೇಳುವದಿಲ್ಲ. ನೋಡಿ ಈತ ಇಂಡಿಯಾ ಇಂಟರ್ ನ್ಯಾಶನಲ್ ಬ್ಯಾಂಕ್ ಡ್ಯಾರೆಕ್ಟರ್‌ರ ಒಬ್ಬನೇ ಒಬ್ಬ ಮಗ. ಹ್ಯಾಮ್ಲೆಟ್ ಬರೆದವರಾರು ? ಎಂದು ಕೇಳಿದರೆ ಕ್ರಿಸ್ಟೋಫರ್ ಮಾರ್ಲೋವ್ನೋ, ಡೋಸ್ಟೋವ್ಸ್ಕಿಯೋ ಇರಬೇಕು ಅನ್ನುವ ಪ್ರಾಣಿ. ನನಗೆ ಹ್ಯಾಮ್ಲೆಟ್ ನಾಟಕ ತುಂಬ ಸೇರುತ್ತದೆ ಎಂದು ತಿಳಿದುಕೊಂಡು ನನ್ನೊಡನೆ ಹೋಗಬೇಕೆಂದು ನನ್ನನ್ನು ಕರೆದಿದ್ದನು. ಹ್ಞೂ, ಅಂದಿದ್ದೆ, ಅದೇನೋ ಎಟಿಕೆಟ್ ಅನ್ನೋದು ಇರುತ್ತದಂತಲ್ಲ, ಅದನ್ನು ಉಳಿಸಿಕೊಳ್ಳಲಿಕ್ಕೆ. ತನ್ನಲ್ಲಿ ಮೂರು ಕಾರುಗಳಿದ್ದ ಮಾತ್ರಕ್ಕೆ ತಾನು ಕಾಲೇಜಿನ ಸ್ಟಾರು ಎಂದು ತಿಳಿದು ಕೊಂಡಿದ್ದಾನೆ."

ಎಂದಿದ್ದಳು ಕಿರಣ.

ಕಿರಣಳ ಆ ಮಾತಿನಲ್ಲಿ ಅಡಕವಾಗಿದ್ದ ತಿರಸ್ಕಾರ, ಕೋಪ ರಮೇಶ ನನ್ನು ಬೆರಗುಗೊಳಿಸಿತ್ತು. ಮುರಲಿಯಂಥ ದರಿದ್ರ ವಿದ್ಯಾರ್ಥಿಯೊಡನೆ ಲಕ್ಷಾಧೀಶರ ಸುಪುತ್ರರಲ್ಲಿ ತೋರುವಷ್ಟೇ ಸೌಜನ್ಯ, ಸಲುಗೆ, ತಾನೂ ಲಕ್ಷಾಧೀಶಳಾಗಿದ್ದರೂ ಇನ್ನುಳಿದ ಹಣವಂತರ ತೋರಿಕೆಯ ಸಿರಿಯ ಡಾಂಭಿಕ ವೃತ್ತಿಯ ಬಗ್ಗೆ ಇರುವ ತಿರಸ್ಕಾರ ಇದನ್ನೆಲ್ಲ ನೋಡಿ 'ಈ ಹುಡುಗೆಯನ್ನು ತಾನಿನ್ನೂ ಏನೂ ಅರ್ಥಮಾಡಿಕೊಂಡಿಲ್ಲ." ಎಂದುಕೊಂಡಿದ್ದನು ರಮೇಶ.

ತನ್ನ ಪರಿಚಯ ಅದೇ ಆಗ ಆಗಿದ್ದರೂ ನಿಃಸಂಕೋಚವಾಗಿ ಮೊದಲೇ ಟಿಕೆಟ್ಟು ರಿಝರ್ವ ಮಾಡಿಸಿ ತನ್ನನ್ನು ಕರೆದಿದ್ದಳು! ಅದಕ್ಕಾಗಿ ಮೊದಲು ಕೊಟ್ಟಿದ್ದ ವಚನ ಮುರಿಯಬೇಕಾಯಿತೆಂದು ಸ್ವಲ್ಪವೂ ಕೆಡಕೆನಿಸಿರಲಿಲ್ಲ ಆಕೆಗೆ! ಆ ದಿನ ಸಂಜೆ ಚಿತ್ರ ನೋಡಿದ ನಂತರ ಹ್ಯಾಮ್ಲೆಟ್ ನಾಟಕ ಮೂವರಲ್ಲಿಯೂ ತುಂಬ ಚರ್ಚೆಯ ವಿಷಯವಾಗಿತ್ತು. ಎಲ್ಲ ಮುಗಿದು ಮನೆಗೆ ಹೋಗುವಾಗ,

"ಯಾವ ಚಿತ್ರವನ್ನೂ ನಾನು ಇಂದು ನೋಡಿದಷ್ಟು ಸುಖವಾಗಿ ನೋಡಿರಲಿಲ್ಲ. ನಿಮ್ಮಿಬ್ಬರಿಗೂ ತುಂಬ ಥ್ಯಾಂಕ್ಸ್."

ಎಂದು ಹೇಳಿ ಕೃತಜ್ಞತೆಯ ತುಂಬಿದ ಹೃದಯದಿಂದ ಇಬ್ಬರನ್ನೂ ಬೀಳ್ಕೊಂಡಿದ್ದಳು.

ಅಕ್ಕನ ಮನೆಯಲ್ಲಿಯ ಆ ರಾತ್ರಿ 'ಹೆಣ್ಣಿನ ಆಳ' ಅಳೆಯಲಾಗುವದಿಲ್ಲ ಎಂದು ಇದನ್ನೆಲ್ಲ ನೆನಿಸಿಕೊಂಡು ಮತ್ತೊಮ್ಮೆ ತನ್ನಷ್ಟಕ್ಕೇ ನುಡಿದನು ರಮೇಶ.

ಲಾಲಾನ ಸೌಜನ್ಯ, ದೊಡ್ಡ ಮನಸ್ಸು, ಪ್ರೇಮಳ ಸ್ವಭಾವ ಇದು ಯಾವುದೂ ಕಿರಣಳ ಮನ ಸೆಳೆಯದಿದ್ದಂಥ ಗೂಢ ಆತನಿಗೆ ಅರ್ಥವಾಗುತ್ತಿರಲಿಲ್ಲ.

ಆಕೆ ಆ ಮನೆಗೆ ಬಂದು ತನ್ನ ಅತ್ತಿಗೆಯಾಗಿರುವದಾದರೆ ಎಷ್ಟು ಚೆನ್ನು ಎಂದುಕೊಂಡನು. ಕಡೆಗೆ ದೊಡ್ಡವರ ವಿಷಯ ತನಗೇಕೆ ಎಂದು ಕೈ ಕೊಡವಿದನು.

ಅವನ ಕಣ್ಣುಗಳು ಅವನ ತೀರ್ಪಿಗೆ ಒಪ್ಪಿ ಮುಚ್ಚಿಕೊಂಡವು.

## ೧೪

“ ನಾನು ಬರಬಹುದು ತಾನೆ ?”

ಕಾಟಿನ ಮೇಲೆ ಒರಗಿಕೊಂಡು ಸಾಮರ್‌ಸೆಟ್ ಮಾಮನ ‘ ಆಫ್ ಹ್ಯುಮನ್ ಬಾಂಡೇಜ್ ’ ಓದುತ್ತಿದ್ದ ರಮೇಶ ತಿರುಗಿ ನೋಡಿದನು. ಬಾಗಿಲಲ್ಲಿ ಕಿರಣ ನಿಂತಿದ್ದಳು.

“ ಹೋ, ಬನ್ನಿ. ಒಳ್ಳೇ ಅಪ್ಪಣೆ ಸಿಕ್ಕರೆ ಮಾತ್ರ ಬರುವವರ ಹಾಗೆ ಕೇಳುತ್ತೀರಲ್ಲ.”

ಎಂದು ಆಕೆಯನ್ನು ಸ್ವಾಗತಿಸಿ ಎದುರಿನ ಕುರ್ಚಿ ತೋರಿಸಿ ತಾನೂ ಎದ್ದು ಕುಳಿತ.

“ ಹುಂ, ಕಲಾವಿದರ ಕಲಾನಿಕೇತನಕ್ಕೆ ಬರುವ ಸಾಮಾನ್ಯ ಮಾನವರು ಅಪ್ಪಣೆ ಕೇಳದಿದ್ದರೆ ನಡೆಯುತ್ತದೆಯೆ ?”

“ ನಾನು ಕಲಾವಿದ ಎಂದು ಯಾರು ಹೇಳಿದರು ?”

“ ಯಾರೂ ಹೇಳಲಿಲ್ಲ. ಲೈಟ್ (Light) ಪತ್ರಿಕೆಯಲ್ಲಿ (Shady Retreat) ನೆರಳ ಗಮನ ಅನ್ನುವ ಒಂದು ಸುಂದರ ಚಿತ್ರದ ಕೆಳಗೆ ‘ ರಮೇಶ ’ ಅನ್ನುವ ಹೆಸರಿತ್ತು. ಲೈಟ್ ಸಂಪಾದಕರಿಗೆ ಫೋನ್ ಮಾಡಲಾಗಿ ‘ ರಮೇಶ ಮೊಹುಲಿ ’ ಎಂದು ಕೇಳಿಸಿತು ನನ್ನ ಪ್ರಶ್ನೆಗೆ ಉತ್ತರವಾಗಿ. ಫೋನಿನ ಮಿಸ್ಟೇಕ್ ಇರಬೇಕು ಅಲ್ಲವೆ ?”

“ ಅಲ್ಲ ನಿಮ್ಮ ಶ್ರವಣೇಂದ್ರಿಯದ್ದು. ಚಿತ್ರ ಹೇಗಿದೆ ಹೇಳಿ.”

"ಹೋಪ್‌ಲೆಸ್, ಅಂಥ ಚಿತ್ರಗಳನ್ನೆಲ್ಲ ಲೈಟ್‌ದಂಥ ಪತ್ರಿಕೆಗಳಲ್ಲಿ ಪ್ರಕಟಮಾಡಬಾರದೆಂದು ನಾನೊಂದು ಓಪನ್ ಲೆಟರ್ ಬರೆಯುವವಳಿದ್ದೇನೆ ಯುನೋಕ್ಕೆ. ಅದು ಯಾವದೊಂದು ಅಂತರರಾಷ್ಟ್ರೀಯ ಭವ್ಯ ಪತ್ರಿಕೆಗೆ ಮಾತ್ರ ಯೋಗ್ಯ. ರವಿವಾರವಾದ್ದರಿಂದ ಚಿತಳೆ ಕಂಪನಿಯ ಫೈತ್‌ಫುಲ್ ಸರ್ವೆಂಟು ಈವತ್ತು ಮನೆಯಲ್ಲಿಯೇ ಇದ್ದಿರಬಹುದೆಂದು ಲೆಕ್ಕ ಹಾಕಿಕೊಂಡು, ಕಾಲೇಜಿನದೊಂದು ಪ್ರೋಗ್ರಾಮ್ ಸಹ ತಪ್ಪಿಸಿ ಕಂಗ್ರಾಟ್ಸ್ ಕೊಡೋಣ ಅಂತ ಬಂದುಬಿಟ್ಟೆ."

"ತುಂಬ ಉಪಕಾರವಾಯಿತು. ಆದರೆ ನಿಮ್ಮ ಫ್ರೆಂಡು ಮನೆಯಲ್ಲಿಲ್ಲ. ಯಾರನ್ನೋ ಭೆಟ್ಟಿಯಾಗಲೆಂದು ತಾಡದೇವದತ್ತ ಹೋಗಿದ್ದಾರೆ."

"ಚನ್ನಾಯಿತು. ಇದ್ದಿದ್ದರೆ ಸಿನೇಮಾನೋ, ಮತ್ತೇನನ್ನೊ ಎತ್ತುತ್ತಿದ್ದರು. ನಿಜವಾಗಿಯೆಂದರೆ ಚಿತ್ರಗಳು ಅವರಿಗೆ ಅಷ್ಟಾಗಿ ಸೇರುವದಿಲ್ಲ. ಆದರೂ ಹೋಗೋಣ ಅನ್ನೋದನ್ನೂ ಬಿಡುವದಿಲ್ಲ."

"ಅದು ಅವರ ತಪ್ಪಲ್ಲ. ಚಿತ್ರದಲ್ಲಿ ನೋಡುತ್ತಿರುವ ಸಂಗತಿಗಳಿಗಿಂತಲೂ ಚನ್ನಾದದ್ದು ಪಕ್ಕದಲ್ಲಿಯೇ ಇದ್ದರೆ ಯಾರಿಗೂ ಚಿತ್ರ ನೋಡಬೇಕು ಅನಿಸುವದಿಲ್ಲ."

"ನಿಮಗೆ ಮಾತ್ರ ಈ ರೂಲು ಅನ್ವಯಿಸುವದಿಲ್ಲ ಅಲ್ಲವೆ. ಚಿತ್ರದ ಅತಿ ಸಣ್ಣ ಭಾಗವನ್ನಾದರೂ ಎತ್ತಿಕೊಂಡು ಅಲ್ಲಿ ಲಾಜಿಕ್ ಇಲ್ಲ, ಇಲ್ಲಿ ಸಂಭಾಷಣೆ ಚನ್ನಾಗಿಲ್ಲ, ಅಲ್ಲಿ ಡ್ಯಾರೆಕ್ಶನ್ ತಪ್ಪಿದೆ ಎಂದು ಚಿತ್ರ ನೋಡಿದ ನಂತರ ಟೀಕಿಸ ತೊಡಗುತ್ತೀರಿ. ನಿಮ್ಮಷ್ಟು ಮನಸ್ಸುಗೊಟ್ಟು ಬಹುಶಃ ನಾನೂ ಚಿತ್ರಗಳನ್ನು ನಿರೀಕ್ಷಿಸುವದಿಲ್ಲ."

"ಕೊಟ್ಟ ೨ ರೂ. ೧೦ ಆಣೆ ಗಿಟ್ಟಿಸಬೇಕಲ್ಲ. ಅನ್ಯಾಯವಾಗಿ ಅತ್ತಿತ್ತ ನೋಡಿ ಏಕೆ ರೊಕ್ಕ ಹಾಳುಮಾಡಬೇಕು."

"೨ ರೂ. ೧೦ ಆಣೆ ಕೊಟ್ಟು ಯಾವಾಗ ಚಿತ್ರ ನೋಡಿದ್ದಿರಿ? ಮೊನ್ನೆ ರಾಕ್ಸಿಯಲ್ಲಿ ಒಂದು ರೂಪಾಯಿ ಐದಾಣೆ ಕೊಟ್ಟು ನೀವು ಟಿಕೆಟ್ಟುಕೊಳ್ಳುವಾಗ ನಾನು ಬಹಳ ದೂರವೇನೂ ಇರಲಿಲ್ಲ. ನನಗೂ ಒಂದು ಮಾತು ಹೇಳಿದ್ದರೆ ಬರುತ್ತಿರಲಿಲ್ಲವೆ? ತುಂಬ ಸ್ವಾರ್ಥಿಗಳು."

"ನಾನೂ ನಿಮ್ಮನ್ನು ನೋಡಿದ್ದೆ. ಆದರೆ ನಾಲ್ಕೈದು ಜನವೆಲ್ಲ

ನಿಮ್ಮನ್ನು ಸುತ್ತಿಕೊಂಡಿದ್ದರಲ್ಲ. ಧೈರ್ಯವಾಗಲಿಲ್ಲ. ನಿಮ್ಮನ್ನು ಕರೆದರೆ ಮತ್ತೆ ಇಬ್ಬರಿಗೂ ಬಾಲ್ಕನಿಯ ಟಿಕೆಟ್ಟು ತೆಗೆಯಬೇಕಾಗಿತ್ತು. ಅಂದರೆ ೨ ರೂ–೧೦ ಆಣೆ ಅಧಿಕ ೨ ರೂ. ಹತ್ತು ಆಣೆ ಪ್ಲಸ್ ೧ ರೂ. ೫ ಆಣೆ ೩ ರೂ. ೧೫ ಆಣೆ ವ್ಯರ್ಥ ಖರ್ಚು."

"ಲಾಲಾನ ಮ್ಯಾನೇಜರ್ ಆಗಿ ಮತ್ತೇನು ಸಾಧಿಸದಿದ್ದರೂ ಎಕೌಂಟ್ ಮಾತ್ರ ಕಲಿತಿದ್ದೀರಿ. ಆದರೆ ಈ ಚಿತ್ರಕಾರರು ಯಾವಾಗಿನಿಂದ ಆದಿರಿ ಹೇಳಲಿಲ್ಲ. ನಿಮ್ಮ ಕೃತಿಗಳನ್ನೆಲ್ಲ ನಾನು ನೋಡಬೇಕು."

"ನಿಮ್ಮನ್ನು ನಿರಾಶರನ್ನಾಗಿ ಮಾಡುತ್ತಿರುವದಕ್ಕೆ ನನಗೆ ದುಃಖ ವಾಗುತ್ತದೆ. ಕಾಲೇಜಿನಲ್ಲಿದ್ದಾಗ ಯಾವಾಗಾದರೊಮ್ಮೆ ಚಿತ್ರ ಬರೆಯುತ್ತಿದ್ದೆ. ಮೊನ್ನೆ ಟ್ರಂಕು ಸರಿಪಡಿಸುತ್ತಿರುವಾಗ ಇದೊಂದು ಚಿತ್ರ ಗತಿಯಿಲ್ಲದವರಂತೆ ಬಿದ್ದಿದ್ದುದು ಕಾಣಿಸಿತು. ಎಲ್ಲಿಯಾದರೂ ಕಳಿಸೋಣ ಅನ್ನಿಸಿತು. ಪ್ರಕಟ ವಾಗುತ್ತದೆ ಎಂದೆಣಿಸಿರಲಿಲ್ಲ. ಈಗ ಚಿತ್ರ ಬಿಡಿಸುವದಿಲ್ಲ. ಇಷ್ಟೇ ಅಲ್ಲ ಪ್ರಯತ್ನ ಮಾಡಿ ಅದನ್ನು ಮರೆತುಬಿಟ್ಟದ್ದೇನೆ."

"ಏಕೆ, ಇಷ್ಟು ಅಮೂಲ್ಯ ವರವನ್ನು ಅಷ್ಟು ಸುಲಭವಾಗಿ ಬಿಡ ಬಾರದು."

"ಕಾಲೇಜು ಜೀವನದಲ್ಲಿ ನಾನೂ ಇದನ್ನೊಂದು 'ವರ' ಎಂದೇ ತಿಳಿದಿದ್ದೆ. ಆದರೆ ಮನುಷ್ಯನ ಇರುವಿಕೆಯ ಪರಿಸ್ಥಿತಿ ಬದಲಾದಂತೆ ಜೀವನದ ಮೇಲಿನ ದೃಷ್ಟಿಕೋನವೂ ಬದಲಾಗುತ್ತದೆ ಎಂಬುದನ್ನು ನೀವು ಒಪ್ಪುತ್ತೀರೋ ಇಲ್ಲವೋ. ಕಾಲೇಜಿನಲ್ಲಿದ್ದಾಗ ಚಿತ್ರಕಲೆಯನ್ನೇ ನನ್ನ ಧ್ಯೇಯವಾಗಿಸಿ ಕೊಳ್ಳುತ್ತೇನೆ ಎಂದುಕೊಂಡಿದ್ದೆ. ಬಿ. ಎ. ಆದಮೇಲೆ ತಂದೆಯವರಿಗೂ ಹಾಗೆಯೇ ಹೇಳಿದೆ. ಅಂದರೆ ಏನು. ಏನು ಮಾಡುತ್ತಿ? ಎಂದು ಕೇಳಿದರು. ಆ ಪ್ರಶ್ನೆಗೆ ಉತ್ತರ ನನಗೇ ಸಿಗಲಿಲ್ಲ. ನನ್ನ ಪತ್ರಕ್ಕೆ ಉತ್ತರವಾಗಿ ತಂದೆಯ ಪತ್ರವನ್ನು ಓದಿ ಹೇಳುತ್ತೇನೆ. ನನ್ನ ಚಿತ್ರ ನೋಡುವದಕ್ಕಿಂತಲೂ ಹೆಚ್ಚು ಇಂಟರೆಸ್ಟಿಂಗ್ ಇದೆ ಆ ಪತ್ರ,

ಎನ್ನುತ್ತ ಇನ್ನೂ ಕಾದಿಟ್ಟಿದ್ದ ಪತ್ರವನ್ನು ರಮೇಶ ಓದಿ ಇಂಗ್ಲೀಷಿನಲ್ಲಿ ಹೇಳಹತ್ತಿದನು.

—'ಚಿತ್ರಕಾರನ ಜೀವನ ಅತ್ಯುಚ್ಚ ಜೀವನ ಎನ್ನುವದನ್ನು ಅರಿಯ

ದಷ್ಟು ನಾನು ಅಜ್ಞನಲ್ಲ. ನೀನು ಹೇಳಿದಂತೆ ಅದೊಂದು ಪ್ರಕೃತಿದತ್ತ ವರ. ಆದರೆ ಜೀವನದಲ್ಲಿ ವರವನ್ನೂ ಬಿಟ್ಟು ಶಾಪವನ್ನೇ ನಮ್ಮದಾಗಿಸಿಕೊಳ್ಳುವ ಸನ್ನಿವೇಶಗಳೂ ಬರುತ್ತವೆ ಎಂದು ನಾನೆಂದರೆ ನಿನಗೆ ನಂಬಿಕೆಯಾಗಲಿಕ್ಕಿಲ್ಲ. ಜಗತ್ತಿನಲ್ಲಿಯ ಸುಂದರ ವಸ್ತುಗಳೆಲ್ಲ ಸಿರಿವಂತರ ಸುಖಕ್ಕಾಗಿ ಇರುವಂತೆ ಕಲೆ, ಸಾಹಿತ್ಯಗಳೂ ದುಡ್ಡುಳ್ಳವರ ಲಕ್ಝುರಿ ಎಂದು ನಾನೆಂದರೂ ನಿನಗೆ ನಂಬಿಕೆ ಯಾಗಲಿಕ್ಕಿಲ್ಲ. ನನ್ನ ಪೆನ್ಶನ್ನಿಗೆ ಇನ್ನಾರು ತಿಂಗಳು ಇದೆ. ಅಂದರೆ ಪೆನ್ಶನ್ನಿನ ನಂತರ ನನಗೆ ಸಿಗುವದು ಮೂವತ್ತೆರಡು ರೂಪಾಯಿ. ಅದರಲ್ಲಿ ನಿನ್ನ ತಮ್ಮನ ಹೈಸ್ಕೂಲು, ಕಾಲೇಜು ಶಿಕ್ಷಣವಾಗಬೇಕು, ನಿನ್ನ ತಂಗಿಯ ಲಗ್ನವಾಗ ಬೇಕು. ಅಲ್ಲಿಯವರೆಗೆ ಮೂವರ ಸಂಸಾರವಾಗಬೇಕು. 'ಚಿತ್ರಕಾರ' ನಾಗುತ್ತೇನೆ ಎಂದುಬಿಟ್ಟೆಯಲ್ಲ. ಆದರೆ, ಚಿತ್ರಕಾರನೆಂದು ನಾಲ್ಕು ಜನರಿಂದ ಅನಿಸಿಕೊಳ್ಳುವವರೆಗೆ ನಿನ್ನ ಸ್ವಂತದ ಜೀವನಕ್ಕಾಗಿಯಾದರೂ ಏನು ಮಾಡಿ ಕೊಳ್ಳುವೆ ಎಂದು ಬರೆಯಲಿಲ್ಲ. ಕಾಲೇಜು ಶಿಕ್ಷಣವಾಗುವವರೆಗೆ ನಾಲ್ಕು ಒಳ್ಳೆಯ ಜನರ ಸಹಾಯವಾದರೂ ಸಿಕ್ಕಿತು. ಆದರೆ ಇನ್ನು 'ಚಿತ್ರಕಾರ' ನಾಗುತ್ತೇನೆ, ಅಲ್ಲಿಯವರೆಗೆ ನನಗೆ ಸಹಾಯಮಾಡಿರಿ ಎಂದು ಬೇಡಹೋದರೆ ಏನು ಉತ್ತರ ಬರಬಹುದೆಂದು ನಾನೇನೂ ಹೇಳಬೇಕಾಗಿಲ್ಲ. ಬಡವರಿಗೆ ಬರುವದು ಶಾಪಮಾತ್ರ, ರಮೇಶ. ನಿನ್ನನ್ನು ನಿರುತ್ಸಾಹಗೊಳಿಸುತ್ತೇನೆ ಎಂದುಕೊಳ್ಳಬೇಡ. ನೀನು ಏನು ಮಾಡುತ್ತಿದ್ದರೂ ಅದು ಶ್ರೇಯಸ್ಕರ ವಾಗಿದ್ದರೆ ನಿನ್ನ ತಂದೆಯ ಆಶೀರ್ವಾದ ಯಾವಾಗಲೂ ನಿನ್ನ ಹಿಂದೆಯೇ ಇರುತ್ತದೆ. ನಿನಗೆ ತಿಳಿದಂತೆ ಮಾಡು. ಪರಿಸ್ಥಿತಿಯ ಪರಿಚಯ ಮಾಡಿ ಕೊಟ್ಟೆನಷ್ಟೆ.'

"ಈ ಪತ್ರ ಬಂದಾಗ ನಾನು ಒಂದು ಚಿತ್ರ ಬರೆಯುತ್ತಲೇ ಇದ್ದೆ. ನನಗೆ ಸ್ವಲ್ಪವೂ ನಿರಾಶೆಯಾಗಲಿಲ್ಲವೆಂದರೆ ನಿಮಗೆ ಅಚ್ಚರಿಯಾದೀತು. ಆದರೆ ಮರೆತಿದ್ದ ನನ್ನ ಕರ್ತವ್ಯವನ್ನು ಆ ಪತ್ರ ನೆನಪು ಮಾಡಿಕೊಟ್ಟುದಕ್ಕಾಗಿ ಆ ದಿನ ತುಂಬ ಸಮಾಧಾನವಾಗಿತ್ತು. ಆ ಅರ್ಧ ಚಿತ್ರವನ್ನೂ ಹಾಗೆಯೇ ಇಟ್ಟಿದ್ದೇನೆ. ಆ ದಿನದಿಂದ ಮತ್ತೆ ಕುಂಚ ಹಿಡಿಯಲಿಲ್ಲ. ಅದರ ನಂತರ ಇಲ್ಲಿಗೆ ಬಂದು ಲಾ ಕಲಿಯತೊಡಗಿದೆ. ಲಾಕ್ಕೂ ಕಲೆಗೂ ಅಂತರ ಹೆಚ್ಚಾಗುತ್ತ ಹೋಯಿತು. ಈಗಂತೂ ಕಾಣುತ್ತಿರುವಿರಲ್ಲ; ಎಲ್ಲಿಯ ಅಯರ್ನ್ ಅಂಡ್ ಸ್ಟೀಲ್ ಕಂಪನಿ,

ಎಲ್ಲಿಯ ಕಲೆ! ಎರಡನ್ನೂ ಕೂಡಿಸಿಕೊಂಡು ಹೋಗುವದು ಮಹಾಪುರುಷರ ಲಕ್ಷಣವಾಗಿರಬಹುದು. ನಾನು ಮಹಾಪುರುಷನಾಗಲಿಲ್ಲ."

ಕಿರಣ ಕ್ಷಣಕಾಲ ಮೌನವಾಗಿ ಕುಳಿತಿದ್ದಳು. ರಮೇಶನಿಗೆ ತಾನಿದನ್ನೆಲ್ಲ ಈಕೆಗೇಕೆ ಹೇಳಿದೆ ಅನ್ನಿಸಿತು. ತನ್ನ ಹೃದಯದ ನೋವು ಈ ಲಕ್ಷಾಧೀಶರ ಮಗಳಿಗೆ ಹೇಗೆ ಅರ್ಥವಾಗಬೇಕು ?

ಆದರೆ ರಮೇಶನ ಕಲ್ಪನೆ ತಪ್ಪಾಗಿತ್ತು. ಕಿರಣ ಕುಳಿತಲ್ಲಿಂದ ಎದ್ದು ಕಾಟಿನ ಮೇಲೆಯೇ ರಮೇಶನ ತೀರ ಹತ್ತಿರ ಕುಳಿತು, ಅವನ ಕೈಯನ್ನು ಮೃದುವಾಗಿ ಹಿಡಿದು ನಗುತ್ತ ಹೇಳಿದಳು.

" ನೀವು ಮಹಾಪುರುಷರಾಗದಿದ್ದುದೇ ಚನ್ನಾಯಿತು. ಆಗಿದ್ದರೆ ನಮ್ಮ ಪರಿಚಯವಾಗುತ್ತಿರಲಿಲ್ಲ."

" ನೋಡಿ ನನ್ನ ಅವಮಾನ ಮಾಡುತ್ತಿದ್ದೀರಿ."

" ಮಾಡಿದರೂ ನೀವು ಸ್ವಲ್ಪವೂ ಅನಿಸಿಕೊಳ್ಳುವದಿಲ್ಲ. ನಿಮ್ಮನ್ನು ನೋಡಿ ನನಗೆ ಭಗವದ್ಗೀತೆಯ ಸ್ಥಿತಪ್ರಜ್ಞನ ನೆನಪಾಗುತ್ತದೆ. ನಿಮ್ಮನ್ನು ಹೊಗಳಿದರೂ ಅಷ್ಟೆ, ತೆಗಳಿದರೂ ಅಷ್ಟೆ - ನಿಮ್ಮ ಮೇಲೆ ಯಾವ ಪರಿಣಾಮವೂ ಆಗುವ ಹಾಗೆ ಕಾಣುವದಿಲ್ಲ."

" ಸಂಕ್ಷಿಪ್ತವಾಗಿ ಶುದ್ಧ ಪಶು ಅನ್ನಿರಲ್ಲ. ಇಷ್ಟುದ್ದ ಏಕೆ ಎಳೆಯುತ್ತೀರಿ ?"

" ಊಹುಂ, ಇಂಗ್ಲೀಷಿನಲ್ಲಿ ಸುಪರಮನ್ (ಅತಿ ಮಾನವ) ಅನ್ನುತ್ತಾರೆ."

" ಶಾನ ಸುಪರಮನ್ ?"

ಎಂದು ಮುಗುಳು ನಗೆ ಬೀರಿದ ರಮೇಶ.

" ಅಲ್ಲ, ಶಾನ – ಸುಪರ್‌ಮನ್ ಪಕ್ಕಾ ಲಫಂಗನಾಗಿದ್ದನು. ತಾನು ನಿರ್ಲಿಪ್ತನಾದಷ್ಟು ಹೆಚ್ಚು ಆನ ತನ್ನನ್ನೇ ಪ್ರೀತಿಸುತ್ತಾಳೆ ಎಂದು ಆತ ಮನಗಂಡುದಕ್ಕೆ ಅಷ್ಟೆಲ್ಲ ದೊಡ್ಡಸ್ತನ ತೋರಿಸುತ್ತಿದ್ದನು. ಎಲ್ಲರಂತೆ ಆತನೂ ಇದ್ದುಬಿಟ್ಟಿದ್ದರೆ ಆನ ಆತನನ್ನೇ ಪ್ರೀತಿಸುತ್ತಿರಬೇಕೆಂದೇನೂ ಇರಲಿಲ್ಲ. ಶುದ್ಧ ಪೆಂಗು ಆಕೆ. ಸುಲಭವಾಗಿ ಮೋಸಹೋಗಿಬಿಟ್ಟಳು. – ಲೇಖಕರ ಉದ್ದೇಶವೂ ಹಾಗೆಯೇ ಇರಬೇಕು. ಶಾ ಅವನನ್ನು ಸುಪರ್‌ಮನ್ ಮಾಡಿದ್ದನೆಂತಲೇ

'ಮ್ಯಾನ್ ಅಂಡ್ ಸುಪರ್‌ಮನ್' (ಮಾನವ ಮತ್ತು ಅತಿಮಾನವ) ನಾಟಕ ಬರೆಯುವಂತಾಯಿತು. ಇಲ್ಲದಿದ್ದರೆ ಅದಕ್ಕೆ ಕಾರಣವೇ ಇರಲಿಲ್ಲ."

"ನಿಜ, ತನ್ನ ನಾಟಕದ ಆ ಎರಡು ಪಾತ್ರಗಳಿಗೆ ಈ ರೀತಿ ಅಪಾರ್ಥ ವನ್ನು ಯಾರಾದರೂ ಹಚ್ಚಬಹುದು ಎಂದು ತಿಳಿದಿದ್ದರೆ ಶಾ ಅದನ್ನು ಬರೆಯುವ ಧೈರ್ಯ ಮಾಡುತ್ತಿರಲಿಲ್ಲ."

"ಏಕೆ? ನಾನು ಹೇಳಿದ್ದು ತಪ್ಪೆ? "ಮಾನವ ಮತ್ತು ಅತಿಮಾನವ" ಬರೆದವನು ಗಂಡಸು ಎಂಬುದನ್ನು ಮರೆಯಬೇಡಿರಿ."

"ಅಂತೆಯೇ ಗಂಡಸಿನ ದೇವತ್ವಕ್ಕೆ ಹೆಣ್ಣು ಮೋಸ ಹೋಗುವದಂತೂ ಇರಲಿ, ತನ್ನ ದೇವತ್ವವನ್ನು ಅರಿತಿದ್ದರೂ ಆ ಗಂಡಸು ಹೆಣ್ಣಿಗಾಗಿ ಕಟ್ಟಕಡೆಗೆ ತಾನೂ ಸಾಮಾನ್ಯ ಮಾನವನಾಗುತ್ತಾನೆ ಎಂಬುದನ್ನು ತೋರಿಸಿದ್ದಾನೆ ಶಾ.... ಅಂತ್ಯದಲ್ಲಿ ತಾನು ಬಲಿಬಿದ್ದೆನೆಂದು ತಿಳಿದಿದ್ದರೂ ಈ ಸುಪರ್‌ಮನ್ ಆನಳನ್ನು ಲಗ್ನವಾಗಲು ಒಪ್ಪುತ್ತಾನೆ!"

"ಅಂದರೆ ಕೀಳ್ಮಟ್ಟಕ್ಕೆ ಇಳಿದಂತಾಯಿತೇನು? ಗಂಡಸಿಗೆ ಅಷ್ಟು ಜಂಬ ಇರಬಾರದು. ಲಗ್ನವೆಂದರೆ ಸೆರೆ ಎನ್ನುವ ಭಾವನೆ ಜಗತ್ತಿನ ಅಸ್ತಿತ್ವಕ್ಕೇ ಘಾತಕವಾದದ್ದು. ಬಹುಶಃ ಶಾನಿಗೂ ಅಂತ್ಯದಲ್ಲಿ ಅದನ್ನೇ ಸಿದ್ಧಮಾಡ ಬೇಕಾಗಿತ್ತು. ಹೆಣ್ಣೆಂದರೆ ಯಾವಾಗಲೂ ಗಂಡನೆಂಬ ಒಂದು ವಸ್ತುವಿಗಾಗಿ ಹಂಬಲಿಸುವವಳು ಎನ್ನುವ ಭಾವನೆ ಅವನ ನಾಟಕದಿಂದ ಉಂಟಾದರೂ, ಹೆಣ್ಣಿನ ಸಹಜೋಡಿಯಿಲ್ಲದೆ ಬದುಕಬೇಕು ಅನ್ನುವ ಗಂಡಸಿನ ಜಂಬ ಎಷ್ಟು ಅಹಿತಕರ, ಅಸಹಜಿಕ ಎನ್ನುವದೂ ಕಂಡುಬರುತ್ತದಲ್ಲ. ಅಷ್ಟು ಸಾಕು."

"ನೀವು ಶಾನನ್ನು ತಪ್ಪು ತಿಳಿಯುತ್ತಿದ್ದೀರಿ. ಶಾನಿಗೆ ಲಗ್ನವೆಂದರೆ 'ಸೆರೆ' ಎಂದು ಮಾತ್ರ ತೋರುವದಿತ್ತು, ಹೆಣ್ಣೆಂದರೆ ಎಂದಲ್ಲ. ಅದನ್ನೇ ಅವನು ಇನ್ನೂ ವಿವರವಾಗಿ 'On getting married' (ಲಗ್ನವಾಗುವದರ ಮೇಲೆ) ಅನ್ನುವ ನಾಟಕದಲ್ಲಿ ಚಿತ್ರಿಸಿದ್ದಾನೆ. ಓದಿದ್ದೀರಲ್ಲ?"

"ಹುಂ, ಆದರೆ ನನಗದು ಸೇರಲಿಲ್ಲ. ಲಗ್ನವೆಂಬ ಸಂಸ್ಥೆ ಇಲ್ಲದೆಯೇ ಸಮಾಜ ಕಟ್ಟಲಿಕ್ಕೆ ಬರುತ್ತದೆ ಎಂದು ಶಾ ಸೂಚಿಸುವಂತಿದೆ. ತೀರ ನಾಚಿಕೆಗೇಡು."

"ಆ ನಾಚಿಕೆಗೇಡು ಕೆಲಸಕ್ಕೆ ಪ್ರಯತ್ನಿಸಿದವರನ್ನೇ ನೀವು ಅವನ

ಮೊದಲನೆಯ ನಾಟಕದಲ್ಲಿ ಸುಪರ್‌ಮನ್ ಅಂತ ಕರೆಯುತ್ತೀರಿ. ಅವನಿಗೂ ಲಗ್ನ ಬೇಕಾಗಿರಲಿಲ್ಲ. ಆದರೆ ಹೆಣ್ಣಿನ ಸಂಬಂಧವೂ ಬೇಡ ಎಂದು ಮಾತ್ರ ಆತ ಎಲ್ಲಿಯೂ ಹೇಳಲಿಲ್ಲವಲ್ಲ. ಅವನ ಪ್ರಯತ್ನಕ್ಕೆ ಫಲ ಸಿಗಲಿಲ್ಲ. ಅದರ ಅರ್ಥ ಶಾನಾದರೂ ಲಗ್ನರಹಿತ ಹೆಣ್ಣುಗಂಡಿನ ಸಂಬಂಧದ ಸಮಾಜವನ್ನು ಕಲ್ಪಿಸುವ ಮುಂದಿನ ಹೆಜ್ಜೆ ಇಡಲಿಲ್ಲ. ಹಾಗೇನಾದರೂ ಮಾಡಿದ್ದರೆ ' ಹುಚ್ಚ' ಎನ್ನಿಸಿಕೊಳ್ಳುತ್ತಿದ್ದನು. ಆದರೆ ನಮ್ಮ ಈ ಜನಾಂಗ ಮಾನವ ಸಂಸ್ಕೃತಿಯ ಅಂಥದೊಂದು ಉತ್ಕ್ರಾಂತಿಗೆ ಹೇಗೆ ಹಾದಿಮಾಡಿಕೊಡುತ್ತಿದೆ ಎಂದು ಮಾತ್ರ ಶಾ ತೋರಿಸಿದ್ದಾನೆ. ಶಾ ಅರ್ಥ ಕಲ್ಪಿಸಿದ ಸಮಾಜವನ್ನು ಯಾರಾದರೂ ಇನ್ನೂ ಧೈರ್ಯವಂತರು ಪೂರ್ತಿಮಾಡಬೇಕು."

"ಅಂದರೆ ಹೆಣ್ಣು – ಗಂಡು ಸ್ವೇಚ್ಛೆಯಾಗಿ ಇರತೊಡಗಿದ ಸಮಾಜದ ಮೇಲೆ ಒಂದು ಕಥೆಯೋ ಕಾದಂಬರಿಯೋ ಸಿದ್ಧವಾಗಬೇಕು !"

"ಇಲ್ಲಿಯವರೆಗೆ ಲಗ್ನಸಂಸ್ಥೆ ಮಾಡಿದ್ದಾದರೂ ಏನು ? ಸಮಾಜದ ಕಟ್ಟು ಒಡೆಯದಂತೆ ಹಿಡಿದು ನಿಲ್ಲಿಸುವ ನೆಗೆಟಿವ್ (ನಿಷೇದಾರ್ಥಕ) ಕೆಲಸವಷ್ಟನ್ನೇ ಮಾಡಿದೆ. ಅದನ್ನೊಂದು ಬಿಟ್ಟರೆ ಸಮಾಜದ ಅಸ್ತಿತ್ವ, ಮುನ್ನಡೆಗೆ ಅದರಿಂದ ಯಾವ ಉಪಯೋಗವೂ ಆಗಿಲ್ಲ. ಆದರೆ ಅಷ್ಟಕ್ಕಾಗಿ ಅದು ವ್ಯಕ್ತಿಗಳಿಗೆ ಒದಗಿಸುವ ಅಶಾಂತಿ, ದುಃಖ ಎಷ್ಟು ಎಂಬುದನ್ನೇ ನೀವು ' ಲಗ್ನವಾಗುವದರ ಮೇಲೆ ' ನಾಟಕದಲ್ಲಿ ನೋಡುತ್ತೀರಿ. ಗಂಡಹೆಂಡಿರು ಪರಸ್ಪರ ಕೂಡಿರುವದು ತಮ್ಮಿಂದ ಶಕ್ಯವಿಲ್ಲವೆಂಬುದನ್ನು ಕಂಡುಕೊಂಡು ಒಬ್ಬರಿಂದೊಬ್ಬರು ಬೇರಾಗಿ ಮಾನವಾಗಿ ಉಳಿಯಲು ಇಚ್ಛಿಸಿದರೆ ಅವರಿಗೆ ಡೈವೋರ್ಸ್ ಮಾಡಿಕೊಳ್ಳಲು ಯಾವ ಆಧಾರವೂ ಇಲ್ಲ. ಅದರಲ್ಲಿ ಆ ನಾಟಕದಲ್ಲಿ ಮಾಡಿದಂತೆ ಗಂಡ ಹೆಂಡತಿಯನ್ನು ಹೊಡೆದನೆಂದೋ, ಇನ್ನಾವ ರೀತಿಯಿಂದಲಾದರೂ ನಿಮ್ಮ ಕಾಯ್ದೆಗೆ ಸಿಲುಕಬಹುದಾದ ಗುನ್ಹೆ ಘಟಿಸಲೇಬೇಕು. ಅಂದರೇ ಅವರಿಗೆ ಮುಕ್ತಿ ದೊರಕುವದು ಸಾಧ್ಯ. ಇದು ಇಂಗ್ಲಂಡದ ಸ್ಥಿತಿ. ನಮ್ಮಲ್ಲೇನಿದೆ ? ಹೆಂಡತಿಯೋ ಗಂಡನೋ ಇನ್ನೊಬ್ಬರೊಡನೆ ಓಡಿಹೋದರೇ, ಇಲ್ಲವೇ ಅವರು ತಮ್ಮ ಪದವಿಗೆ ಲೈಂಗಿಕವಾಗಿ ಅನರ್ಹರೆಂದು ಡಾಕ್ಟರ್‌ರಿಂದ ಪುರಾವೆ ದೊರಕಿದರೇ ಬಿಡುಗಡೆಹೊಂದಬೇಕು. ಇಷ್ಟೆಲ್ಲ ಆಗಿಯೂ ಗಂಡಹೆಂಡಿರ ಒಂದು ಜೋಡಿ ಬೇರಾಯಿತೆಂದರೆ ಅದರ ಮೇಲಾಗುವ ಟೀಕೆ ಟಿಪ್ಪಣಿಗಳೆಷ್ಟು !

ವಾದವಿವಾದಗಳೆಷ್ಟು. ಸಾಧಾರಣ ಕೊಲೆಗಡುಕನಮೇಲೂ ವೃತ್ತಪತ್ರಕಾರರು ಅಷ್ಟು ಶಬ್ದ ಉಪಯೋಗಿಸುತ್ತಿರಲಿಕ್ಕಿಲ್ಲ! ಇದೆಲ್ಲ ಈ ಲಗ್ನ ಎಂಬುದೊಂದು ಪುರಾತನ ಪವಿತ್ರ ಸಂಸ್ಥೆಯನ್ನು ಕಾಪಾಡಲು."

"ನಿಮ್ಮ ವಾದವನ್ನು ಒಪ್ಪಿಕೊಂಡರೆ ಈ ಲಗ್ನ ಸಂಸ್ಥೆಯನ್ನು ಬಿಟ್ಟರೆ ಇನ್ನೊಂದು ಆಲ್ಟರ್ನೇಟಿವ್ (ಬೇರೆ ಹಾದಿ) ಇರಬೇಕಾಗುವದು. ಇಲ್ಲದಿದ್ದರೆ ಸಮಾಜದ ಅಸ್ತಿತ್ವ ಅಸಾಧ್ಯ"

"ಆ ಹಾದಿ ಶಾನೂ ಹೇಳಲಿಲ್ಲ. ಅವನೂ ಅದನ್ನು ಅಷ್ಟಕ್ಕೇ ಬಿಟ್ಟಿದ್ದಾನೆ ಎಂದು ಕಂಡಾಗ ನಿಜವಾಗಿಯೂ ನನಗೆ ನಿರಾಶೆಯಾಯಿತು. 'ಸುಪರ್‌ಮನ್' ದಲ್ಲಿ ಸಮಾಜ ಘಟಕಗಳಾದ ವ್ಯಕ್ತಿಗಳು ಹೇಗೆ ನಿರುಪಾಯರಾಗಿ ಲಗ್ನ ಸಂಸ್ಥೆಯ ಗುಲಾಮರಾಗಬೇಕಾಗುತ್ತದೆ ಎಂದು ತೋರಿಸಿದ್ದರೆ, 'ಲಗ್ನ ವಾಗುವದರ ಮೇಲೆ' ನಾಟಕದಲ್ಲಿ ಒಮ್ಮೆ ಗುಲಾಮರಾದವರು ಹೇಗೆ ಅದರಿಂದ ತಪ್ಪಿಸಿಕೊಂಡು ಇರಲಾರರು ಎಂಬುದನ್ನು ತೋರಿಸಿದ್ದಾನೆ. ಅದರ ಮುಂದೆ ಶಾನೂ ಈ ಗುಲಾಮಗಿರಿಯನ್ನು ಒಪ್ಪಿಕೊಳ್ಳುವಂತೆ ತೋರುವದು, ನಿಜ ವಾಗಿಯೂ ಅಚ್ಚರಿಯ ವಿಷಯ. ಅವರ ವಿರುದ್ಧ ಏನಾದರೂ ಮಾಡಲು ಬರ ಬಹುದು ಎಂದುದನ್ನು ಎಲ್ಲಿಯೂ ಸೂಚಿಸಲಿಲ್ಲ."

"ಸೂಚಿಸಿದ್ದರೆ ನೀವು ಬಹುಶಃ ಆಹಾದಿ ಹಿಡಿಯುತ್ತಿದ್ದಿರೇನೋ?"

"ಹಾಗೇನಿಲ್ಲ. ಲಗ್ನಬೇಡ ಎಂದು ನಾನೇನೂ ಹೇಳುವದಿಲ್ಲ. ಆದರೆ ಅದೊಂದು ಸಮಾಜ ಸಂಸ್ಥೆಯಾಗಿರುವದು ಬೇಡ. ಅದು ಪೂರ್ಣ ವ್ಯಕ್ತಿ ವಿಷಯವಾಗಿರಬೇಕು. ಲಗ್ನವಾಗುವದು, ಇಂಥ ವ್ಯಕ್ತಿಯನ್ನೇ ಲಗ್ನವಾಗುವದು ಬಿಡುವದು, ಇಷ್ಟು ವರ್ಷಕ್ಕೇ ಲಗ್ನವಾಗುವದು ಬಿಡುವದು, ಇಂಥ ರೀತಿ ಯಲ್ಲಿಯೇ ಲಗ್ನವಾಗುವದು ಬಿಡುವದು ಇದೆಲ್ಲ ಸಮಾಜದ ಅಂದರೆ – 'ನಾಲ್ಕು ಜನರ ಮೆಚ್ಚಿಕೆಯ' ಒಳಗಾದ ಸಂಗತಿಯಾಗಿರದೆ ವ್ಯಕ್ತಿಯ ಐಚ್ಛಿಕ ವಿಷಯ ವಾಗಿರಬೇಕು. ನಮಗೆ ಬೇಕಾದ ಶರ್ಟು, ಚಪ್ಪಲು ನಾವೇ ಆರಿಸಿ ಕೊಳ್ಳು ವದಿಲ್ಲವೆ? ಹಾಗೆ."

"ಈಗಿನ ದಿನದಲ್ಲಿ ನೀವುಹೇಳಿದ ಎಡೆತಡೆಗಳು ಅಷ್ಟೇನೂ ಭಯಂಕರ ವಾಗಿಲ್ಲ."

"ತೋರಿಕೆಗೆ ಮಾತ್ರ. ಆದರೆ ಹಿಂದಿನಿಂದ ಸಮಾಜದ ಒತ್ತಡ ಎಷ್ಟು

ಬಲವಾಗಿದೆ ಎಂದು ನಿಮಗೆ ತೋರುವದಿಲ್ಲ. ನಿಮ್ಮನ್ನೇ ನೋಡಿರಿ. ತೋರಿಕೆಗಷ್ಟೆ ನಿಮ್ಮಣ್ಣ ನಿಮಗೆ ಬೇಕಾದಾಗ ಬೇಕಾದವರನ್ನು ಲಗ್ನವಾಗು ಎಂದಿರಬಹುದು. ಆದರೆ ನಿಮ್ಮ ಈ ಹಿಂದಿನ ಜೀವನರೀತಿ, ನೀವು ಒಡನಾಡುವ ಸುತ್ತಲಿನ ಜನರು, ನಿಮ್ಮ ಬಂಧು ಬಳಗದವರ ವಿಚಾರಗಳು ಇವೆಲ್ಲ ತೀಕ್ಷ್ಣ ವಾಗಿ ನಿಮ್ಮ ಇಚ್ಛೆಯ ಮೇಲೆ ಪರಿಣಾಮ ಮಾಡಿರುತ್ತವೆ. ನೀವು ೨೦ ನೆಯ ವರ್ಷಬಿಟ್ಟು ಇಪ್ಪತ್ತೆಂಟನೆಯ ವರ್ಷಕ್ಕೆ ಲಗ್ನವಾಗುತ್ತೇನೆ ಎಂದರೆ ಯಾರೂ ಬೇಡ ಎನ್ನಲಿಕ್ಕಿಲ್ಲ. ಆದರೆ ಇದ್ದಕ್ಕಿದ್ದಂತೆ ಗುಜುಗುಜು ಆರಂಭವಾಗುತ್ತದೆ. 'ಇನ್ನೂ ಲಗ್ನವೇಕೆ ಆಗಲಿಲ್ಲವ್ವ?' ಎಂದು ಕೇಳುತ್ತ ಹಿಂದುಸ್ಥಾನದ ಆ ತುದಿ ಯಲ್ಲಿದ್ದ ನಿಮ್ಮ ಅತ್ತೆ, ಚಿಗವ್ವ ಎಲ್ಲ ನಿಮ್ಮ ಲಗ್ನಮಾಡುವದೊಂದೇ ತಮ್ಮ ಜೀವನ ಧ್ಯೇಯ ಎನ್ನುವಷ್ಟು ಉತ್ಸುಕತೆಯಿಂದ ನಿಮ್ಮ ಸುತ್ತ ಬೆನ್ನು ಹತ್ತುತ್ತಾರೆ."

"ಹೋಗಲಿ ನೀವು ಎಷ್ಟನೇ ವರ್ಷಕ್ಕೆ ಲಗ್ನವಾಗುವವರು?"

"ನೋಡಬೇಕು. ನಾಳೆ ನಾಡಿದ್ದಾದರೆ ಆಗಲಿ ಎನ್ನುತ್ತೇನೆ."

"ಉಪಾಯವಿಲ್ಲ. ಈವತ್ತೇ ಆಗಿದ್ದರೆ ನಾನೇ ಮಾಲೆ ಹಾಕಿದರೂ ಹಾಕಬಹುದಿತ್ತು"

ಎನ್ನುತ್ತ ಕಿರಣ ಸುಳ್ಳು ನಿಶ್ವಾಸಬಿಟ್ಟಳು. ಇಬ್ಬರೂ ಹೊಟ್ಟೆ ತುಂಬ ನಕ್ಕರು.

"ನನಗೂ ಅಷ್ಟು ಹೇಳಿರಲ್ಲ ನಾನೂ ನಗುತ್ತೇನೆ"

ಎನ್ನುತ್ತ ಮಲಗಿದ್ದ ಗಿರಿಜಾತಾಯಿ ಎದ್ದು ಒಳಗೆ ಬಂದಳು.

"ಹೀಗೇ ಲಗ್ನದ ವಿಷಯ ನಡೆದಿತ್ತು. ಲಗ್ನವಾಗಬೇಕಾದರೆ ಗಂಡು ಹೆಣ್ಣನ್ನು ಕೇಳಿದರೆ ಶ್ರೇಯಸ್ಸೋ, ಹೆಣ್ಣು ಗಂಡನ್ನು ಕೇಳಿದರೆ ಶ್ರೇಯಸ್ಸೋ ಅನ್ನುವ ಚರ್ಚೆ ನಡೆದಿತ್ತು. ನೀವೇ ಹೇಳಿ, ಕಾಕಿ. ನಿಮ್ಮ ಲಗ್ನ ಕಾಲಕ್ಕೆ ನೀವೇ ಕದ್ದು ಮದುಮಗನನ್ನು ನೋಡಿಕೊಂಡಿದ್ದಿರೋ ಇಲ್ಲ ಗಂಡಿನ ಕಡೆ ಯವರೇ ಹೆಣ್ಣು ಕೇಳಲು ಬಂದಿದ್ದರೋ?"

ಎಂದು ಗಿರಿಜಾತಾಯಿಯನ್ನು ನಗುತ್ತ ಪ್ರಶ್ನಿಸಿದ.

"ನಿನಗೊಂದು ತಮಾಷೆ. ಈಗ ಯಾರೂ ಯಾರನ್ನೂ ಕೇಳೋದಿಲ್ಲ. ಗಂಡು ಹೆಣ್ಣು ತಾವುತಾವೇ ಮಾತಾಡಿಕೊಂಡು ಲಗ್ನವಾಗಿಬಿಡುತ್ತಾರೆ."

“ನಾನೂ ಅದನ್ನೇ ಹೇಳುತ್ತಿದ್ದೆ ಕಾಕಿ. ತಾವುತಾವೇ ಮಾತಾಡಿಕೊಂಡು ಲಗ್ನವಾಗಬೇಕಾದಾಗ ಮಾತ್ರ ಗಂಡು ಹೆಣ್ಣನ್ನು ಕೇಳುತ್ತಾನೆ. ತಂದೆ ತಾಯಿ ಮಾಡುವಾಗ ಮಾತ್ರ ಹೆಣ್ಣಿನ ತಂದೆ ಗಂಡಿನ ತಂದೆಯನ್ನು ಕೇಳುತ್ತಾನೆ. ಎಲ್ಲ ವಿಚಿತ್ರ.”

“ವಿಚಿತ್ರ ಏನು ಬಂತು ? ಹೆಣ್ಣಿಗೆ ನಾಚಿಕೆ ಅನ್ನೋದು ಇರೋದಿಲ್ಲವೆ ? ಸೀದಾ ಹೋಗಿ ಗಂಡಿನೊಡನೆ ‘ ನನ್ನ ಲಗ್ನ ಆಗ್ತೀಯ ?’ ಅಂದರೆ ನಾಚಿಕೆಗೇಡಿ ಅನ್ನುತ್ತಾರೆ.”

“ಯಾಕೆ ಅನ್ನುತ್ತಾರೆ ? ಅದೇನಿಲ್ಲ. ನನಗೆ ಲಗ್ನವಾಗಬೇಕೆಂದು ಕಂಡಾಗ ನಾನೇನೂ ನಾಚಿಕೆ ಪಡೋದಿಲ್ಲ. ನಾಚಿಕೆ ಅನ್ನೋದೊಂದು ಸುಳ್ಳು ಭಾವನೆ ಹಬ್ಬಿಸಿ ಬಿಟ್ಟಿದ್ದಾರೆ ಹೇಳಿ, ನಿಮ್ಮ ಲಗ್ನದ ಕಾಲಕ್ಕೆ ಗಂಡನನ್ನ ಎಷ್ಟು ಸಾರೆ ಕದ್ದು ನೋಡಲಿಲ್ಲ ? ಆಗ ನಾಚಿಕೆ ಅನಿಸಿತ್ತೆ ? ಯಾರು ಎಲ್ಲಿ ನೋಡಿಬಿಡುತ್ತಾರೋ ಆ ಒಂದು ಅಂಜಿಕೆ ಅಷ್ಟೆ ”

—ಹುಸಿ ಕೆಣಕುವ ದನಿಯಲ್ಲಿ ಕಿರಣ ನುಡಿದಳು.

“ಆಗಿನ ಕಾಲ ಬೇರೆ ಇತ್ತು, ತಾಯಿ. ಆದರೆ ಈಗ ನೀವೆಲ್ಲ ಎಲ್ಲಿ ಕೇಳುತ್ತೀರಿ ? ಆದರೆ ನಿನಗೂ ‘ ಲಗ್ನವಾಗುತ್ತೇನೆ ’ ಎಂದು ಯಾರಿಗಾದರೂ ಅನ್ನುವ ಧೈರ್ಯ ಬರೋದಿಲ್ಲ ಹೇಳಿಡುತ್ತೇನೆ.”

ಕಿರಣ – ರಮೇಶ ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡು ಬಹಳ ಪ್ರಯತ್ನದಿಂದ ನಗೆಯನ್ನು ತಡೆದುಕೊಂಡರು. ಅದೇ ಆಗ ಕಿರಣ ತಮಾಶೆಗಾಗಿ ಯಾದರೂ ‘ ಮಾಲೆ ಹಾಕುತ್ತೇನೆ ’ ಎಂದಾಗ ಯಾರಿಗೂ ಏನೂ ಅನಿಸಿರಲಿಲ್ಲ !

“ಇಲ್ಲಮ್ಮ ಇಲ್ಲ. ಲಗ್ನವಾಗಬೇಕಾದರೆ ಮೊದಲು ನಿಮ್ಮ ಕಿವೀಲೇ ಹೇಳುತ್ತೇನೆ. ನೀವೇ ಜೋಡಿಸಿ ಕೊಡಬೇಕು.”

“ಹಾಗೆ ಮಾಡು, ತಾಯೀ. ಈಗಾಗಲೇ ಹೇಳಿಬಿಡು ”

ಎನ್ನುತ್ತ ಗಿರಿಜಾತಾಯಿ ಏನನ್ನೋ ಅಪೇಕ್ಷಿಸುವಂತೆ ಕಿರಣಳನ್ನು ನೋಡಿದಳು.

“ಊಹುಂ, ಇನ್ನಾರು ವರ್ಷ ಕಾಯಬೇಕು. ಮೊನ್ನೆ ಯಾವದೋ ಭವಿಷ್ಯವಾದಿ ಹೇಳಿದ್ದಾನೆ. ಇನ್ನು ಆರು ವರ್ಷಗಳವರೆಗೆ ನನಗೆ ಮಂಗಳದ

ಮೇಲೆ ರಾಹು ಕುಳಿತಿದ್ದಾನಂತೆ. ಆದ್ದರಿಂದ ಎಲ್ಲ ಮಂಗಳ ಕೆಲಸಗಳೂ ಕ್ಲೋಸ್ಡ್."

"ಹೋಗೇ ಅವ್ವ, ಆರು ವರ್ಷವೆಂದರೆ ಮುದುಕಿಯಾಗುತ್ತೀ."

"ಮುದುಕನನ್ನೇ ಲಗ್ನವಾಗುತ್ತೇನೆ."

"ನಿನ್ನ ಹತ್ತರ ಗೆಲ್ಲಲಾಗುವದಿಲ್ಲವ್ವ."

ಎನ್ನುತ್ತ ಗಿರಿಜಾ ತಾಯಿ ಚಹ ತರುತ್ತೇನೆಂದು ಹೇಳಿ ಒಳಗೆ ಹೋದಳು.

ಅಷ್ಟರಲ್ಲಿ ಫೋನ್ ಘಂಟೆ ಬಾರಿಸಿತು. ರಮೇಶ ರಿಸೀವ್ಹರ್ ಎತ್ತಿಕೊಂಡು ಯಾರೆಂದು ಕೇಳಿ 'ನಿಮಗಾಗಿ' ಎಂದು ರಿಸೀವ್ಹರ ಕಿರಣಳ ಕೈಗಿತ್ತನು. ಕಿರಣಳ ಅಣ್ಣ ಮಾತಾಡುತ್ತಿದ್ದನು. ಲಾಲಾ ಅವರ ಮನೆಯಲ್ಲಿ ಅವಳ ಹಾದಿ ಕಾದು ಬೇಸತ್ತು ಕಡೆಗೆ ಇಲ್ಲಿ ಬಂದಿರಬಹುದೆಂದು ಊಹಿಸಿ ಫೋನುಮಾಡ ಹೇಳಿದ್ದನು.

"೫॥ ಗೆ ಅಯರ್ವಿನ್ ಕ್ಲಬ್ಬಿಗೆ ಲಾಲಾ ಬರುತ್ತಾನಂತೆ, ನೀನೂ ಬಂದರೆ ಬ್ಯಾಡ್‌ಮಿಂಟನ್ ಆಡಬಹುದು ಎನ್ನುತ್ತಾನೆ" ಎಂದು ಲಾಲಾನ ಸಂದೇಶ ತಿಳಿಸಿದನು, ಕಿರಣಳ ಅಣ್ಣ.

"ನನಗೆ ಮಿತ್ರರೊಬ್ಬರಲ್ಲಿ ಪಾರ್ಟಿಗೆ ಹೋಗಬೇಕಾಗಿದೆಯಲ್ಲ. ತಪ್ಪಿಸುವ ಹಾಗಿದ್ದರೆ ತಪ್ಪಿಸುತ್ತಿದ್ದೆ. ಆದರೆ ಉಪಾಯವಿಲ್ಲ. ಹಾಗೆಯೇ ಹೇಳಿಬಿಡು." ಎಂದು ಹೇಳಿ ಕಿರಣ ರಿಸೀವ್ಹರ್ ಕೆಳಗಿಟ್ಟಳು.

"ಅಷ್ಟು ಸಿಹಿಯಾದ ಪಾರ್ಟಿ ಎಲ್ಲಿಯದು ?"

ರಮೇಶ ಕೇಳಿದನು.

"ಪಾರ್ಟೀನೂ ಇಲ್ಲ ಏನೂ ಇಲ್ಲ. ಯಾರೋ ಬ್ಯಾಡಮಿಂಟನ್ ಆಡಲಿಕ್ಕೆ ಬರುತ್ತೀಯೇನೆಂದು ಕೇಳಲಿಕ್ಕೆ ಮನೆಗೆ ಫೋನು ಮಾಡಿದ್ದರಂತೆ. ಪಾರ್ಟಿಯ ನೆವ ಮಾಡಿದೆ. ಚಹ ಕುಡಿದು ನಾವು ಯೂನಿಯನ್ ಕ್ಲಬ್ಬಿನತ್ತ ಹೋಗಿಬಿಡೋಣ. ಅಭ್ಯಂತರವಿಲ್ಲವಲ್ಲ ?"

"ಇಲ್ಲ, ಆದರೆ ಇಷ್ಟರಲ್ಲೇ ಲಾಲಾ ಬರಬಹುದಲ್ಲ. ಅವರಿಗೆ ನಿಮ್ಮೊಡನೆ ಆಡುವದೆಂದರೆ ಎಲ್ಲಿಲ್ಲದ ಉತ್ಸಾಹ. ಹತ್ತು ನಿಮಿಷ ದಾರಿ ಕಾಯ್ದು ಹೋಗೋಣ."

"ಬೇಡ, ಅಯರ್ವಿನ್ ಕ್ಲಬ್ಬಿನ ಥಳಕು ಬೇಸರ ಬಂದಿದೆ. ಅಲ್ಲಿ ಸದಸ್ಯ

ರಾಗಿದ್ದೇವೆಂದು ಅನಿಸಿಕೊಳ್ಳಲಷ್ಟೇ ಜನ ಬರುತ್ತಾರೆ. ಈವತ್ತು ನಿಮ್ಮ ಕ್ಲಬ್ಬಿಗೆ ಹೋಗಿ ಮನಸ್ವೀ ಆಡುವ ಎಂದಿದ್ದೇನೆ."

ಚಹ ಬಂತು. ಗಿರಿಜಾ ತಾಯಿ ಕರಜೀ ಕಾಯಿ, ಚೂಡಾ ಮೇಜಿನ ಮೇಲಿಡುತ್ತ ಕೇಳಿದಳು,

"ನಿನ್ನ ಅತ್ತಿಗೆಯೇಕೆ ಇತ್ತ ಬರುವದಿಲ್ಲ, ಕಿರಣ?"

"ನೀವೂ ಅತ್ತ ಬರುವದಿಲ್ಲವಲ್ಲ. ಎರಡು ದಿನದಿಂದ ಅಶೋಕಂಗೆ ಜ್ವರ ಬರುತ್ತಿತ್ತು. ಅದಕ್ಕೆ ವೈನಿ ಎಲ್ಲಿಯೂ ಹೋಗಲಿಲ್ಲ. ಈವತ್ತೇಬಿಟ್ಟದೆ."

"ನನಗೆ ಯಾರೂ ಹೇಳಲಿಲ್ಲವಲ್ಲ? ನಾಲ್ಕು ದಿನದಿಂದ ನಾನೂ ಗುರು ಚರಿತ್ರೆ ಓದುತ್ತ ಕುಳಿತು ಬಿಟ್ಟೆ. ಎಲ್ಲಿಯೂ ಹೋಗಲಿಲ್ಲ."

"ಸನ್ಯಾಸ ತಗೋಬೇಡಿ, ಗಿರಿಜಾತಾಯೀ. ಇನ್ನೂ ಬಹಳಷ್ಟು ನೋಡ ಬೇಕು ಮುಂಬಯಿನ ನೀವು."

"ನಾನೇಕೆ ಸನ್ಯಾಸಿಯಾಗಲೇ ತಾಯಿ? ಈ ಪಾಶ ಬಿಡಬೇಕಲ್ಲ. ಲಾಲಾನ ಲಗ್ನವೊಂದು ಆಯಿತೆಂದರೆ ಹಾಯಾಗಿರುತ್ತೇನೆ. ಅದೇ ಯಾವ ಕಾಲಕ್ಕೋ."

"ಅಷ್ಟಾದರೆ ಆಯಿತೆ. ಕಾಕಿ? ಮಗನ ಲಗ್ನವಾಯಿತೆಂದರೆ ಒಂದೆರಡು ಮೊಮ್ಮೊಕ್ಕಳನ್ನು ನೋಡದೆ ಸನ್ಯಾಸ ಬರೋಹಾಗಿಲ್ಲವಲ್ಲ. ನಂತರ ಆ ಮೊಮ್ಮಕ್ಕಳ ಮುಂಜಿ, ಮದುವೆ ನೋಡದೆ ಇರಲಿಕ್ಕಾಗುತ್ತದೆಯೆ?"

ಎಂದು ರಮೇಶ ಕಾಕಿಯ ಕಡೆ ತಿರುಗಿ ನುಡಿವ.

"ಅದೆಲ್ಲ ಎಲ್ಲಪ್ಪಾ? ನನಗೇನು ಇನ್ನೂರು ವರ್ಷ ಬಾಳು ಅನ್ನುತ್ತೀಯಾ? ಲಾಲಾನೂ ನೀನೂ ಲಗ್ನವಾಗಿ ಸುಖ ವಾಗಿರುವದನ್ನು ನೋಡಿದೆನೆಂದರೆ ಮುಗಿಯಿತು."

"ಇವರ ಆಶೆ ಬಿಡಿ, ತಾಯಿ. ಇವರು ಲಗ್ನವಾಗದೆ ಸಮಾಜಕಟ್ಟುವವರು. ಆಗ ನಾವಿಬ್ಬರೂ ತುಂಬ ತಮಾಶೆ ನೋಡಲಿದೆ. ಅಲ್ಲಿಯತನಕ ಕ್ಲಬ್ಬಿಗೆ ಹೋಗಿ ಬರೋಣ."

"ನೀನೂ ಹೋಗಿ ಬಾ ರಮೇಶ. ಲಾಲಾನೂ ಇಷ್ಟರಲ್ಲೇ ಬರಬೇಕಾಗಿತ್ತು. ಕ್ಲಬ್ಬಿಗೇಬರಬಹುದು. ನಾನೂ ಕಿರಣನ ಮನೆಗೆ ಹೋಗಿಬರುತ್ತೇನೆ. ನನಗೊಂದು ಟ್ಯಾಕ್ಸಿ ಮಾಡಿಕೊಟ್ಟು ಬಿಡು."

ಎಲ್ಲರೂ ಎದ್ದರು. ರಮೇಶ ಗಿರಿಜಾತಾಯಿಯನ್ನು ಕಳಿಸಿಕೊಟ್ಟು ಕಿರಣಳ ಕಾರಿನಲ್ಲಿ ಕುಳಿತು. ಯೂನಿಯನ್ಸ್ ಕ್ಲಬ್ಬಿಗೆ ಕಾರು ನಡೆಸಿದನು.

## ೧೫

" ನಾವೀಗ ಎಲ್ಲಿ ಹೋಗುತ್ತಿದ್ದೇವೆ ಎಂದು ಕೇಳಬಹುದೆ ?"

ಆರೂವರೆ ಘಂಟೆಗೆ ಆಟ ಮುಗಿಸಿ, ಪ್ಲಿಮ್‌ಟೋ ಬಾಟ್ಲಿ ಮುಗಿಸಿ, ಇಬ್ಬರೂ ತಿರುಗಿ ಕಾರಿನಲ್ಲಿ ಕುಳಿತಾಗ ಕಾರು ನಡೆಸುತ್ತಿದ್ದ ಕಿರಣ ಅದನ್ನು ತಿರುಗಿ ಫೋರ್ಟಿನತ್ತ ಒಯ್ಯದೆ ಮರಿನ್ ಡ್ರಾವ್ಹ್ಸದತ್ತ ತಿರುಗಿಸಿದ್ದನ್ನು ನೋಡಿ ರಮೇಶ ಕೇಳಿದನು.

" ಹುಂ, ಕೇಳಲಿಕ್ಕೆಲ್ಲ ಕೇಳಬಹುದು. ಆದರೆ ಈ ಯಂತ್ರಗಳದು ಹೇಳ ಬರುವದಿಲ್ಲ. ತುರ್ತಕ್ಕಂತೂ ದಿಕ್ಕಿನ ಗುರುತಿನ ಮೇಲೆ ಮಲಬಾರ್‌ಹಿಲ್ಲಿನತ್ತ ಹೋಗುತ್ತಿರುವಂತಿದೆ."

ಎಂದು ಗಂಭೀರವಾಗಿ ನುಡಿದಳು ಕಿರಣ ಎಕ್ಸಲರೇಟರ್ ಒತ್ತುತ್ತ.

" ಮೊನ್ನೆ ಫ್ಯಾಕ್ಟರೀಲಿ ನಮ್ಮ ಫೋರ್‌ಮನ್‌ನೂ ಯಂತ್ರಗಳ ಬಗ್ಗೆ ಹೀಗೆಯೇ ಏನನ್ನೋ ಅನ್ನುತ್ತಿದ್ದನು. ಬೇಜವಾಬದಾರ ಯಾಂತ್ರಿಕರ ಕೈಲಿ ಎಂಜಿನು ಸಿಕ್ಕರೆ ಅವು ಏನಾದರೂ ಮಾಡಿಬಿಡುವವಂತೆ."

" ಅದೂ ನಿಜ, ಅಂಥ ಬೇಜವಾಬದಾರ ಯಾಂತ್ರಿಕನನ್ನು ನಿಯಮಿಸು ವಷ್ಟು ಮೂರ್ಖತನವನ್ನು ನಿಮ್ಮ ಫೋರ್‌ಮನ್ ಮಾಡಬಾರದಾಗಿತ್ತು."

ಕಿರಣಳಿಗೆ ಇನ್ನೂ ಗಾಂಭಿರ್ಯವನ್ನಿಟ್ಟುಕೊಳ್ಳಲಾಗಲಿಲ್ಲ. ರಮೇಶನತ್ತ ನೋಡುತ್ತ ನಗತೊಡಗಿದಳು.

" ಹಾಂ ನನ್ನ ಮೋರೆಯ ಮೇಲೆ ರಸ್ತೆ ಕಾಣುವದಿಲ್ಲ. ಅತ್ತ ನೋಡಿ "

ಅನ್ನುತ್ತ ಮುಂದಿನ ದೊಂಬು ಕಾರಿಗೆ ಢಿಕ್ಕಿ ಹೋಡೆಯಬೇಕೆಂದಿದ್ದ ಕಾರನ್ನು ತಾನೇ ಚಟ್ಟನೆ ಪ್ಹೀಲು ತಿರುವಿ ಬದಿಗೆ ಒಯ್ದನು ರಮೇಶ. ಕಿರಣ 'ಥ್ಯಾಂಕ್ಸ್' ಎಂದು ಹೇಳಿ ಏನೂ ಆಗಿಲ್ಲವೆನ್ನುವಂತೆ ನಿರ್ಲಕ್ಷ್ಯವಾಗಿ ಕಾರನ್ನು ಮುಂದೋಡಿಸತೊಡಗಿದಳು.

"ಸತ್ಯ ಹೇಳಿ, ಈ ಕಾರಿನಿಂದ ಇಲ್ಲಿಯವರೆಗೆ ಎಷ್ಟು ಜೀವ ಬಲಿ ಗೊಂಡಿದ್ದೀರಿ ?"

"ಲಕ್ಷಗಟ್ಟಲೆ. ಒಮ್ಮೆಯಂತೂ ರಸ್ತೆಯನ್ನು ಕ್ರಾಸ್ ಮಾಡುತ್ತಿದ್ದ ಲಕ್ಷಗಟ್ಟಲೆ ಇರುವೆಗಳ ಒಂದು ಸೈನ್ಯವೇ ಗಾಲಿಗಳ ಕೆಳಗೆ ಸಿಕ್ಕು ಪಟ ಪಟನೆ ಸಾಯಬೇಕಾಯಿತು. ಬಹಳ ಪ್ರಯತ್ನ ಮಾಡಿ ಆ ಸೈನ್ಯವ ಮೇಲೆ ಕಾರು ಹಾರಿಸಬೇಕೆಂದೆ. ಆದರೆ ಚಕ್ರಗಳು ನೆಲ ಬಿಡಲೇ ಇಲ್ಲ. ಅದರ ವಿಷಯ ಎಂಟೆಂಟು ದಿನಗಳವರೆಗೆ ಟ್ಯಾಮ್ಸ್‌ದಲ್ಲಿ ಹೆಡ್‌ಲೈನ್ ಆಗಿ ಬಂದಿತ್ತು. ನೋಡಿಲ್ಲವೆ ?"

"ಅಷ್ಟು ಸಣ್ಣ ವಿಷಯವನ್ನೆಲ್ಲ ನೋಡುತ್ತಿರಲಿಕ್ಕೆ ನಮಗೆ ಹೊತ್ತಿರುವದಿಲ್ಲ. ಸ್ಟಾಕ್ ಎಕ್ಸ್‌ಚೇಂಜ್ ಕಾಲಂಗಳನ್ನು ನೋಡಲಿಕ್ಕಷ್ಟೆ ನಾವು ಪೇಪರುಗಳನ್ನು ಕೊಳ್ಳುತ್ತೇವೆ. ಆದರೆ ಕೋರ್ಟಿನಲ್ಲಿ ಕೇಸು ನಡೆದು ಶಿಕ್ಷೆಯಾಗಿರಬೇಕಲ್ಲ ?"

"ಆಗದಿರುತ್ತದೆಯೆ ? ಕಾರು ಹಾರಿಸಲು ನಾನು ಮಾಡಿದ ಪ್ರಯತ್ನ, ನಾನು ಹೋಗುತ್ತಿರಬೇಕಾದರೆ ಅಡ್ಡಬಂದ ಆ ಇರುವೆಗಳ ಧಾಡಸ ಎಲ್ಲವನ್ನೂ ನನ್ನ ವಕೀಲರು ಸಮರ್ಥಿಸಿ ವಾದಿಸಿದ ಮೇಲೆ ಕೇಸು ನಿಕಾಲೆ ಆಯಿತು."

"ನಾನೂ ಲಾ ಕಲಿತಿದ್ದೇನೆ. ಹಾಗೆ ನಿಕಾಲೆ ಆಗಲಿಕ್ಕೆ ಯಾವ ಪ್ರಾವ್ಹಿಜನ್ನೂ ಇಲ್ಲ. ಎಷ್ಟೆಂದರೂ ದುಡ್ಡಿದ್ದವರಲ್ಲವೆ ? ಯಾರದಾದರೂ ಕೈಬಿಸಿ ಯಾಗಿರಬೇಕು. ನಾನಾಗಿದ್ದರೆ...."

"ಇನಾಮು ಕೊಡುತ್ತಿದ್ದಿರಿ. ಅಷ್ಟು ಇರುವೆಗಳನ್ನು ಕೊಂದು ಓಡಾಡು ವವರಿಗಾಗುವ ತೊಂದರೆ ತಪ್ಪಿಸಿದ್ದಕ್ಕೆ."

"ನೀವು ಇಷ್ಟು ಮಾತಿನ ಮಲ್ಲರೆಂದು ತಿಳಿದಿರಲಿಲ್ಲ. ಆ ದಿನ ನಿಮ್ಮ ಫ್ರೆಂಡ್ ಆಕೋಳಕರ್ ಕಾಲೇಜಿನಲ್ಲಿ ನೀವು ಬಹಳ ಮಾತಾಡೋದಿಲ್ಲ. ಯಾವಾಗಲೂ ಸಹವಾಸ ತಪ್ಪಿಸುತ್ತೀರಿ ಎಂದುಬಿಟ್ಟರು. ಎಲ್ಲ ಸುಳ್ಳು."

"ನಾನೆಲ್ಲಿ ನಿಜ ಅನ್ನುತ್ತೇನೆ. ಎಲ್ಲರೊಡನೆಯೂ ಹೀಗೆ ಮಾತಾಡ

ಸಿಗುವದಿಲ್ಲ. ಅವರಿಗೆ ಬೇಕಾದ ಮಾತಾಡಲು ಸೇರಿದ್ದರೆ ತಪ್ಪು ನನ್ನದಲ್ಲ. ಇದು ನೋಡಿ ಇದಕ್ಕೇ ಮಲಬಾರ್ ಹಿಲ್ಲು ಅನ್ನುತ್ತಾರೆ. ಹಿಂದಕ್ಕೆ ಇಲ್ಲಿ ನಿಂತು ನಿಮ್ಮ ಮಲಬಾರನ್ನು ಕಾಣುವ ಸೂಕ್ಷ್ಮದರ್ಶಿಗಳಿದ್ದರಂತೆ. ಈಗ ಬರೇ ಮುಂಬಯಿ ನಗರದ ಹಕ್ಕಿ ನೋಟ ಕಾಣಬಹುದು. ಆಚೆಯದು 'ತೂಗಾಡುವ ಗಾರ್ಡನ್,' ಇಚೆಯದು ಹೊಸದಾಗಿ ತಯಾರಾದ ಕಮಲಾಬಾಯಿ ಪಾರ್ಕು, ಇದು...."

"ನಾನು ಮುಂಬಯಿಗೆ ಬಂದು ಎಷ್ಟು ದಿನವಾಯಿತು ?"

"ಆಗಿರಬಹುದು ಎರಡು ಮೂರು ವರ್ಷ. ಆದರೆ ಇಲ್ಲಿಯೇ ಹುಟ್ಟಿ ಹದಿನೆಂಟು ವರ್ಷ ಕಳೆದಿದ್ದೇನೆ ಎನ್ನುವದರ ಮೇಲಿಂದ ಇದನ್ನೆಲ್ಲ ಹೊಸದಾಗಿ ಪರಿಚಯ ಮಾಡಿಕೊಡುವ ಹಕ್ಕಿದೆ ನನಗೆ."

ಕಾರನ್ನು ಒಂದು ಬದಿಗೆ ನಿಲ್ಲಿಸಿ ಇಬ್ಬರೂ ಪಾರ್ಕನ್ನು ಪ್ರವೇಶ ಮಾಡಿದರು. ಹೊಸದಾಗಿ ನಿರ್ಮಿಸಿದ್ದ ಪಾರ್ಕು, ಅದೇ ಆಗ ಬೆಳೆಯತೊಡಗಿದ್ದ ಹಸಿರು ಹುಲ್ಲು, ಗಿಡ, ಕಂಟಿಗಳಿಂದ ವನದೇವತೆಯ ಪುಟ್ಟ ಶಿಶುವಿನಂತೆ ಶುಭ್ರವಾಗಿ, ನಿಚ್ಚಳವಾಗಿ ಕಾಣುತ್ತಿತ್ತು. ಒಂದೇ ಸಮನೆ ಓಡಾಡುತ್ತಿರುವ ಹುಡುಗರು, ಯುವಕರು, ಹೆಂಗಸರು, ಮುದುಕರು, ಲಕ್ಷಾಧೀಶರು, ಕೂಲಿ ಕಾರರು, ಕವಿಗಳು, ಹಳ್ಳಿಗರು, ಶಿಶುಗಳು, ಬಟ್ಲರರು, ಪಾರ್ಸಿಗಳು, ಬುದ್ಧ ಸನ್ಯಾಸಿಯೂ ಒಬ್ಬ; ಎಲ್ಲತರದ, ಎಲ್ಲ ಮಟ್ಟದ, ಎಲ್ಲ ವಯಸ್ಸಿನ, ಎಲ್ಲ ಭಾವನೆ, ಉದ್ದೇಶ, ಆಶಯಗಳ ಜನರೂ ಅಲ್ಲಿ ನೆರೆದಿದ್ದರು. ಅರಿವೆಯ ವೈವಿಧ್ಯ, ಕ್ರಾಪಿನ ವೈವಿಧ್ಯ, ತುಟಿಯ ಮೇಲಿನ ಲಿಪ್‌ಸ್ಟಿಕ್ ಕೆಂಪಿನಲ್ಲಿಯೂ ವೈವಿಧ್ಯ, ಒಬ್ಬರಂತೆ ಇನ್ನೊಬ್ಬರು ಯಾವ ರೀತಿಯಲ್ಲಿಯಾದರೂ ಇರುವ ಒಂದು ಉದಾಹರಣೆಯೂ ಆ ಸಾವಿರ ಎರಡು ಸಾವಿರ ಜನರಲ್ಲಿ ಸಿಗುವಂತಿರಲಿಲ್ಲ. ಒಬ್ಬರ ರೀತಿಯಲ್ಲಿಯೂ ತಿರುಗಾಡಬಂದವರ ಬೇಸಾವಧತೆಯಾಗಲಿ, ನಿರಾಪ ಧಿತ್ವವಾಗಲೀ ಇರಲಿಲ್ಲ. ಎಲ್ಲರೂ ಏನೋ ಸಾಧಿಸ ಹೊರಟವರಂತೆ, ಅದನ್ನು ಸಾಧಿಸದಿದ್ದರೆ ಆ ದಿನದ ಕಾರ್ಯಕ್ರಮವೇ ಮುಗಿಯುವಂತಿಲ್ಲ ಎನ್ನುವ 'ಬಿಸಿನೆಸ್' ರೀತಿಯಲ್ಲಿ ಅತ್ತಿಂದಿತ್ತ ಸಾಗಿದ್ದರು.

ಇಬ್ಬರೂ ಪಾರ್ಕನ್ನು ಒಮ್ಮೆ ಸುತ್ತಿಕೊಂಡು, ಒಂದು ಬದಿಗೆ ಆದಷ್ಟು ಶಾಂತವಾಗಿದ್ದ ಸ್ಥಳವನ್ನಾಯ್ದು ಹಸಿರು ಹುಲ್ಲ ಮೇಲೆ ಹೋಗಿ ಕುಳಿತರು.

ಕುಳಿತಲ್ಲಿಂದ ಇಪ್ಪತ್ತು ಮೈಲುಗಳಷ್ಟು ವಿಸ್ತಾರವಾಗಿ ಹಬ್ಬಿದ ಮುಂಬಯಿ ನಗರ ಅಸ್ತವಾಗುತ್ತಿದ್ದ ಸೂರ್ಯನ ಆರಕ್ತತೆಯಲ್ಲಿ ಮಿಂದು ಭವ್ಯವಾಗಿ ಕಾಣುತ್ತಿತ್ತು. ಅಂತರ್ಯದಲ್ಲಿ ಲಕ್ಷಗಟ್ಟಲೆ ಜನ, ವಾಹನ, ವಸ್ತುಗಳಿಂದ ತುಂಬಿದ್ದ ಮುಂಬಯಿಯ ಬೀದಿಗಳು ಅಲ್ಲಿಂದ, ಯಾವದೊಬ್ಬ ಕಲಾಕಾರನು ನಿರ್ಮಿಸಿದ ರಟ್ಟಿನ ನಿರ್ಜೀವ ನಗರದ ಪತಿಮೆಯಂತೆ ತೋರುತ್ತಿತ್ತು. ಅದರ ಬದಿಗೆ ಅದಕ್ಕಿಂತಲೂ ಶಾಂತವಾಗಿ ನಿರ್ಜೀವವಾಗಿ ಹಬ್ಬಿದ ಸಾಗರದ ನೀರು ನಗರದ ಭವ್ಯತೆಗೆ ನಾಚಿ ಮುದುಡಿ ಮಲಗಿದಂತೆ ತೋರುತ್ತಿತ್ತು.

ಇಬ್ಬರೂ ಬಹಳ ಹೊತ್ತು ಮೌನವಾಗಿ ಅಸ್ತವಾಗುತ್ತಿದ್ದ ಸೂರ್ಯನ ಬೆಳಕಿನಲ್ಲಿ ತರತರದ ಬಣ್ಣಪಡೆಯುತ್ತಿದ್ದ ನಗರ, ನೀರು, ಮರಗಿಡಗಳನ್ನು ನೋಡುತ್ತ ಹಾಗೆಯೇ ಕುಳಿತಿದ್ದರು.

"ಜೀವನದ ಅರ್ಥವಾಗಬೇಕಾದರೆ ಮುಂಬಯಿ ನೋಡಬೇಕು"

ಮೌನವನ್ನು ಭಂಗಿಸಿದವ ರಮೇಶನಾಗಿದ್ದ.

"ನಿಮಗೆ ಹಾಗೆನಿಸಬಹುದು. ನನಗಾದರೆ ರಜ ಬಂದ ಕೂಡಲೆ ಎಂದಿಗೆ ಮುಂಬಯಿ ಬಿಟ್ಟೇನು ಅನಿಸುತ್ತದೆ."

"ನೀವು ಇಲ್ಲಿಯೇ ಹುಟ್ಟಿದವರು ಅಲ್ಲವೆ?"

"ಉಹ್ಞು, ಗುಡ್ಡದ ಮೇಲೆ ಯಾರಾದರೂ ಹುಟ್ಟುತ್ತಾರೆಯೆ? ನಾನು ಹುಟ್ಟಿದ್ದು ದಾದರಿನ ನನ್ನ ಮನೆಯಲ್ಲಿ. ನನ್ನಣ್ಣ ಮಾತ್ರ ನಾಸಿಕದಲ್ಲಿ ಹುಟ್ಟಿದ್ದಾನಂತೆ. ನನ್ನ ತಾಯಿಯ ಊರದು. ನನ್ನ ತಂದೆ ರಿಚರ್ಡ್‌ಸನ್–ಕರಮ್‌ಚಂದ್ ಕನ್ಸರ್ನ್‌ದಲ್ಲಿ ಗುಮಾಸ್ತೆಯಾಗಿ ಮುಂಬಯಿಗೆ ಬಂದು ಸಂಸಾರ ಹೂಡಿದ್ದರು, ಗುಮಾಸ್ತೆಯಿಂದ ಸುಪರಿಂಟೆಂಡೆಂಟ್, ಅಲ್ಲಿಂದ ಅಸಿಸ್ಟಂಟ್, ಮುಂದೆ ಬ್ರ್ಯಾಂಚ್ ಮ್ಯಾನೇಜರ್ ಆಗಿ ಕೂತಿದ್ದರು ಕಂಪನಿಯ ಪಾಲಾಗುವಾಗ."

"ಆ ಕಂಪನಿ ಆಗ ಬಹಳ ದೊಡ್ಡದಾಗಿದ್ದಿತಂತೆ. ಆದರೂ ದಿವಾಳಿ ಹತ್ತಿತ್ತಂತಲ್ಲ."

"ದಿವಾಳಿ ಅಂದರೆ ಬೇಕಂತ ತಂದುಕೊಂಡದು ಅದು. ಸರಕಾರದೊಡನೆ ಏತಕ್ಕೋ ಜಗಳವಾಡಿ ರಿಚರ್ಡ್‌ಸನ್ ಕಡೆಯವರು ತಮ್ಮ ಶೇರುಗಳನ್ನೆಲ್ಲ ಮಾರಿ ತಮ್ಮ ದೇಶಕ್ಕೆ ಹೋಗಬೇಕೆನ್ನುವಾಗ ಅವರ ಕೆಳಗೆ ಎರಡು ಮಿಲ್ಲು

ಗಳಿದ್ದವು. ಅದು ಯುದ್ಧಪೂರ್ವದ ಸ್ಲಂಪಿನಕಾಲ. ದೇಶೀ ಮಿಲ್ಲಿನ ಅರಿವೆಯನ್ನು ಕೇಳುವವರಿಲ್ಲ. ನನ್ನ ತಂದೆ ರಿಚರ್ಡ್‌ಸನ್‌ರೊಡನೆ ಮಾತಾಡಿ ಆ ರೀತಿ ಒಮ್ಮೆಲೇ ಶೇರುಗಳನ್ನು ಮಾರಿದರೆ ಅವಕ್ಕೆ ಅರ್ಧ ಬೆಲೆಯೂ ಬರುವದಿಲ್ಲವೆಂದು ಅವರಿಗೆ ಮನಗಾಣಿಸಿಕೊಟ್ಟು ಎರಡರಲ್ಲಿ ಒಂದು ಮಿಲ್ಲನ್ನು ಮಾರಿ ಕಂಪನಿಯ ಸಾಲ ತೀರಿಸಬೇಕೆಂದೂ ಇನ್ನೊಂದನ್ನು ತಂದೆ ವಹಿಸಿಕೊಂಡು ಕಂತಿನ ಮೇಲೆ ಇಷ್ಟು ಹಣವನ್ನು ರಿಚರ್ಡ್‌ಸನ್‌ರಿಗೆ ಕೊಡಬೇಕೆಂದೂ ಕರಾರು ಮಾಡಿಕೊಂಡನು. ಮತ್ತೆರಡು ವರ್ಷದಲ್ಲಿ ಕಂಪನಿಯವರು ತಮಗೆ ಕೂಡಲೇ ಹಣ ಬೇಕೆಂದೂ ಆ ಇನ್ನೊಂದು ಮಿಲ್ಲನ್ನೂ ಮಾರಿಬಿಡಬೇಕೆಂದೂ ತಂದೆಗೆ ತಿಳಿಸಿದರು. ತಂದೆಯದೂ ಧೈರ್ಯ ಅನ್ನಬೇಕು. ಆ ಕೆಟ್ಟ ದಿನಗಳಲ್ಲಿಯೂ ಊರಿನಲ್ಲಿದ್ದ ನಮ್ಮ ಜಮೀನು ಮಾರಿ, ತಾಯಿಯ ಆಭರಣಗಳನ್ನೂ ಮಾರಿ, ಹಣ ಒದಗಿಸಿಕೊಂಡು ಮಿಲ್ಲನ್ನು ತಾವೇ ಕೊಂಡುಕೊಂಡರು. ಮನೆಯ ಹಿರಿಯರ ಬೈಗಳ, ತಾಯಿಯ ಕಣ್ಣೀರು ಒಂದನ್ನೂ ಕೇಳಲಿಲ್ಲ. ಇದು ಮೂವತ್ತೆಂಟನೆಯ ಇಸವಿಯ ವಿಷಯ...."

"ಮುಂದಿನ ಕಥೆಯನ್ನು ನಾನೇ ಹೇಳುತ್ತೇನೆ. ಮುಂದಿನ ಆರು ತಿಂಗಳಲ್ಲಿ ಯುದ್ಧ ಆರಂಭವಾಯಿತು. ಕ್ರಮೇಣ ಹೊರಗಿನಿಂದ ಅರಿವೆ ಬರುವದು ನಿಂತುಹೋಯಿತು. ಮಿಲ್ಲಿನ ಅರಿವೆಗಳಿಗೆ ಒಂದಕ್ಕೆ ಎಂಟುಪಟ್ಟು ದರ ಬಂದಿತು. ಅಷ್ಟರಲ್ಲಿಯಾಗಲೇ ನಿಮ್ಮ ತಂದೆ ಇನ್ನೂ ಒಂದೆರಡು ಮಿಲ್ಲುಗಳಲ್ಲಿ ದೂರದರ್ಶಿಗಳಾಗಿ ಕೆಲವು ಶೇರುಗಳನ್ನು ಕೊಂಡಿರಬೇಕು. ಯುದ್ಧ ಮುಗಿಯುವ ಕಾಲಕ್ಕೆ ಮುಂಬಯಿಯಲ್ಲಿ ಮೂರು ಮಿಲ್ಲುಗಳು ಅಹಮದಾಬಾದದಲ್ಲಿ ನಿಮ್ಮ ಮಾವನ ಸ್ವಾಮಿತ್ವದಲ್ಲಿ ನಾಲ್ಕು ಮಿಲ್ಲುಗಳು ನಿಮ್ಮದಾದವು. ಈಗ ಅರ್ಥವಾಯಿತು."

"ಏನು ಅರ್ಥವಾಯಿತು ?"

"ತನ್ನ ಮಾತನ್ನೇ ಸಾಧಿಸುವ ಈ ಹಠ ಸ್ವಭಾವ ಮಗಳಿಗೂ ಹೇಗೆ ಬಂದಿತೆಂಬುದು ಅರ್ಥವಾಯಿತು. ಏನೆಂದರೆ – ಅದಾಗಬೇಕು."

"ನಾನು ಅಂಥದೇನು ಹಠ ಸಾಧಿಸಿದೆ ?"

"ಇಂಥ ದಿನ ಹೀಗೆ ಆಗಲೇಬೇಕು. ಇಷ್ಟು ಹೊತ್ತಿಗೆ ಇಂಥವರೊಡನೆ ಸಿನೇಮ ನೋಡಬೇಕೆಂದರೆ ನೋಡಲೇಬೇಕು. ಅದಕ್ಕೆ ಅಷ್ಟು ಸುಳ್ಳು

ಹೇಳಿದರೂ ಚಿಂತೆಯಿಲ್ಲ. ಇಂಥಲ್ಲಿ ತಿರುಗಾಡಬೇಕೆಂದರೆ ಹೋಗಲೇಬೇಕು. ಇನ್ನೊಬ್ಬರ ಒಪ್ಪಿಗೆ, ಅನುಕೂಲ, ಸುಖ ದುಃಖ ಏನನ್ನೂ ವಿಚಾರ ಮಾಡ ಬೇಕಾಗಿಲ್ಲ."

"ಏಹೋ, ನಾನೇನು ನಿಮ್ಮನ್ನು ಎಳೆದುಕೊಂಡು ಬಂದಿಲ್ಲವಲ್ಲ. ಮೊದಲೇ ಬರುವದಿಲ್ಲ ಎನ್ನಬೇಕಾಗಿತ್ತು. ಈಗಲಾದರೂ ಏನಾಯಿತು ಹೋಗಿ ಬಿಡಬಹುದಲ್ಲ."

"ಅದಕ್ಕೇ ಇರಬೇಕು – ಮುದ್ದಣನು ಮನೋರಮೆಯನ್ನು ಬೇಕೆಂತಲೇ ಸಿಟ್ಟಿಗೆಬ್ಬಿಸುತ್ತಿದ್ದನು."

"ನಿಮ್ಮ ಒಗಟು ನನಗೆ ಅರ್ಥವಾಗುವದಿಲ್ಲ. ಹೇಳುವದಿದ್ದರೆ ಸರಿಯಾಗಿ ಇಂಗ್ಲೀಷಿನಲ್ಲಿ ಹೇಳಿರಿ."

"ಅದು ಹೀಗೆ. ಕರ್ನಾಟಕವೆಂಬ ಒಂದು ಕಾಲದ ಕಾವೇರಿ ಗೋದಾವರಿಗಳ ನಡುವಿನ ನಾಡಿನಲ್ಲಿ ಮುದ್ದಣನೆಂಬೊಬ್ಬ ರಸಿಕ ಕವಿಯಿದ್ದನು. ಆತ ಆಸ್ಥಾನ ಕವಿಯಾದ್ದರಿಂದ ಒಂದು ದಿನ ಅರಮನೆಯಿಂದ ಬಂದವನೇ ಹೆಂಡತಿಯನ್ನು ಸಿಟ್ಟಿಗೆಬ್ಬಿಸಿದನು. ಕೋಪಗೊಂಡಾಗ ಹೆಂಡತಿ ಇನ್ನೂ ಸುಂದರಳಾಗಿ ಕಾಣಿಸುತ್ತಾಳಂತ ಅವನ...."

"ಸಾಕು ಸುಮ್ಮನಿರಿ. ಇನ್ನೊಮ್ಮೆ ಬಿಡಿಸಿ ಹೇಳುತ್ತೇನೆ. ನನಗಾಗಿ ಯಾರೂ ತೊಂದರೆ ವಹಿಸಬೇಕಾಗಿಲ್ಲ. ನಾನು ಬಾ ಅಂದ ಮಾತ್ರಕ್ಕೆ ಯಾರೂ ಎಲ್ಲಿಯೂ ಬರಬೇಕಾಗಿಯೂ ಇಲ್ಲ. ನನ್ನ ಸೌಂದರ್ಯ ವರ್ಣನೆಯೂ ನಿಮ್ಮಿಂದ ಆಗಬೇಕಾಗಿಯೂ ಇಲ್ಲ."

"ಸಣ್ಣ ಸಣ್ಣ ಮಾತಿಗೆಲ್ಲ ಯಾರೂ ಸಿಟ್ಟಿಗೇಳಬೇಕಾಗಿಲ್ಲ. ನಾನೂ ಹೇಳಿಬಿಡುತ್ತೇನೆ. ನೋಡಿ, ತಾವಡೇಕರ್, ಏನಾದರೂ ತಮಾಷೆ ಮಾಡೋದು ನನ್ನದೊಂದು ಕೆಟ್ಟ ಸ್ವಭಾವ ಒಪ್ಪುತ್ತೇನೆ. ಬಡವರ ಹತ್ತರ ಇರುವದು ಅದೇ ಒಂದು ಲಕ್ಸುರಿ. ಅದನ್ನೂ ಶ್ರೀಮಂತರು ಕಸಿದುಕೊಳ್ಳಬಾರದು."

"ಹುಚ್ಚುಹುಚ್ಚಾಗಿ ಏನಾದರೂ ಮಾತಾಡಿಬಿಟ್ಟು 'ತಮಾಶಿ ಅನ್ನು ತ್ತೀರಿ. ಏಳಿ ಹೋಗೋಣ'" ಎನ್ನುತ್ತ ಕಿರಣ ಕುಳಿತಲ್ಲಿಂದ ಎದ್ದಳು. ಇಷ್ಟು ಗಂಭೀರವಾಗುತ್ತದೆ ಎಂದು ರಮೇಶ ಕಲ್ಪಿಸಿರಲಿಲ್ಲ. ಅವನೂ ಎದ್ದು ಕಿರಣಳ ಕೈ ಹಿಡಿದು ಹೇಳಿದನು.

ಉಪಚಾರಕ್ಕಾಗಿ 'ಕ್ಷಮಿಸಿ' ಎಂದೇನೂ ನಾನು ಹೇಳುವದಿಲ್ಲ. ಆದರೆ ನಿಮಗೆ ಗೊತ್ತು ನಿಮ್ಮ ಮನಸ್ಸಿಗೆ ಹತ್ತುವಂಥ ಯಾವ ಭಾವನೆಯನ್ನು ವ್ಯಕ್ತ ಪಡಿಸುವದು ನನ್ನ ಉದ್ದೇಶವಾಗಿರಲಿಲ್ಲ. ಸ್ನೇಹಿತರೊಡನೆ ಹೀಗೆ ಮುಕ್ತ ಹೃದಯದಿಂದಿರುವದು ಸ್ನೇಹದ ದುರುಪಯೋಗ ಎಂದು ನಾನೆಂದೂ ತಿಳಿದು ಕೊಂಡಿಲ್ಲ. ನೀವೂ ತಿಳಿದುಕೊಳ್ಳಬಾರದು. ನೀವು ಹೀಗೆಯೇ ಹೋಗುವ ದಾದರೆ ನನ್ನನ್ನು ನಾನು ಕಡೆಯುವರೆಗೂ ಕ್ಷಮಿಸಿಕೊಳ್ಳಲಾರೆ."

"ಇಲ್ಲರೀ, ಹೋಗುವದಿಲ್ಲ."

ಎನ್ನುತ್ತ ಕಿರಣ ಇನ್ನೂ ರಮೇಶನ ಕೈಯಲ್ಲಿದ್ದ ತನ್ನ ಕೈಯನ್ನು ಮೃದು ವಾಗಿ ಒತ್ತಿ ಬಿಡಿಸಿಕೊಂಡು ಮತ್ತೆ ಕುಳಿತುಕೊಂಡಳು. ಅನ್ಯಾಯವಾಗಿ ಸಿಟ್ಟಾದುದಕ್ಕೆ ಆಕೆಗೂ ಸಂಕೋಚವಾಗಿತ್ತು. ಕೆಲಹೊತ್ತು ಮಾತಾಡುವ ಧೈರ್ಯವಿಲ್ಲದೆ ಇಬ್ಬರೂ ಸುಮ್ಮನೇ ಕುಳಿತಿದ್ದರು.

ಇಬ್ಬರ ದೃಷ್ಟಿಯೂ ಎದುರು ಆಡುತ್ತಿದ್ದ ಇಬ್ಬರು ಚಿಕ್ಕ ಮಕ್ಕಳತ್ತ ಹೋಗಿತ್ತು. ದೊಡ್ಡವರ ಮನೆಯವರಾಗಿದ್ದರಿಂದ ಇಬ್ಬರೂ ಮಾಟವಾಗಿ ಅರಿವೆ ಹಾಕಿಕೊಂಡು ಮುದ್ದಾಗಿ, ಆರೋಗ್ಯವಾಗಿ ಬೆಳೆದಿದ್ದರು. ಇಬ್ಬರೂ ಕೂಡಿ ರೈಲಿನ ಆಟ ಆಡಬೇಕೆಂದು ನಿಶ್ಚಯವಾಗಿರಬೇಕು. ಹಿರಿಯವನಾದ ಅಣ್ಣ ಗಂಡಸರಷ್ಟೇ ಎಂಜಿನಿಯರ್ ಆಗಬಹುದಾದ್ದರಿಂದ ಮುಂದೆ ತಾನು ನಿಲ್ಲುವೆನೆಂದೂ, ತಂಗಿ ತನ್ನ ಹಿಂದೆ ತನ್ನ ಸೊಂಟವನ್ನು ಬಳಸಿ ಹಿಡಿದು ಕೊಂಡು ಬರಬೇಕೆಂದೂ ತಂಗಿಗೆ ತಿಳಿಸಿ ಹೇಳುತ್ತಿದ್ದನು. ಆದರೆ ತಂಗಿಗೆ ಹಿಂದಿನಿಂದ ಓಡುವ ಈ ಗಾಡಿಯಾಟ ಸರಸವಾಗಿ ತೋರಲಿಲ್ಲ. ತಮ್ಮ ರೈಲಿಗೆ ಹೆಣ್ಣು ಎಂಜಿನಿಯರ ಇರಲಿಕ್ಕೂ ಶಕ್ಯವಿದೆ. ಇಷ್ಟೇ ಅಲ್ಲ ಯಾವ ಫಂಕ್ಶನ್ ದಲ್ಲಿಯೂ ಹೆಂಗಸರಿಗೇ ಯಾವಾಗಲೂ ಗೌರವಸ್ಥಾನ ಕೊಡುತ್ತಿರುವದರಿಂದ ತಾನು ಮುಂದೆ ನಿಲ್ಲಬೇಕಾದುದು ಜಗತ್ತಿನ ರೀತಿ ಎಂದು ಆಕೆಯ ವಾದ. ಕಡೆಗೆ ಇಬ್ಬರಲ್ಲಿಯೂ ಒಪ್ಪಂದವಾಗಲಾರದೆ ಇಬ್ಬರದೂ ಬೇರೆ ಬೇರೆ ರೈಲಾಗ ಬೇಕೆಂದು ನಿಶ್ಚಯವಾಗಿ ಸೆಂಟ್ರಲ್ ರೈಲ್ವೆಗೂ ವೆಸ್ಟರ್ನ್ ರೈಲ್ವೆಗೂ ಪಂದ್ಯ ಬಿದ್ದಿತು. ವೆಸ್ಟರ್ನ್ ರೈಲ್ವೆಯಾದ ತಂಗಿ ಸೆಂಟ್ರಲ್‌ಕಿಂತ ಹಿಂದೆ ಬೀಳಬಾರ ದೆನ್ನುವ ಹಠದಿಂದ ತೀವ್ರ ಓಡಲು ಯತ್ನಿಸಿ ಬಿದ್ದುಬಿಟ್ಟಳು. ಹುಲ್ಲಿನ ಮೇಲೆ ಪೆಟ್ಟಾಗದಿದ್ದರೂ ಗಾಡಿ 'ಫೇಲ್' ಆಯಿತೆಂದೂ ಇನ್ನೂ ಓಡುವದರಲ್ಲಿ ಅರ್ಥ

ವಿಲ್ಲವೆಂದೂ ಆಕೆ ಬಿದ್ದಲ್ಲಿಯೇ ಎದ್ದು ಕುಳಿತು ತನ್ನಷ್ಟಕ್ಕೆ ಏನೋ ಹಾಡ ತೊಡಗಿದಳು.

ಇತ್ತ ಸೆಂಟ್ರಲ್ ರೇಲ್ವೆಗೆ ಒಬ್ಬನೇ ಓಡಿ ದಣಿವೂ ಬೇಸರವೂ ಬಂದಿತ್ತು. ಆತನೂ ನಿದಾನವಾಗಿ ತಂಗಿ ಇದ್ದಲ್ಲಿ ಬಂದು ಬಹಳಷ್ಟು ವಿಚಾರಮಾಡಿ ಯಾರೂ ಹಿಂದೆ ಮುಂದೆ ಆಗದೆ ಇಬ್ಬರೂ ಕೈಹಿಡಿದುಕೊಂಡು ನಿದಾನವಾಗಿ ಓಡಬೇಕೆಂದೂ ತಮ್ಮದು ಯಾವ ರೇಲ್ವೆಯೂ ಆಗಿರದೆ ಆಸ್ಟಿನ್ ಕಾರಾಗಿದೆ ಯೆಂದೂ ನಿರ್ಧಾರಕ್ಕೆ ಬಂದು ಬದಲಾದ ವಾಹನಕ್ಕೆ ಸರಿಯಾಗಿ ತಮ್ಮ ವೇಗ, ಸಪ್ಪಳ, ಹಾರ್ನು ಎಲ್ಲ ತಿದ್ದಿಕೊಂಡರು.

ಇದನ್ನೆಲ್ಲ ನೋಡುತ್ತಿದ್ದ ರಮೇಶ–ಕಿರಣ ಇಬ್ಬರಿಗೂ ಪಕ್ಕನೆ ನಗೆ ಬಂದುಬಿಟ್ಟಿತು. ಕಿರಣ ಹೇಳಿದಳು,

" ಅವರು ನಮಗಿಂತ ಜಾಣರು ಅಲ್ಲವೆ? ಅವರ ತಂದೆ ಹೋದ ವರ್ಷ ಬ್ಲಾಕ್‌ಮಾರ್ಕೆಟ್ ಮಾಡಿದನಂತ ೧೫,೦೦೦ ರೂಪಾಯಿ ದಂಡ ಸಲ್ಲಿಸಿದ್ದಾನೆ. ಬಾರುಘಾ ಬ್ರದರ್ಸ್ ಅಂತ ಗಿರಗಾಂವ್‌ದಲ್ಲಿ ಅವನ ಬೆಳ್ಳಿ ಬಂಗಾರದ ದೊಡ್ಡ ಅಂಗಡಿಯಿದೆ. ಇಲ್ಲಿಯೇ ಎಲ್ಲಿಯೋ ಬಂಗ್ಲೆ ಕಟ್ಟಿಕೊಂಡಿದ್ದಾನೆ. ಲಕ್ಷಗಟ್ಟಲೆ ದುಡಿಯುವವರಿಗೆ ಹದಿನೈದು ಸಾವಿರ ರೂಪಾಯಿ ಯಾವ ಲೆಕ್ಕಕ್ಕೆ ಹತ್ತಿರ ಬೇಕು ?"

" ನಿಮ್ಮ ತಂದೆಯಾದರೂ ನಾಲ್ಕು ವರ್ಷದಲ್ಲಿ ಐದಾರು ಮಿಲ್ಲುಗಳ ಒಡೆತನವನ್ನು ಸಂಪಾದಿಸಿದರಲ್ಲ. ಅದರಲ್ಲಿ ಕಪ್ಪು ಮಾರ್ಕೆಟ್ಟಿನದೆಷ್ಟು ಬಿಳೇ ಮಾರ್ಕೆಟ್ಟಿನದೆಷ್ಟು ?"

" ಬಿಸಿನೆಸ್ ಮಾಡಿದವರಿಗೇ ಅದು ಗೊತ್ತು. ನೀವೀಗ ಇನ್‌ಕಮ್ ಟ್ಯಾಕ್ಸ್ ಎಕೌಂಟ್ ಬದಲು ಮಾಡುವದಿಲ್ಲವೆ? ಹಾಗೆಯೇ. ಅನ್ಯಾಯವಾಗಿ ತಂದೆಯೂ ಗಳಿಸಿದ್ದಾನೆ ಎನ್ನುವದು ನನಗೂ ಗೊತ್ತು."

" ಅದನ್ನೇಕೆ ಇಟ್ಟುಕೊಳ್ಳಬೇಕು? ನಾನಾಗಿದ್ದರೆ ಹೊಳೆಯ ನೀರು ಹೊಳೆಗೆ ಎಂದು ಎಲ್ಲ ಕೊಟ್ಟುಬಿಡುತ್ತಿದ್ದೆ."

" ದೊಡ್ಡ ದಾನಶೂರರು. ಹಾಗೇನಾದರೂ ಮಾಡಿದ್ದಲ್ಲಿ ಅನ್ಯಾಯದ ಪಾಪವನ್ನು ಕಳೆದುಕೊಳ್ಳುತ್ತಿದ್ದಾನೆ ಎಂದು ಅರ್ಧಜನರಿಂದ ಅನ್ನಿಸಿಕೊಂಡರೆ ಇನ್ನರ್ಧ ಜನರು 'ಹುಚ್ಚ' ಎನ್ನುತ್ತಿದ್ದರು ಇಷ್ಟೆ. ಯಾರಿಗೂ ಏನೂ ಉಪ

ಯೋಗವಾಗುತ್ತಿರಲಿಲ್ಲ. ಆದರೆ ಕೂಲಿಕಾರರಿಗಾಗಿ ಮಾತ್ರ ತಂದೆ ಏನು ಬೇಕಾದ್ದು ಮಾಡಿದ್ದಾನೆ. ಬಡವರ ಹೊಟ್ಟೆಯ ಮೇಲೆ ಕಾಲು ಕೊಡಲಿಲ್ಲ. ತಿರುಗಿ ಅವನ ಹೆಸರಿನಲ್ಲಿ ಇಂದಿಗೂ ಒಂದು ಬೋರ್ಡಿಂಗ್ ಹೌಸು, ಲ್ಯಾಬ್ರರಿ ನಡೆಯುತ್ತಿದೆ."

"ಹುಂ, ದೇವರಿಗೆ ಲಂಚ."

"ಹಾಗೇನೇ ಅಂದುಕೊಳ್ಳಿ. ನಾನೂ ಈ ವಿಷಯವಾಗಿ ಮೊದಲು ಅಣ್ಣನೊಡನೆ ಬಹಳ ಜಗಳವಾಡುತ್ತಿದ್ದೆ. 'ಅನ್ಯಾಯದ ಧನ ನಮಗೆ ಬೇಡ. ಯಾವದಾದರೂ ಸಂಘ ಸಂಸ್ಥೆಗೆ ಕೊಟ್ಟುಬಿಡು' ಎಂದರೆ; ಅನ್ಯಾಯವಲ್ಲದ ಧನ ಜಗತ್ತಿನಲ್ಲಿ ಯಾವದಿದೆ ಎಂದು ಕೇಳುತ್ತಿದ್ದನು ಅಣ್ಣ. ಅದೇ ಹಣ ದಿಂದಲೇ ಈಗ ಇಷ್ಟು ಮಿಲ್ಲುಗಳನ್ನು ನಡೆಸಿ ಇಷ್ಟು ಕೂಲಿಕಾರರಿಗೆ ಕೆಲಸ ಒದಗಿಸುತ್ತಿದ್ದೇವೆ. ಕೆಲಸಗಾರರನ್ನು ನಮಗಿಂತಲೂ ಹೆಚ್ಚು ಚನ್ನಾಗಿ ಯಾರು ನಡೆಸಿಕೊಂಡು ಹೋಗುತ್ತಾರೆ ತೋರಿಸು ಎನ್ನುತ್ತಾನೆ. ಅದಕ್ಕೆ ನಾನೀಗ ಅದರಲ್ಲೆಲ್ಲ ತಲೆ ಹಾಕುವದನ್ನು ಬಿಟ್ಟು ಬಿಟ್ಟು ಕವಿತೆ, ಕಲೆ, ಅಫಗಾನ ಸ್ನೋ, ಕಾಮಿನಿ ಕೌಶಲ, ಖಾಟೋ ವಾಯ್ಲ್, ಸೂರ್ಯಾಸ್ತ ಇಂಥದರ ಮಟ್ಟಿಗಷ್ಟೇ ನನ್ನ ಕಾರ್ಯಕ್ರಮಗಳನ್ನು ಮಿತವಾಗಿಸಿಕೊಂಡಿದ್ದೇನೆ. ಉದಾಹರಣಾರ್ಥ ಅಲ್ಲಿ ಸೂರ್ಯಾಸ್ತವಾಗುತ್ತಿರುವದನ್ನು ನೋಡಿ."

"ಜಗತ್ತಿನ ವಿಚಿತ್ರ ನೋಡಿರಿ, ಎಲ್ಲಿಯೋ ಸೂರ್ಯಾಸ್ತವಾದರೆ ಎಲ್ಲಿಯೋ ಉದಯವಾಗುತ್ತದೆ."

"ಈಗೆಲ್ಲಿ ಆಯಿತು ?"

"ನನ್ನ ಪಕ್ಕದಲ್ಲಿ."

"ಈ ಮುಖಸ್ತುತಿಯೆಲ್ಲ ನನಗೆ ಸೇರುವದಿಲ್ಲ."

"ಮುಖಸ್ತುತಿಯಲ್ಲ. ಕನ್ನಡಿ ನೋಡಿಕೊಂಡರೆ ನಿಮಗೇ ಕಾಣುತ್ತಿತ್ತು. ಪಶ್ಚಿಮಬಾನಿನ ಕೆಂಪೆಲ್ಲ ನಿಮ್ಮ ಮೋರೆಯ ಮೇಲೆಯೇ ಮನೆಮಾಡಿರಬೇಕು."

"ಹಿಂದೊಮ್ಮೆ ನನ್ನ ಕಾಲೇಜು ಸಹಪಾಠಿಯೊಬ್ಬ ಹೀಗೆಯೇ ಒಂದು ಸಂದರ್ಭದಲ್ಲಿ ನನ್ನ ಮೋರೆಯನ್ನು ವರ್ಣಿಸಬಂದಿದ್ದನು. ಕೆನ್ನೆಗೆ ಬಿಗಿದಿದ್ದೆ."

"ಬಹಳ ನೋವಾಗಿರಬೇಕು."

" ಹುಚ್ಚುಹುಚ್ಚಾಗಿ ನಗುತ್ತ ಹೋದ - ಅವನ ಮೋರೆಯ ಮೇಲಿಂದಂತೂ ಹಾಗೆ ಕಾಣಲಿಲ್ಲ."

" ಅವನಿಗಲ್ಲ ನಾನು ಹೇಳಿದ್ದು. ನಿಮ್ಮ ಹಸ್ತಕಮಲಕ್ಕೆ. ಸುಂದರ ವಸ್ತುವೊಂದನ್ನು ಅದು ಸುಂದರ ಅನ್ನಕೂಡದೆ ? ಎಂಥ ಅನ್ಯಾಯ ನೋಡಿ. ಈ ಸೂರ್ಯಾಸ್ತ, ಈ ಆರಕ್ತ ಗಂಭೀರ ಮುಂಬಯಿ ನಗರ, ಈ ಶಾಂತ ಸುಂದರ ಸಾಗರ ಇವುಗಳನ್ನೆಲ್ಲ ಮೆಚ್ಚಿ ಸುಂದರ ಎಂದರೆ ಅವೂ ಸಿಟ್ಟಾಗುವದಿಲ್ಲ, ಉಳಿದವರೂ ಸಂಶಯಗೊಳ್ಳುವದಿಲ್ಲ. ಸುಂದರವಾಗಿರಬೇಕೆನ್ನುವದು, ಸುಂದರ ವಾಗಿರುವದನ್ನು ಮೆಚ್ಚುವದು ಪ್ರಕೃತಿಯಧರ್ಮ."

" ಮೆಚ್ಚುವ ರೀತಿಯಲ್ಲಿಯೂ ಅಂತರವಿಲ್ಲವೆ ?"

" ಹಾಗೆಯೇ, ಸೌಂದರ್ಯ ಪ್ರದರ್ಶಿಸುವ ರೀತಿಯಲ್ಲಿಯೂ ಅಂತರ ವಿರುತ್ತದೆ. ಕಲಾಕಾರನಿಗೆ ತನ್ನ ಕೃತಿ ನಾಲ್ಕು ಜನರ ಮೆಚ್ಚಿಗೆಗೆ ಪಾತ್ರವಾಗ ಬೇಕೆಂದು ಅನಿಸಿದಾಗ ಅದು ಅವನ ಜಂಬವನ್ನಾಗಲಿ, ಮಹತ್ವಾಕಾಂಕ್ಷೆ ಯನ್ನಾಗಲಿ ವ್ಯಕ್ತಪಡಿಸುವದಿಲ್ಲ. ಆ ತೆರನ ಅಭಿಲಾಷೆ ಪ್ರಕೃತಿಯ ಕರೆ. ಅದು ಹೆಚ್ಚು ಹೆಚ್ಚು ತುಂಬಿದ ಹಾಗೆ ಅವನಲ್ಲಿ ಕ್ರಿಯೆಟಿವ್‌ನೆಸ್ ಹೆಚ್ಚುತ್ತ ಹೋಗುತ್ತದೆ. ಅದರಂತೆಯೇ ಮಾನವ ಸೌಂದರ್ಯವೂ ಹೌದು. ಜೀವಂತ ಮನುಷ್ಯನಿಗೂ ನಿರ್ಜೀವ ಹೂವಿಗೂ ಇರುವ ಅಂತರ ಇದೇ. ಕಾಡು ಹೂ ತನ್ನನ್ನು ಯಾರೂ ನೋಡುವದಿಲ್ಲವೆಂದು ಅರಳುವದನ್ನೇ ನಿಲ್ಲಿಸುವದಿಲ್ಲ. ಮನುಷ್ಯನಲ್ಲಿಯಾದರೆ ' ಮೆಚ್ಚಿಗೆ ' ಬೆಳವಣಿಗೆಯ ಒಂದು ಮುಖ್ಯ ಧಾತು ಇದ್ದಂತೆ."

ಕಿರಣ ಮಾತಾಡದೆ ಮಸುಕಾಗತೊಡಗಿದ್ದ ಪಶ್ಚಿಮ ದಿಗಂತವನ್ನೇ ನಿಟ್ಟಿಸುತ್ತಿದ್ದಳು. ತಾನು ಕೇಳಿದ ಶಬ್ದಗಳನ್ನು ಜೀರ್ಣಿಸಿಕೊಳ್ಳುತ್ತಿದ್ದಳೇನೋ. ಕೆಲಹೊತ್ತಿನ ಮೇಲೆ ಏನೋ ಹೊಳೆದವರಂತೆ ಚಟ್ಟನೆ ಕೇಳಿದಳು.

" ಈ ಮನೋವೃತ್ತಿ ಗಂಡಸಿಗಿಂತ ಹೆಣ್ಣಿನಲ್ಲಿಯೇ ಬಹಳ ಇರುವಂತಿದೆ."

" ಗಂಡಸರಲ್ಲಿ ಅದು ಇನ್ನೊಂದು ರೂಪದಲ್ಲಿ ವ್ಯಕ್ತವಾಗುತ್ತದೆ. ಹೆಣ್ಣಿನಲ್ಲಿ ಸೌಂದರ್ಯ ಆಕರ್ಷಕ ವಸ್ತುವಾಗಿದ್ದರೆ ಗಂಡಸಿಗೆ ವ್ಯಕ್ತಿತ್ವ ಮೆಚ್ಚಿಕೆಯ ವಿಷಯ ವಾಗಿರುತ್ತದೆ. ಯೋಗ್ಯಕಾಲದಲ್ಲಿ ಆ ವ್ಯಕ್ತಿತ್ವಕ್ಕೆ ಅವಕಾಶ ದೊರೆಯದೆ ಅದು ಮುದುರಿದಂತಾಗಿ ಬಿಟ್ಟರೆ ಅವನ ವ್ಯಕ್ತಿತ್ವವಷ್ಟೇ ಅಲ್ಲ ಜೀವನವೇ ಅರ್ಥ

ಹೀನವಾಗಿ ಪರಿಣಮಿಸುತ್ತದೆ. ಅಂಥ ಮನುಷ್ಯ ಭಾವನಾಶೀಲನಾಗಿದ್ದರೆ– ಹುಚ್ಚು ಹಿಡಿಯುವದು, ಆತ್ಮಹತ್ಯ ಮಾಡಿಕೊಳ್ಳುವದು, ಕ್ರಿಮಿನಲ್ ಆಗಿ ಪರಿಣಮಿಸುವದು ಇವುಗಳಲ್ಲಿ ಒಂದಾದರೂ ಘಟಿಸಲೇಬೇಕು."

"ಒಟ್ಟಿನಲ್ಲಿ ನೀವು ಸಾಧಿಸುತ್ತಿರುವದು ಮನುಷ್ಯನಿಗೆ 'ಅಹಂ' ಯಾವಾಗಲೂ ಮೊದಲನೆಯ ಸಂಗತಿ ಎಂದಲ್ಲವೆ? ಹಿಂದೂ ವೇದಾಂತಕ್ಕೆ ತೀರ ವಿರುದ್ಧವಾದದ್ದು."

"ನಿಮ್ಮ ಭಗವದ್ಗೀತೆಯಲ್ಲಿ 'ಸ್ಥಿತಿಪ್ರಜ್ಞ' ನೆಂದರೆ ಲಾಭ–ಹಾನಿ, ಸುಖ–ದುಃಖ, ಮಾನ–ಅಪಮಾನ, ಹೊಗಳಿಕೆ–ತೆಗಳಿಕೆ ಇವನ್ನೆಲ್ಲ ಸರಿಯಾಗಿ ಕಾಣುವವನು ಎಂದಿದೆಯಲ್ಲ. ಅಂಥದೊಂದು ಸಮಾಜಕಲ್ಪಿಸಿಕೊಳ್ಳಿ. ಅಂಥ ಜಗತ್ತಿನಲ್ಲಿ ಜೀವನ ಎಂಬುದೇ ಶಕ್ಯವಿರಲಿಲ್ಲ. ಕೃಷ್ಣ ಬಹಳ ಬುದ್ಧಿವಂತನಾಗಿದ್ದನು. ಅವನಿಗೆ ಗೊತ್ತು ಆ ತೆರನ ಮನುಷ್ಯನಿರುವದು ಶಕ್ಯವಿಲ್ಲವೆಂದು, ಜೀವನ ಇರುವದು ಶಕ್ಯವಿಲ್ಲವೆಂದು. ಅಂತೆಯೇ ಸುಖವಾಗಿ ಹೇಳಿಬಿಟ್ಟನು. ಅಂಥ ವ್ಯಕ್ತಿ ತನ್ನ ಅಂದರೆ ದೇವರ ಸಮಾನ ಎಂದು. ಎಂಥ ಮೋಸ, ನೋಡಿ. ಮನುಷ್ಯ ಈ 'ಸ್ಥಿತಪ್ರಜ್ಞ' ತತ್ವದಿಂದ ಎಷ್ಟು ದೂರ ಇರುತ್ತಾನೋ ಅಷ್ಟು ಜಗತ್ತು ಮುಂದೆ ಹೋಗಲು ಸಾಧ್ಯ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು ಶತ್ರುಗಳಲ್ಲ–ಜೀವನದ ಮೂಲ ಧಾತುಗಳು."

"ನೀವು ಶುದ್ಧ ನಾಸ್ತಿಕರು. ನಿಮ್ಮ ತತ್ವ ಪುರಸ್ಕರಿಸಲಿಕ್ಕೆಂದೇ ಆಟಂ ಬಾಂಬು ತಯಾರಾಯಿತು."

"ಒಪ್ಪುತ್ತೇನೆ. ಆದರೆ ಆಟಂ ಬಾಂಬು ಯಾವಾಗ ತಯಾರಾಯಿತು? ನಿಮಗಾಗಿ ಆಸ್ಟಿನ್ ಕಾರು ಸಿದ್ಧವಾಯಿತು, ವಿಮಾನ ಬಂದಿತು, ರೇಲ್ವೆಗಳು ಬಂದವು, ಏಅರ್ ಕಂಡೀಷನ್ಡ್ ಮನೆಗಳು ಸಿದ್ಧವಾದವು, ರೆಫ್ರಿಜರೇಟರ್ ಶೋಧವಾಯಿತು, ಟೆಲಿವ್ಹಿಜನ್ ಬಂದಿತು; ಇಷ್ಟೆಲ್ಲದರ ನಂತರ ಮೆಶಿನ್‌ಗನ್ನು, ಟಿಯರ್ ಗ್ಯಾಸು, ಆಟಂ ಬಾಂಬುಗಳು ಬಂದವು. ತಾವಡೇಕರ್, ಮನುಷ್ಯ ಇನ್ನೂ ಬಹಳ ಕಲಿಯಬೇಕಾಗಿದೆ, ಬಹಳ ಮರೆಯಬೇಕಾಗಿದೆ, ಬಹಳ ನಾಶ ಹೊಂದಬೇಕಾಗಿದೆ, ಬಹಳ ಉದ್ಧಾರ ಹೊಂದಬೇಕಾಗಿದೆ. ಅದಕ್ಕೆ ಸ್ಥಿತಪ್ರಜ್ಞನ ನಿರ್ಲಿಪ್ತತೆ ಉಪಯೋಗವಿಲ್ಲ, ಶಕ್ಯವೂ ಇಲ್ಲ."

ರಮೇಶ ಒಮ್ಮೆಲೆ ಮಾತು ನಿಲ್ಲಿಸಿ ದೂರದ ಕ್ಷಿತಿಜ ರೇಷೆಯನ್ನು ನಿಟ್ಟಿಸ ತೊಡಗಿದನು.

ಆತನಿಗೆ ತನ್ನ ವಿರುದ್ಧ ತಾನೇ ಸೇಡು ತೀರಿಸಿಕೊಳ್ಳುತ್ತಿದ್ದಂತೆನಿಸಿತು. ಜೀವನ ಎಂದರೆ ಕರ್ತವ್ಯ ಎಂದರಿತಿದ್ದ ತನ್ನ ತಂದೆಯಿಂದ ಅವನು ಕಲಿತ ಒಂದೇ ಒಂದು ಸಂಗತಿಯೆಂದರೆ ಹೇಗೆ ದುಃಖಿತನಾಗದಿರುವದು ಎಂದು. ಜೀವನದ ನಿರಾಶಾಮಯ ಬೆಂಕಿಯಲ್ಲಿ ಹುರುಪಳಿಸಿ ಹೋಗದೆ ಉಳಿದು ಕೊಂಡಿರುವದು ಹೇಗೆ ಎನ್ನುವ ವಿದ್ಯೆ. ಅಷ್ಟರ ನಂತರ ಅವನೇನು ಸುಖ ಕಂಡಿದ್ದಾನೆ ?

ನಿಜ, ಮುನ್ನೂರಾ ಐವತ್ತು ರೂಪಾಯಿ ವೇತನ ಸಿಗುತ್ತಿದೆ, ಮ್ಯಾನೇಜರ್‌ನೆನ್ನುವ ಮರ್ಯಾದೆ ಇದೆ, ಉಳಿಯಲು ಮಹಡಿ ಮಹಲಿನ ಸುಸಜ್ಜಿತ ಕೋಣೆಗಳಿವೆ, ತಿರುಗಾಡಲು ಕಾರಿದೆ. ಆದರೆ ಇವೆಲ್ಲವುಗಳಿಂದ ಈವರೆಗೆ ಅವನು ಅನುಭವಿಸಿದ ಸುಖದ ತೂಕ ಎಷ್ಟಾಗಬಹುದು! 'ಸ್ಥಿತಪ್ರಜ್ಞತೆಯ' ವಿರುದ್ಧ ತನ್ನಂಥವರಿಂದಲ್ಲದೆ ಮತ್ತಾರಿಂದ ವಾದ ಬರ ಬೇಕು!

"ಏನು ಬಹಳ ವಿಚಾರಕ್ಕೆ ಬಿದ್ದುಬಿಟ್ಟಿರಿ ?"

ಎಂದು ಅವನ ವಿಚಾರ ಮೌನವನ್ನು ಭೇಧಿಸಿದಳು ಕಿರಣ.

"ಹಾಂ? ಏನಿಲ್ಲ. ಪಾರ್ಕು ನಿರ್ಜೀವವಾಗುತ್ತ ಬಂತು. ಥಟ್ಟನೆ ಕಮಲಾ ನೆಹರೂಳ ದೆವ್ವ ಬಂದು ಎದುರಿಗೆ ನಿಂತುಬಿಟ್ಟರೆ ಏನು ಮಾಡೋಣ ಎಂದು ವಿಚಾರಿಸುತ್ತಿದ್ದೆ. ವೇಳೆಯ ಲೆಕ್ಕವಿದೆಯೆ ?"

ಇಬ್ಬರೂ ಎದ್ದು ಬಂದು ಕಾರಿನಲ್ಲಿ ಕುಳಿತರು. ರಮೇಶ ಕಾರು ನಡೆಸ ತೊಡಗಿದನು.

೧೬

ಕಾರಿನ ವೇಗದೊಡನೆ ಅವನ ವಿಚಾರ ಶಕ್ತಿಯೂ ಕೆಲದಿನಗಳ ಹಿಂದೆ ನಡೆದ ಫ್ಯಾಕ್ಟರಿಯ ಒಂದು ಸಂಗತಿಯ ಸುತ್ತ ಸುತ್ತತೊಡಗಿತು. ಕಾರಖಾನೆಯಲ್ಲಿ ರೆಬೆಲೋ ಅನ್ನುವ ಕ್ರಿಶ್ಚಿಯನ್ನ ಗ್ರಹಸ್ತರೊಬ್ಬರು ಮೆಕೆನಿಕಲ್ ಎಂಜಿನಿಯರರು ತುಂಬ ತಮಾಶೆಯ ಸ್ವಭಾವದವರಾಗಿದ್ದರು. ದಿನದ ಎಂಟು ತಾಸೂ ಅಕ್ಕಪಕ್ಕದವರೊಡನೆ ಕೂಲಿಕಾರರು, ಫೋರ್‌ಮನ್ನರು ಎನ್ನುವದನ್ನು ಲೆಕ್ಕಿಸದೆ ಯಾವಾಗಲೂ ಹಾಸ್ಯಮಾಡುತ್ತ ನಗುತ್ತ ನಗಿಸುತ್ತಿರುವದು ಅವರ ಪದ್ಧತಿ. ಕಡೆಗೆ ಟೀಕೆಗೆ ಗುರಿಯಾಗಿ ಯಾರು ಸಿಗದಿದ್ದರೆ ತಮ್ಮ ವಿಷಯವಾಗಿಯೇ ಏನಾದರೂ ಕೊಂಕು ನುಡಿದು ಬದಿಗಿದ್ದವರನ್ನು ನಗಿಸುತ್ತಿದ್ದರು. ಹತ್ತಿರಿದ್ದವರ ಮನೆ, ಮನೆಯವರ ವಿಷಯವೆತ್ತಿಕೊಂಡು ಟೀಕೆಗೆ ಆರಂಭಿಸುತ್ತಿದ್ದರು.

"ಏ ಸಖಾರಾಮ ಬಂಡೂ, ಮೊನ್ನೆ ಹೆಂಡತಿ ಹಡೆದಳು ಅಂತ ಸುಳ್ಳೇ ಮೂರು ದಿನ ರಜ ಗಿಟ್ಟಿಸಿದ್ಯಲ್ಲ."

"ಸುಳ್ಳು ಯಾಕ್ರೀ, ಸಾಹೇಬ. ಮನ್ಯಾಗ ನೋಡಬರ್ರಿ."

"ಅಲ್ಲಲೇ, ನೀ ನ್ಯಾಟ್‌ಶಿಫ್ಟ್‌ಗೆ ಬರಲಿಕ್ಕ ಹತ್ತಿ ಈಗ ವರ್ಷದ ಮೇಲಾತು. ಮನೇಲಿ ತಮ್ಮ, ತಮ್ಮನ ಹೆಂಡತೀನೂ ಇದ್ದಾರೆ ಅಂತಿದ್ದಿ. ಮತ್ತ ವ್ಯಾಟನಿಗೆ ಯಾವಾಗೋ ಟ್ಯಾಂ ಸಿಕ್ತು ನಿನಗೆ?"

ಸುತ್ತಲಿನ ಕೂಲಿಕಾರರೆಲ್ಲ ಗಹಗಹಿಸಿ ನಗುವಾಗ ಖಂಡೂನ ಮೋರೆ ಹೊಸದಾಗಿ ಲಗ್ನವಾದ ಹೆಣ್ಣಿಗಿಂತ ಹೆಚ್ಚು ಕೆಂಪಾಗುತ್ತಿತ್ತು.

ಅವರ ಈ ತಮಾಶಿ ವೃತ್ತಿಯನ್ನು ಯಾವಾಗಲೂ ನೋಡುತ್ತಿದ್ದ ರಮೇಶ ಒಂದು ದಿನ ಅಂದಿದ್ದನು,

"ನಿಮ್ಮನ್ನು ನೋಡಿ ಅಸೂಯೆ ಆಗುತ್ತಿದೆ, ರೆಬೆಲೊ. ಜಗತ್ತಿನಲ್ಲಿ ನಿಮಗಿಂತ ಹೆಚ್ಚು ಸುಖಿಗಳಾಗಿರುವವರು ಯಾರೂ ಇರಲಿಕ್ಕಿಲ್ಲ."

ರೆಬೆಲೋ ರಮೇಶನ ಮೋರೆಯನ್ನು ಕ್ಷಣಕಾಲ ನಿರೀಕ್ಷಿಸಿ ನುಡಿದಿದ್ದರು,

"ನೀವು ದೊಡ್ಡ ಮನಸ್ಸು ಮಾಡಿದರೆ ಈ ದಿನ ಸಂಜೆ ನಮ್ಮನೆಗೆ ಚಹಕ್ಕೆ ಅತಿಥಿಯಾಗಲು ಕೇಳಿಕೊಳ್ಳುತ್ತೇನೆ. ಬರುತ್ತೀರಿತಾನೆ?"

ರಮೇಶ ಆ ದಿನ ರೆಬೆಲೋರ ಮನೆಯಲ್ಲಿ ನೋಡಿದುದು ಜೀವನದ ಕಟುಸತ್ಯದ ಒಂದು ಅತ್ಯಂತ ದಯನೀಯ ಉದಾಹರಣೆಯಾಗಿತ್ತು. ಅವರ ಹಿರೇಹುಡುಗ ಟ್ಯಾಫ್ಯಾಡಿನಿಂದ ನರಳುತ್ತ ಮುಂದಿನ ಖೋಲಿಯಲ್ಲಿ ಮೂಲೆಯ ಹಾಸಿಗೆಯ ಮೇಲೆ ಮಲಗಿದ್ದನು. ಬಾಗಿಲ ಹತ್ತರ ಒಂದೊಂದು ವರ್ಷದಿಂದ ಹಿರಿಯವರಾದ ಮೂರು ಮಕ್ಕಳು ಕಿರಚುತ್ತಿದ್ದರು. ಕಂಕುಳಲ್ಲಿ ಇನ್ನೊಂದು ಗುಬ್ಬಿಯನ್ನಿಟ್ಟುಕೊಂಡು ರೆಬೆಲೋನ ಹೆಂಡತಿ ಕಷ್ಟದಿಂದ ಕಲ್ಲಿನ ನೆಲವನ್ನು ಉದ್ದತೊಡಗಿದ್ದಳು.

ಕಿಟಕಿಯ ಹತ್ತಿರ ಇದ್ದ ಒಂದೇ ಒಂದು ಮೇಜಿನ ಬಳಿಯ, ಒಂದೇ ಒಂದು ಕೈ ಮುರಿದ ಕುರ್ಚಿಯಲ್ಲಿ ರಮೇಶನನ್ನು ಕುಳಿರಿಸಿ ರೆಬೆಲೋ 'ಜೆನಿ!' ಎಂದು ಒದರಿದನು.

೨೨ ವರ್ಷದ ತರುಣಿಯೊಬ್ಬಳು ಉಟ್ಟಿದ್ದ ಸೀರೆಯೆಂಬ ತುಂಡಿಗೆ ಕೈ ಒರೆಸಿಕೊಳ್ಳುತ್ತ ಒಳಗಿನ ಅಡಿಗೆ ಮನೆಯಿಂದ ಹೊರಗೆ ಬಂದವಳು, ಅಪರಿಚಿತ ನನ್ನು ನೋಡಿ ಚಟ್ಟನೆ ಬಾಗಿಲು ಮರೆಯಲ್ಲಿ ಮರೆಯಾದಳು. ಅವಳಿಗೆ ಎರಡು ಕಪ್ಪು ಚಹ ಮಾಡ ಹೇಳಿ ರೆಬೆಲೋ ಹೇಳಿದರು,

"ಆಕೆ ನನ್ನ ಹಿರೇ ಹುಡುಗಿ. ಅವಳ ನಂತರದ ಮೂರು ಮಕ್ಕಳು ತೀರಿ ಕೊಂಡಿದಾರೆ. ಆಕೆಯ ರೀತಿ ನೋಡಿ ನಮ್ಮಲ್ಲಿ ಪರದೆ ಸಿಸ್ಟಮ್ ಇದೆ ಎಂದು ತಿಳಿಯ ಬೇಡಿರಿ. ತನ್ನ ವೇಷ ನೋಡಿ ನೀವು ಅಂಜಬಾರದಂತ ಹಾಗೆ ಲಕ್ಷ ಗೊಟ್ಟು ಮರೆಯಾದಳು. ಇಲ್ಲದಿದ್ದರೆ ಅವಳು ಸಂಡೇ ಡ್ರೆಸ್ಸು ಹಾಕಿಕೊಂಡಾಗ

ನಿಮ್ಮ ಕೈಮಾತ್ರವಲ್ಲ, ಹೃದಯವನ್ನೂ ಕುಲುಕಿ ನಿಮ್ಮಿಂದ ಚುಂಬನ ಪಡೆಯದೆ ಇರುವದಿಲ್ಲ."

ರೆಬೆಲೋರ ಗಹಗಹಿಸುವ ನಗೆ ರಮೇಶನ ತುಟಿಯಲ್ಲಿ ಮೂಡಲಿಲ್ಲ. ಎಂಥ ಸುಂದರ ಹೂ ಬಾಡಿ ಬಸವಳಿಯುತ್ತಿದೆ ಅನ್ನಿಸಿತು ಅವನಿಗೆ. ಚಹ ಕುಡಿಯುತ್ತ ರೆಬೆಲೋ ಹೇಳಿದ್ದರು,

"ಆಗಲೇ ಫ್ಯಾಕ್ಟರಿಯಲ್ಲಿ ಹೇಳಿದ ಮಾತಿಗೆ ಇದು ಉತ್ತರ ಸರ್. ಏನೆಂತ ನೀವೇ ನಿರ್ಣಯಿಸಿಕೊಳ್ಳಿ."

ಅಷ್ಟು ತಡವಾಗಿಯಾದರೂ ಚೌಪಾಟಿಯ ತುಂಬ ಅಲ್ಲಿ ಇಲ್ಲಿ ಇನ್ನೂ ಜನ ನೆರೆದೇ ಇದ್ದರು. ಅವರನ್ನು ನೋಡಿದ ರಮೇಶನ ಬಾಯಿಂದ ತಾನಾಗಿಯೇ ಎಂಬಂತೆ ಮಾತು ಬಂದಿತು—

"ಹೊರಗಿನ ಈ ಜೀವನಕ್ಕೂ, ನಿಜವಾದ ಜೀವನಕ್ಕೂ ಎಷ್ಟು ಅಂತರ!"

"ಎಷ್ಟು ?"

ರಮೇಶನ ಭಾವನಾಮಯ ಮಾತಿಗೆ ಉತ್ತರಿಸಿದಳು ಕಿರಣ.

"ಸುಖವಾಗಿ, ಮೃದುವಾಗಿ ಕ್ರೀಡಿಸುತ್ತಿರುವ ಈ ಸಾಗರದ ಅಲೆಗಳಿಗೂ, ಪ್ಯಾಸಿಫಿಕ್ ಮಹಾ ಸಾಗರದ ತಳದ ಗಂಭೀರ, ಗಭೀರ ನೀರಿಗೂ ಇರುವಷ್ಟು"

"ನೀವು ಫಿಲಾಸಫಿ ಪ್ರೊಫೆಸರ್ ಆಗಬೇಕಾಗಿತ್ತು."

"ವಿಲ್ಸನ್ ಕಾಲೇಜಿನಲ್ಲಿಯೇ ಆಗಿದ್ದರೆ ಕಾಲೇಜಿನ ಹುಡುಗಿಯೊಬ್ಬಳನ್ನು ಪ್ರೊಫೆಸರರು ಲಗ್ನವಾದರು ಅಂತ ಕೆಟ್ಟ ಹೆಸರು ಬರುತ್ತಿತ್ತು."

"ಅಂಥ ಯಾವ ಕಾಲೇಜು ಹುಡುಗಿ ನಿಮ್ಮನ್ನು ಲಗ್ನವಾಗುವವಳು ?"

"ಪ್ರೊಫೆಸರ್‌ರ ಫಿಲಾಸಫಿಯನ್ನು ಮೆಚ್ಚುವವಳು."

"ನಾನೇನೂ ನಿಮ್ಮ ಫಿಲಾಸಫಿ ಮೆಚ್ಚುತ್ತೇನೆ ಎಂದು ತಪ್ಪಿ ಸಹ ಹೇಳಲಿಲ್ಲವಲ್ಲ."

"ನಾನೇನೂ ನಿಮ್ಮನ್ನು ಲಗ್ನವಾಗುತ್ತೇನಂತ ಮರೆತೂ ನುಡಿದಿಲ್ಲವಲ್ಲ."

"ಸಾಕು ರಸ್ತೆಯ ಕಡೆಗೆ ನೋಡಿ"

" ಎನ್ನುತ್ತ ಕಿರಣ ತಾನೇ ಕಾಲಿನಿಂದ ಬ್ರೇಕ್ ಒತ್ತಿದಳು. ಲೆಮಿಂಗ್ಟನ್ ಕ್ರಾಸ್ ರೋಡಿನಲ್ಲಿ ಕ್ಲಿಯರನ್ಸ್‌ಗಾಗಿ ಕಾಯುತ್ತಿದ್ದ ಕಾರುಗಳ ಸಾಲಿಗೆ ಢಿಕ್ಕಿ ಹೊಡೆಯುತ್ತಿದ್ದ ಕಾರು ಕುಂಯ್ ಎನ್ನುತ್ತ ನಿಂತಿತು. ಮುಂದಿನ ಕಾರು ಹೊರಟ ನಂತರ ಮತ್ತೆ ಎಕ್ಸಲರೇಟರ್ ಒತ್ತುತ್ತ ರಮೇಶ ಹೇಳಿದ,

" ವಿಜ್ಞಾನಿಗಳು ಇಷ್ಟೆಲ್ಲ ಶೋಧ ಮಾಡುತ್ತಿದ್ದಾರೆ. ಆದರೆ ಪಕ್ಕಕ್ಕೆ ನೋಡುತ್ತ ಎದುರಿಗೆ ಕಾರು ನಡೆಸುವ ಡಿವ್ಯಾಸ್ ಯಾರೂ ಶೋಧ ಮಾಡಲಿಲ್ಲ. ಹೋಗಲಿ, ನಿಮ್ಮನ್ನು ಎಲ್ಲಿ ಇಳಿಸಲಿ ?"

" ಕಾರು ನಿಮ್ಮದೇ ಅನ್ನುವ ಹಾಗೆ ಮಾತಾಡುತ್ತಿದ್ದೀರಲ್ಲ !"

" ಹಾಂ, ಮರೆತಿದ್ದೆ. ನಾನೆಲ್ಲಿ ಇಳಿಯಲಿ ಹೇಳಿ. ಇಲ್ಲಿಯೇ ಇಳಿದರೆ ಫೋರ್ಟಿಗೆ ಹೋಗುವ ಬಸ್ಸು ಹಿಡಿಯಬಹುದು."

" ಊಹುಂ, ನನಗೆ ಮುಂಬಯಿಯ ರಸ್ತೆಯೆಲ್ಲ ಚನ್ನಾಗಿ ಗೊತ್ತಿಲ್ಲ. ಅದಕ್ಕೆ ದಾದರದಲ್ಲಿಯೇ ಬಿಟ್ಟು ಅಲ್ಲಿಂದ ರೈಲು ಹತ್ತಿಹೋಗಿರಿ."

ದಾದರ ಸ್ಟೇಶನ್‌ದ ಹತ್ತರ ಕಾರು ಬಂದು ನಿಂತಿತು. ಕಿರಣ ಕೇಳಿದಳು,

" ಮನೆಯಲ್ಲೇನು ಹೇಳುತ್ತೀರಿ ?"

" ಹೇಳುತ್ತೇನೆ; ಹಾಗೆಯೇ ಒಂದು ಹುಡುಗಿ ಓಡಿಸಿಕೊಂಡು ಒಯ್ದಿದ್ದಳು ಅಂತ."

" ನನ್ನ ಹೆಸರು ಮಾತ್ರ ಹೇಳಬೇಡಿರಿ."

" ಏಕೆ ?"

" ನಾನು ಯಾವದೋ ಪಾರ್ಟಿಗೆ ಹೋಗಿದ್ದುದು ನಿಜವಾಗಬೇಕಲ್ಲ."

" ಅದು ಲಾಲಾನಿಗೇನೂ ಗೊತ್ತಿಲ್ಲವಲ್ಲ ?....ಹಾಂ ! ಹಾಗಾದರೆ....?"

" ಹೌದು, ಆಗಲೇ ಫೋನಿನಲ್ಲಿ ಬ್ಯಾಡ್‌ಮಿಂಟನ್ ಆಡಲು ಕರೆದವರು ಲಾಲಾ."

" ಬಹಳ ಅನ್ಯಾಯ ಮಾಡಿದಿರಿ, ತಾವಡೇಕರ್ "

" ಯಾರಿಗೆ ? ಲಾಲಾನಿಗೇ ?"

" ಅಲ್ಲ, ನನಗೆ. ಹೀಗಾಗಬಾರದಾಗಿತ್ತು. ಅಚ್ಛಾ ನಮಸ್ಕಾರ "

ಎಂದು ಹೇಳಿ ರಮೇಶ ಮತ್ತೆ ನಿಲ್ಲದೆ ಹೊರಟುಬಿಟ್ಟನು. ಕಿರಣ

ಕಾರಿನಲ್ಲಿ ಕುಳಿತುಕೊಂಡೇ ಅಂಥದೇನು ಅವಾಂತರ ನಡೆಯಿತೆಂದು ಅಚ್ಚರಿ ಪಡುತ್ತ ರಮೇಶ ಕಣ್ಮರೆಯಾಗುತ್ತಿದ್ದುದನ್ನೇ ನೋಡುತ್ತಿದ್ದಳು.

ಆತ ತಿರುಗಿ ನೋಡಿದರೆ ಕೈಯಾಡಿಸಿ ಮುಗುಳುನಗೆಯ ಸಂದೇಶ ಕಳಿಸುವ ಎಂದುಕೊಂಡಿದ್ದಳು. ಆದರೆ ರಮೇಶ ಮುಖ ತಗ್ಗಿಸಿ ಸರಸರನೆ ಸ್ಟೇಶನ್ ಬ್ರಿಜ್ಜನ್ನು ಏರುತ್ತಿದ್ದುದು ಮಾತ್ರ ಕಾಣಿಸಿತು.

## ೧೭

" ಅಂತೂ ಬಂದು ಮುಟ್ಟಿದೆಯಲ್ಲ. ಗಂಟೆ ಎಂಟೂವರೆಯಾಯಿತು."

ಕಾರಿನ ಕೀಲಿ ಹಾಕಿ ಸರಸರನೆ ಮೆಟ್ಟಲೇರಿ ಬರುತ್ತಿದ್ದ ಕಿರಣನನ್ನು ನೋಡಿ ಬಾಗಿಲಲ್ಲಿಯೇ ನಿಂತಿದ್ದ ಅವಳ ಅತ್ತಿಗೆ ಹೇಳಿದಳು.

" ಏಕೆ? ಬರುವದಿಲ್ಲವೆಂದು ಆಶೆ ಬಿಟ್ಟಿದ್ದಿರೇನು ?"

" ಹಾಗೇನಿಲ್ಲ, ಆದರೆ ನೀನು ಬರಲಿ ಎಂದು ಊಟ ಮಾತ್ರ ಬಿಟ್ಟಿದ್ದೆವು "

ಕುರ್ಚಿಯೊಂದರಲ್ಲಿ ಕುಳಿತು ಏನೋ ಪತ್ರಿಕೆ ಓದುತ್ತಿದ್ದ ಕಿರಣಳ ಅಣ್ಣ ನುಡಿದನು.

" ನೋಡು ವೈನಿ, ನನಗಾಗಿ ಎಂದೂ ಕಾಯಬೇಡಿರಿ ಎಂದು ಇಪ್ಪತ್ತು ಸಾರೆ ಹೇಳಿದ್ದೇನೆ."

" ಮಾವ ಬಂದಿದ್ದಾನೆ. ಅದಕ್ಕೆ ಎಲ್ಲರೂ ಕೂಡಿಯೇ ಊಟ ಮಾಡುವ ಎಂದು ಕುಳಿತೆವು "

" ಮಾವ ! ಎಲ್ಲಿ ?"

" ಬಂದೆನವ್ವ, ಬಂದೆ."

ಎನ್ನುತ್ತ ನೆರೆಮನೆಗೆ ಹೋಗಿದ್ದ ಕಿರಣಳ ಸೋದರ ಮಾವ ಭಾವೂ ಸಾಹೇಬರು ಒಳಗೆ ಬಂದರು.

" ಏನು, ಮಾವ ? ಬರುತ್ತೇನೆ ಅಂತ ಒಂದು ಪತ್ರಾನೂ ಬರೆಯ ಬಾರದೆ ?"

"ಒಮ್ಮೆಲೇ ಬರುವ ಪ್ರಸಂಗ ಬಂತು. ಬಂದುಬಿಟ್ಟೆ. ನಿನಗೆ ತಿಳಿಸಿ, ಯಾರನ್ನಾದರೂ ಕಟ್ಟಿಕೊಂಡು ಸಿನೇಮ, ಮ್ಯಾಚು ಅಂತ ಓಡಾಡುತ್ತಿರುವವಳಿಗೆ, ಏಕೆ ತೊಂದರೆ ಕೊಡಬೇಕು ಅನ್ನಿಸಿತು."

"ಹೋ, ದೊಡ್ಡ ಉದಾರ ಬುದ್ಧಿ. ಈಗ ಎಲ್ಲಾನೂ ಬಿಟ್ಟುಬಿಟ್ಟದೀನಿ, ಮಾವ. ಎಲ್ಲಿಗೂ ಹೋಗುವದಿಲ್ಲ."

"ಮನೆಯಲ್ಲಿಯೂ ಇರೋದಿಲ್ಲ."

ಕಿರಣನ ಅಣ್ಣ ಶ್ರೀಪತರಾಯರು ನುಡಿದರು,

"ಆಗಲೇ ಪಾರ್ಟಿ ಎಂದೆಯಲ್ಲ. ಅದರ ನಂತರ ನಿನ್ನ ಮಿತ್ರವರ್ಗದಿಂದ ಐದಾರು ಫೋನ್‌ಕಾಲ್‌ಗಳು ಬಂದವು. ಎಲ್ಲರೂ ನಿನ್ನನ್ನು ಕೇಳುವವರೇ. ಒಬ್ಬರಿಗೂ ಈ ಭಾರಿ ಪಾರ್ಟಿಯ ಅರಿವು ಇದ್ದ ಹಾಗಿರಲಿಲ್ಲ."

"ಪಾರ್ಟೀನೂ ಇಲ್ಲ, ಏನೂ ಇಲ್ಲ. ನಮ್ಮನೇ ದೇವರ ಗುಣ ನನಗೆ ಗೊತ್ತಿಲ್ಲವೆ? ಎಲ್ಲಿಯೋ ಸಿನೇಮಾಕ್ಕೆ ಹೋಗಿ, ತಿರುಗಾಡಿ ಬಂದಿದಾಳೆ. ಯಾರೇ ಅದು ಅಷ್ಟು ಹತ್ತಿರದ ಫ್ರೆಂಡು?"

"ಅಂಥ ಇನ್‌ಕನ್‌ವ್ಹೀನಿಯಂಟ್ ಪ್ರಶ್ನೆಗಳನ್ನೆಲ್ಲ ಕೇಳಬಾರದು, ಮಾವ. ಹೀಗೇ ಒಬ್ಬರು."

"ನೋಡು, ಅಚ್ಚ್ಯುತ – ಹೇಗೆ ತಪ್ಪಿಸುತ್ತಾಳೆ. ಈ ಹುಡುಗೀನ ಹೀಗೆಯೇ ಬಿಟ್ಟರೆ ತೀರ ಕೀಲಾಡಿಯಾಗಿಬಿಡುತ್ತಾಳೆ. ಇನ್ನೂ ಕೂಸು ಅಂತ ತಿಳಿದಿರಬೇಡ. ಬೇಗ ಒಂದು ಲಗ್ನಮಾಡಿಬಿಡಬೇಕು. ಕಡೆಗೆ ಬೇಕಾದರೆ ಕಾಲೇಜಿಗೆ ಹೋಗಿಕೊಳ್ಳಲಿ."

"ನನ್ನದೇನು ಮಾವ? ಅಪ್ಪ ಸಾಯಬೇಕಾದರೆ ಅವಳ ಕೂದಲು ಸಹ ಕೊಂಕದಂತೆ ನೋಡಿಕೊಳ್ಳಪ್ಪ-ಎಂದು ಹೇಳಿದ್ದಾನೆ. ಎಲ್ಲ ಆಕೆಯ ಮೇಲೆಯೇ ಬಿಟ್ಟದ್ದೇನೆ. ಆಕೆ ಹೇಗೆ ಹೇಳಿದರೆ ಹಾಗೆ. ಒಂದು ರೀತಿಯಿಂದ ಗಂಡನನ್ನೂ ಹುಡುಕಿ ಆಗಿದೆ."

"ಯಾರಣ್ಣ?"

"ನೋಡು ಹೇಗೆ ಕಿವಿ ನೆಟ್ಟಗಾಯಿತು. ಈ ಹುಡುಗಿಯರದೆಲ್ಲ ಢೋಂಗು."

"ಅಣ್ಣ, ಯಾರು, ಹೇಳಲಿಲ್ಲ?"

" ಹೀಗೇಯೇ ಒಬ್ಬರು. ಮೊದಲಿನ ಅಕ್ಷರ 'ಶ'ದಿಂದ ಆರಂಭವಾಗುತ್ತದೆ"

" ಇಲ್ಲದ ಒಗಟು ಹೇಳಬೇಡ. ನನಗೇನೂ ಅಷ್ಟು ಹೆಸರು ಕೇಳುವ ಲವಲವಿಕೆ ಇಲ್ಲ."

" ಯಾರೋ ಅದು ಶ್ರೀಪತಿ ?"

" ಆಗಲೇ ಅವರ ವಿಷಯ ಮಾತಾಡುತಿದ್ದೆವಲ್ಲ. ಚಿತಳೆ ಕಂಪನಿಯ ಶೇಖರ. ತುಂಬ ಒಳ್ಳೆಯ ಮನುಷ್ಯರು ಮಾವ. ಇಷ್ಟು ಎಳೆಯ ವಯಸ್ಸಿನಲ್ಲಿಯೇ ತಂದೆಯ ಬಿಸಿನೆಸ್ಸನ್ನು ಸಾಗಿಸಿಕೊಂಡು ಹೋಗುವದಲ್ಲದೆ ಬಹಳ ಬೆಳಿಸಿ ಕೊಂಡಿದ್ದಾರೆ. ಈವತ್ತೇ ಮಧ್ಯಾಹ್ನ ಅವರ ತಾಯಿ ಇಲ್ಲಿಗೆ ಬಂದಿದ್ದರು. ನಮ್ಮಿಬ್ಬರದೂ ಬಹಳ ಹಿಂದಿನ ಗೆಳೆತನ. ಬಹಳ ಒಳ್ಳೆಯ ಮನೆತನ. ಕಿರಣಳಂತೂ ದಿನ ಎರಡು ದಿನಕ್ಕೊಮ್ಮೆ ಅಲ್ಲಿ ಹೋಗದೆ ಇರುವದೇ ಇಲ್ಲ. ಒಂದು ಲೆಕ್ಕದಿಂದ ಅವಳೇ ಆರಿಸಿಕೊಂಡಿದ್ದಾಳೆ ಅನ್ನಬೇಕು."

" ಲವ್ ಮ್ಯಾರಿಜ್ ಅನ್ನುತ್ತಾರಲ್ಲ, ಅಂಥದು ತಾನೇ ? ಹಾಗಾದರೆ ಈ ವರ್ಷ ಬೇಸಿಗೆಯಲ್ಲಿ ಎಲ್ಲ ಮುಗಿಸಿಬಿಡುವ....ಏಕೆ, ಕುಮಾರಿಯವರು ಒಮ್ಮೆಲೇ ಗಂಭೀರರಾದಿರಿ ?"

" ನಾನು ನಿಮಗೆಲ್ಲ ಭಾರವಾಗಿದ್ದೇನಣ್ಣ ?"

ಕಿರಣಳ ದನಿಯ ರೀತಿ ಕೇಳಿ ಮೂವರೂ ಅಚ್ಚರಿಗೊಂಡು ನುಡಿದರು.

" ಎಂಥ ಮಾತು ಕಿರಣ ? ಹಾಗೆಲ್ಲ ಆಡಬಾರದು "

ನೊಂದ ದನಿಯಲ್ಲಿ ಸರೋಜ, – ಕಿರಣಳ ಅತ್ತಿಗೆ – ನುಡಿದಳು.

" ಹಾಗಾದರೆ ಹೀಗೆ ನನ್ನ ಲಗ್ನದ ವಿಷಯ ಮಾತಾಡಬೇಡಿರಿ. ಆಗ ಬೇಕೆಂದು ಕಂಡಾಗ ನಾನೇ ಹೇಳುತ್ತೇನೆ. ಇನ್ನೆರಡು ವರ್ಷವಂತೂ ಆ ವಿಚಾರ ಮಾಡುವದಿಲ್ಲ."

" ಲಗ್ನವಾಗದಿದ್ದರಿಲ್ಲ. ಆದಾಗ ಲಾಲಾನನ್ನೇ ಆಗುವದಂತೂ ನಿಶ್ಚಯ ತಾನೆ ? ಈಗಲೇ ಮಾತುಕಥೆ ಮುಗಿಸಿಬಿಡೋಣ."

ಎಂದು ಶ್ರೀಪತಿ ಖಚಿತ ಅಭಿಪ್ರಾಯ ಪಡೆಯಲು ಹವಣಿಸಿದ.

" ಅಣ್ಣ, ಎರಡು ವರ್ಷಗಳಲ್ಲಿ ಏನೇನಾಗುತ್ತದೋ ಹೇಳಬರುವದಿಲ್ಲ. ಬಹುಶಃ ಮೂರನೇ ಯುದ್ಧ ಆರಂಭವಾಗಬಹುದು. ಅದಕ್ಕೆ ಈಗ ಯಾವ ಮಾತೂ ಬೇಡ."

" ನೋಡು ಮಾವ, ಒಳ್ಳೇ ಅನುಭವಿಗಳಂತೆ ಹೇಳುತ್ತಿದ್ದಾಳೆ. ಅವಳು ಹೇಳಿದ ಹಾಗೆಯೇ ಮಾಡುವ. ನಮಗೇನು ? ಆಕೆ ನಮ್ಮ ಮಾತು ಯಾವಾಗ ಕೇಳಿದ್ದಳು ?"

" ಭಾವ ಇದ್ದಾಗಲೂ ಅವಳಿಗೆ ಒಂದು ಬಿಸಿ ಮಾತು ಆಡುತ್ತಿರಲಿಲ್ಲ. ಎಲ್ಲ ತಾನೇ ತಿಳಿದುಕೊಳ್ಳುತ್ತಾಳೆ ಅಂತ ಬಿಟ್ಟುಬಿಡುತ್ತಿದ್ದರು. ಅಷ್ಟು ವಿಶ್ವಾಸವಿತ್ತು ಕಿರಣನ ಮೇಲೆ."

ಎಂದರು ಭಾವೂ ಹಳೆಯದನ್ನು ನೆನೆದು.

" ಆ ವಿಶ್ವಾಸವನ್ನು ಇಲ್ಲಿಯವರೆಗಂತೂ ಸುಳ್ಳು ಮಾಡಲಿಲ್ಲವಲ್ಲ. ಮುಂದೆಯೂ ಮಾಡದಿರಲೆಂದು ಆಶೀರ್ವಾದಮಾಡಿ, ಮಾವ. ಅಷ್ಟು ಸಾಕು."

ಅಷ್ಟರಲ್ಲಿ 'ಮಾಡಿದ್ದೆಲ್ಲ ಆರಿಹೋಯಿತು' ಎನ್ನುತ್ತ ದಾರಿಕಾಯ್ದು ಬೇಸತ್ತ ಅಡಿಗೆಯವ ಬಂದು ಹೇಳಿದನು. ಕೆಳಗೆ ಕುಳಿತು ತಿನ್ನುವ ಪದ್ಧತಿ ಕಿರಣಳ ತಂದೆಯ ಕಾಲದಲ್ಲಿಯೇ ಮಾಯವಾಗಿ ಟೇಬಲ್ಲು, ಕುರ್ಚಿ, ಚಮಚ, ಮುಳ್ಳುಗಳು ಬಂದಿದ್ದವು. ಪುರಿಯನ್ನು ಹರಿಯುತ್ತ ಕಿರಣ ಕೇಳಿದಳು,

" ತಿಳಿಸದೇನೇ ಬರುವಷ್ಟು ಅರ್ಜಂಟ್ ಆದ ಕೆಲಸ ಮುಂಬಯಿಯಲ್ಲಿ ಏನಿತ್ತು ಅನ್ನುವದನ್ನು ಹೇಳಲಿಲ್ಲವಲ್ಲ ?"

" ಏನೋ ಸಣ್ಣ ವ್ಯವಹಾರದ ಕೆಲಸವಿತ್ತು. ನಿನ್ನ ಈ ಚಿತಳೆ ಕಂಪನಿಗೇ ಸೇರಿದ್ದು. ಇಲ್ಲಿಯ ಸೇಠ್‌ಮಂಗಲ ದಾಸನ ಕಬ್ಬಿಣ ಕಾರಖಾನೆಯಲ್ಲಿ ಹೋದ ವರ್ಷ ನಾವೂ ಅರ್ಧ ಶೇರುಗಳನ್ನು ಕೊಂಡಿದ್ದೆವಲ್ಲ. ಅಲ್ಲಿಯ ಕೂಲಿಕಾರರು ಈ ಸಾರೆ ತಮಗೆ ಬೋನಸ್ಸು ಕೊಡದಿದ್ದರೆ ಮುಷ್ಕರ ಹೂಡುವೆವಾಗಿ ನೋಟೀಸು ಕೊಟ್ಟಿದ್ದಾರಂತೆ. ಕಬ್ಬಿಣದ ಬಿಸಿನೆಸ್‌ದಲ್ಲಿ ಬೋನಸ್ಸಿನ ಗಡಬಡೆ ಯನ್ನೆಬ್ಬಿಸಿದವರು ಮೊದಲು ಈ ಚಿತಳೆ ಕಂಪನಿಯವರು. ಯಾವದೋ ಮಾಹುಲಿಕರ ಅಂತ ಮ್ಯಾನೇಜರ್ ಇದ್ದಾನಂತಲ್ಲ. ಅವನು ದೀಪಾವಳಿಗೆ ಬೋನಸ್ಸು ಕೊಡುತ್ತೇವೆ ಎಂದು ಪ್ರಕಟಿಸಿದ ಮೇಲೆ ನಮ್ಮ ಫ್ಯಾಕ್ಟರಿಯ ಜನರು ತಮಗೂ ಬೇಕು ಎಂದು ಪಟ್ಟುಹಿಡಿದು ಕುಳಿತಿದ್ದಾರೆ. ಶ್ರೀಪತಿಗೂ ಈ ಶೇಖರನಿಗೂ ಗುರುತು ಪರಿಚಯ ಇದೆಯಾದ್ದರಿಂದ ನಾನು ಇಲ್ಲಿ ಬಂದು ಮಾತಾಡಿ ಹೊಸದಾಗಿ ಆರಂಭವಾದ ಈ ಬೋನಸ್ಸು ಗಡಬಡೆಯನ್ನು ನಿಲ್ಲಿಸ ಬೇಕೆಂದು ಮಂಗಲದಾಸನ ಪತ್ರ ಬಂದಿತ್ತು. ಆಗಲೇ ನಿನ್ನಣ್ಣ ಚಿತಳೆ

ಕಂಪನಿಯ ಒಡೆಯರಿಗೆ ಫೋನುಮಾಡಿ ಕೇಳಿಯೂ ಆಯಿತು. ಅವರಿಗೆ ನಮ್ಮ ವಿರುದ್ಧ ಹೋಗುವ ಇಚ್ಛೆ ಏನೂ ಇಲ್ಲ. ತಮ್ಮ ಮ್ಯಾನೇಜರರನ್ನು ಕೇಳಿಕೊಂಡು ಇಷ್ಟರಲ್ಲಿ ಬರುತ್ತೇನೆ ಎಂದಿದಾರೆ."

"ನಿಮಗಾದರೂ ಅಷ್ಟು ಬೋನಸ್ಸು ಹಂಚಿದರೆ ಏನು ಕಡಿಮೆಯಾಗುತ್ತದೆ ಮಾವ?"

"ಅದೆಲ್ಲ ವ್ಯವಹಾರ ಕಿರಣ. ಇಲ್ಲಿಯವರೆಗೆ ಇಲ್ಲದ್ದನ್ನು ಈಗ ಸರಕುಗಳಿಗೆ ಬೆಲೆ ಬಂದಿದೆ ಎಂದು ಏಕೆ ಆರಂಭಮಾಡಬೇಕು. ನಿನಗೆ ಈ ಕೂಲಿಕಾರರ ವಿದ್ಯೆ ಗೊತ್ತಿಲ್ಲ. ಒಮ್ಮೆ ಸಡಿಲುಬಿಟ್ಟರೆ ಕಡೆಯವರೆಗೂ ಬೋನಸ್ಸು ಪಡೆಯುವದು ತಮ್ಮ ಜನ್ಮಸಿದ್ಧ ಹಕ್ಕು ಎಂದು ತಿಳಿದುಬಿಡುತ್ತಾರೆ. ನಾಳೆ ಚಟ್ಟನೆ ವ್ಯವಹಾರ ಮುಗ್ಗರಿಸಿತೆಂದರೆ ದಿವಾಳಿ ಹತ್ತುವ ಪ್ರಸಂಗ. ಮೇಲಾಗಿ ಮಂಗಲದಾಸರು ಹೊಸದಾಗಿ ಫ್ಯಾಕ್ಟರಿ ತೆಗದದ್ದರಿಂದ ತುಂಬ ಸಾಲಮಾಡಿದ್ದಾರೆ. ಅದೆಲ್ಲ ತೀರಬೇಕಲ್ಲ."

"ಈ ಮಾಹುಲಿ ನಿನಗೆ ಗೊತ್ತಿದೆಯೆ, ಕಿರಣ? ಹಿಂದೊಮ್ಮೆ ಲಾಲಾ ಅನ್ನುತ್ತಿದ್ದ ತನ್ನ ಮ್ಯಾನೇಜರು ಬಹಳ ಬುದ್ಧಿವಂತ, ಹಾಗೆ ಹೀಗೆ ಅಂತ. ಆದರೆ ಈ ಬುದ್ಧಿವಂತಿಕೆ ಲಾಲಾನ ದಿವಾಳಿ ಹತ್ತಿಸುತ್ತದೆ. ಅವನೂ ಲಕ್ಷ ಕೊಡುವದಿಲ್ಲ."

ಎಂದು ಸಲಹೆಯ ಧ್ವನಿಯಲ್ಲಿ ಶ್ರೀಪತಿರಾಯ ಹೇಳಿದ.

ಕಿರಣಳಿಗೆ ನಗೆ ಬಂತು. ರಮೇಶ ನಡೆಸಿಕೊಂಡು ಹೋಗುತ್ತಿದ್ದ ಲಾಲಾನ ವ್ಯವಹಾರದ ರೀತಿ ಆಕೆಗೆ ಚನ್ನಾಗಿ ತಿಳಿದಿತ್ತು. ಹಣದ ಮೇಲಿನ ರಮೇಶನ ಹಿಡಿತವನ್ನು ಆಕೆ ಅರಿಯದಿರಲಿಲ್ಲ. ರಮೇಶ ಬಂದಂದಿನಿಂದ ಲಾಲಾನ ವ್ಯವಹಾರ ನೂರಕ್ಕೆ ನೂರೈವತ್ತರಷ್ಟಾದರೂ ಹೆಚ್ಚಾಗಿದ್ದಿತು. ಆಕೆ ಏನೋ ಹೇಳುವವಳಿದ್ದಳು. ಅಷ್ಟರಲ್ಲಿ ಹೊರಗೆ ಹಾರ್ನಿನ ಸಪ್ಪಳವಾಯಿತು. ನಾಲ್ವರಿಗೂ ತಮ್ಮ ಊಟ ಮುಗಿದಿದೆ ಎನ್ನುವ ಎಚ್ಚರಿಕೆ ಬಂದಿತು. ಲಗುಬಗನೆ ಕೈತೊಳೆದುಕೊಂಡು ಒಳಗೆ ಬರುತ್ತಿದ್ದ ಶೇಖರ – ರಮೇಶರನ್ನು ಸ್ವಾಗತಿಸಲು ಸಿದ್ಧರಾದರು.

ಶ್ರೀಪತರಾವ್ ಲಾಲಾನನ್ನೂ ತನ್ನ ಮಾವನನ್ನೂ ಪರಸ್ಪರ ಪರಿಚಯ

ಮಾಡಿಕೊಟ್ಟನು. ಲಾಲಾ ರಮೇಶನ ಪರಿಚಯವನ್ನು ಇಬ್ಬರಿಗೂ ಮಾಡಿ ಕೊಟ್ಟರು. ಲಾಲಾ ಹೇಳಿದನು,

"ಈ ಬೋನಸ್ಸಿನ ವಿಷಯ ಎಲ್ಲ ನಮ್ಮ ಮ್ಯಾನೇಜರರ ಕಾರುಭಾರು. ಅವನ 'ಇನ್‌ಕ್ರೀಸಿಂಗ್ ರಿಟರ್ನ್ಸ್' ಥೆಅರಿ, ಹೆಚ್ಚು ಉತ್ಪನ್ನ ಬರುವ ಅರ್ಥ ಶಾಸ್ತ್ರದ ಸಿದ್ಧಾಂತ, ನನಗಂತೂ ಅರ್ಥವಾಗಲಿಲ್ಲ. ಅದಕ್ಕೆ ನೀವು ನೀವೇ ಮಾತಾಡಿಕೊಳ್ಳಲಿ ಎಂದು ಅವನನ್ನೆ ಕರೆದುಕೊಂಡು ಬಂದುಬಿಟ್ಟೆ."

ಶ್ರೀಪತರಾಯರೇ ಮಾತನ್ನಾರಂಭಿಸಿದರು,

"ನೋಡಿ ಮಿ. ಮಾಹುಲಿ. ಪುಸ್ತಕಗಳ ಥೆಅರಿಗೂ ವ್ಯವಹಾರಕ್ಕೂ ಬಹಳ ಅಂತರ ಇದೆ ಎನ್ನುವದನ್ನು ನೀವು ಈವರೆಗಿನ ನಿಮ್ಮ ಅನುಭವದಿಂದ ತಿಳಿದುಕೊಂಡಿರಬಹುದು. ಬಿಸಿನೆಸ್ ಅಂದರೆ ಒಂದು ದೊಡ್ಡ ಫ್ಯಾಕ್ಟರಿಯ ಒಂದು ಯಂತ್ರ ಇದ್ದಂತೆ. ಅದು ಹೇಗೆ, ಯಾವ ರೀತಿ ನಡೆಯಬೇಕು ಅನ್ನುವದು ಇನ್ನುಳಿದ ಯಂತ್ರಗಳ ಗತಿಯ ಮೇಲಿಂದ ನಿರ್ಣಯವಾಗಬೇಕು. ಮೊದಲು ಎಲ್ಲಿಯೂ ಇಲ್ಲದ ಈ ಬೋನಸ್ಸು ಬಿಸಿನೆಸ್ಸನ್ನ ನೀವು ಹೊಸದಾಗಿ ಆರಂಭಿಸಿಬಿಟ್ಟಿರಿ. ಅದರಿಂದ ಉಳಿದ ನಿಮ್ಮ ಸೋದರ ವ್ಯವಹಾರಿಗಳ ಮೇಲೆ ಯಾವ ಪರಿಣಾಮವಾಗುತ್ತದೆ ವಿಚಾರ ಮಾಡಲಿಲ್ಲ."

"ಹೀಗೆ ಜನರಲ್ಯಾಸ್ ಮಾಡುವದು ಬೇಡ, ಸರ್. ಬೋನಸ್ಸು ಪ್ರಕಟಿಸುವಾಗ ಮಂಗಲದಾಸ್ ಕಂಪನಿಯ ಚೀಫ್ ಆರ್ಗನೈಸರ್‌ರನ್ನೂ ಒಂದು ಮಾತು ಕೇಳಿದ್ದೆ. ಅವರ ಮಾತಿನ ಮೇಲಿಂದ ಬೋನಸ್ಸು ಕೊಡಲಾರದಂಥ ಯಾವ ಸ್ಥಿತಿಯೇನೂ ಕಂಪನಿಗೆ ಬಂದಿಲ್ಲವೆಂದು ತಿಳಿಯಿತು. ನಾಗಪುರದಲ್ಲಿ ನಾಳಿನ ಕ್ರಿಸ್‌ಮಸ್‌ಕ್ಕೆ ಅವರದೊಂದು ಬ್ರಾಂಚು ತೆರೆಯುತ್ತದೆ ಎಂದು ಕೇಳಿದೆ. ಬ್ರಾಂಚು ತೆರೆಯುವಷ್ಟು ಹಣಗಳಿಸಬಲ್ಲಾದವರು ತಮ್ಮ ವರ್ಕರ್ಸ್‌ಗೆ ಸ್ವಲ್ಪ ಬೋನಸ್ಸು ಕೊಡಬಲ್ಲರು ಎಂದು ನನ್ನ ಕಲ್ಪನೆ"

ಎಂದು ರಮೇಶ ವಾದ ಹೂಡಿದ.

"ಬೋನಸ್ಸಿಗೂ ಬ್ರಾಂಚ್ ತೆಗೆಯುವದಕ್ಕೂ ಯಾವ ಸಂಬಂಧವೂ ಇರುವದಿಲ್ಲ. ಪ್ರಶ್ನೆ ಇಷ್ಟೆ. ಇಲ್ಲಿಯವರೆಗಿಲ್ಲದುದನ್ನು ನಾವಾಗಿ ಏಕೆ ಮೈಮೇಲೆ ತಂದುಕೊಳ್ಳಬೇಕು? ಏನು ಮಾಡಿದರೂ ಈ ತಲೆತಿರುಕ ಯೂನಿಯನ್‌ದವರ

ಕಿರಿಕಿರಿ ತಪ್ಪುವದಿಲ್ಲ. ಈ ಹೊತ್ತು ಬೋನಸ್ಸು ಸಿಕ್ಕರೆ ನಾಳೆ ಮತ್ತೇನನ್ನಾದರೂ ಕೇಳಬಹುದು. ಮಾರುಕೊಟ್ಟರೆ ಮನೆನುಂಗುವ ಜನ ಇವರು."

"ಕ್ಷಮಿಸಿ, ಸರ್. ನನ್ನ ಇಲ್ಲಿಯವರೆಗಿನ ಅನುಭವದಿಂದ ನನಗೇನೂ ಕೂಲಿಕಾರರಿಂದ ಆ ಭಯವಿಲ್ಲವೆಂದು ಎದೆತಟ್ಟ ಹೇಳಬಲ್ಲೆ. ಶಹರದಲ್ಲಿಯ ಇನ್ನೊಂದು ಕಂಪನಿಗೆ ಇನ್ನೊಂದು ಬ್ರಾಂಚ್ ತೆಗೆಯಲು ಅನುವಾಗುವದಿಲ್ಲ ವೆಂದು ನಮ್ಮ ಕಾರಖಾನೆಯಲ್ಲಿ ಬೋನಸ್ಸು ನಿಲ್ಲಿಸುವ ಅವಶ್ಯಕತೆ ನನಗಂತೂ ಕಾಣಿಸುವದಿಲ್ಲ."

ರಮೇಶನ ಕಟ್ಟುನಿಟ್ಟಿನ ದನಿಗೆ ಚಕಿತರಾಗಿ ಭಾವೂ ಸಾಹೇಬರು ಶ್ರೀಪತರಾಯರನ್ನು ನೋಡಿದರು. ಆತ ಶೇಖರನನ್ನು ನೋಡಿದನು. ಎಲ್ಲರನ್ನೂ ನೋಡುತ್ತ 'ಎಂಥ ಗಮ್ಮತ್ತು!' ಎಂದು ನಗುತ್ತಿದ್ದ ಕಿರಣನನ್ನು ಮಾತ್ರ ಯಾರೂ ನೋಡಲಿಲ್ಲ. ಲಾಲಾಗೆ ತಾನೀಗ ಏನಾದರೂ ಮಾತಾಡಬೇಕು ಅನ್ನಿಸಿತು. ಹೇಳಿದನು,

"ನೋಡು, ರಮೇಶ. ಇನ್ನಾವ ಕಂಪನಿಯ ವಿಷಯವಾಗಿಯಾದರೂ ನಿನ್ನ ಮಾತು ನಿಜವಾಗಿತ್ತು. ಶ್ರೀಪತರಾಯರ ಮಾವಂದಿರ ಅನುಕೂಲತೆಯ ಪ್ರಶ್ನೆ ಇದೆ."

"ವ್ಯವಹಾರದಲ್ಲಿ ಇದನ್ನೆಲ್ಲ ವಿಚಾರ ಮಾಡಬೇಕಾಗುತ್ತದೆ ಎಂದು ಕೊಂಡಿರಲಿಲ್ಲ, ಸರ್."

"ನೋಡು, ನಿನಗಿನ್ನೂ ನಮ್ಮಿಬ್ಬರ ಮನೆತನದ ಸಂಬಂಧ ತಿಳಿದಿಲ್ಲ. ನಮ್ಮ ಹಿರಿಯರಿಂದಲೂ ನಮಗೂ ಇವರಿಗೂ ತುಂಬ ಗೆಳೆತನ. ನೋಡಿ, ಶ್ರೀಪತರಾವ್ ಇವನಿಗಿನ್ನೂ ನಮ್ಮಿಬ್ಬರ ಸಂಬಂಧದ ಕಲ್ಪನೆಯಿಲ್ಲ. ಅವನು ಹೇಳಿದ್ದನ್ನು ನೀವು ಕ್ಷಮಿಸಬೇಕು. ಏನೋ ಕೂಲಿಕಾರರ ಸಣ್ಣ ಬೋನಸ್ಸಿನ ವಿಷಯಕ್ಕೆ ನಮ್ಮ ಅಮೂಲ್ಯ ಸಂಬಂಧವನ್ನು ಕಲುಷಿತವಾಗಿಸುವದೆ? ಆ ಬೋನಸ್ಸಿನ ವಿಷಯ ನಾಳೆಯೇ ನಿಲ್ಲಿಸಿಬಿಡು, ರಮೇಶ."

ಲಾಲಾನ ಮಾತು ಯಾರನ್ನುದ್ದೇಶಿಸಿ ಎಂದು ರಮೇಶನಿಗೆ ತಿಳಿಯ ದಿರಲಿಲ್ಲ. ಆತ ಕಿರಣನತ್ತ ನೋಡಿದನು. ಆಕೆ ಮುಸುಕು ಬೆಳದಿಂಗಳಲ್ಲಿ ಹೊರಗಿನ ಹೂದೋಟದಲ್ಲಿ ಅರಳಿ ಬಾಡಿದ್ದ ಗುಲಾಬಿ ಹೂವೊಂದರ ಬಣ್ಣವನ್ನು ನಿರ್ಧರಿಸುವವರಂತೆ ಕಿಟಕಿಯಾಚೆ ನಿಟ್ಟಿಸುತ್ತ ಕುಳಿತಿದ್ದಳು.

ಲಾಲಾನ ವಿಷಯಕ್ಕೆ ಒಂದು ಕ್ಷಣ ರಮೇಶನಲ್ಲಿ ಎಲ್ಲಿಲ್ಲದ ಜಿಗುಪ್ಸೆ ಉಂಟಾಯಿತು. ಶ್ರೀಮಂತಿಕೆಯಲ್ಲಿ ಎಂಥ ಸ್ವಾರ್ಥ ತುಂಬಿಕೊಂಡಿದೆ ಎಂದು ಕೊಂಡನು. ಕೂಲಿಕಾರರ ವಿಷಯದಲ್ಲಿ ಅಲ್ಲಿಯವರೆಗೆ ರಮೇಶ ಹೇಗೆ ನಡೆದು ಕೊಂಡಿದ್ದರೂ ಲಾಲಾ ತುಟಿ ಪಿಟ್ ಎಂದಿರಲಿಲ್ಲ. ಆದರೆ ಕಿರಣನ ಮನೆ ಯವರು ತನ್ನ ವಿಷಯ ಬೇಸರಪಟ್ಟುಕೊಳ್ಳಬಹುದೆಂದು, ಆಗಲೇ ಜಾಹೀರು ಪಡಿಸಿದ್ದ ಬೋನಸ್ಸನ್ನೂ ನಿಲ್ಲಿಸಲು ಸಿದ್ಧನಾಗಿದ್ದನು! ಇವರ ಈ ಕ್ಷುಲ್ಲಕ, ಸುಳ್ಳು ಭಾವನೆಗಾಗಿ ನೂರಾರು ಜನರ ಮನೆಯಲ್ಲಿ ಉಂಟಾಗುತ್ತಿರಬಹುದಾದ ದೀಪಾವಳಿಯ ಆನಂದೋತ್ಸಾಹಗಳ ಮೇಲೆ ನೀರು ಸುರುವಿದಂತಾಯಿತು. ಮಧ್ಯೆ ಮ್ಯಾನೇಜರ್‌ನಾಗಿದ್ದ ತನ್ನ ಮರ್ಯಾದೆಯ ವಿಚಾರವನ್ನೂ ಮಾಡಲಿಲ್ಲ! ಎಂಥ ದೊಡ್ಡಸ್ತಿಕೆ ಎಂದುಕೊಂಡನು.

ರಮೇಶನ ಮೌನವನ್ನು ಸಮ್ಮತಿ ಸೂಚಕವಾಗಿ ಗ್ರಹಿಸಿ ಮಾತೆಲ್ಲ ಮುಗಿಯಿತೆಂಬಂತೆ ಲಾಲಾ ಹೇಳಿದನು.

"ಹಾಗಾದರೆ, ಬಾವೂ ಸಾಹೇಬ, ಮಾತು ಮುಗಿದಂತಾಯಿತಲ್ಲ. ನೀವು ಇಲ್ಲಿಯವರೆಗೆ ಬರುವ ತೊಂದರೆ ವಹಿಸದೆ ಶ್ರೀಪತರಾಯರಿಗೆ ಒಂದು ಪತ್ರ ಬರೆದಿದ್ದರೂ ನಾನು ಅದರಂತೆ ವ್ಯವಸ್ಥೆ ಮಾಡಿಸುತ್ತಿದ್ದೆ. ಇಂಥ ವಿಷಯ ಗಳಲ್ಲೆಲ್ಲ ನಾವು ಒಬ್ಬರಿಗೊಬ್ಬರು ಒದಗದಿದ್ದರೆ ಗೆಳೆತನವಿದ್ದುದೇತಕ್ಕೆ? ನೋಡಿ ನಾಳೆ ನಮ್ಮ ಮನೆಯವರೆಗೂ ಬರುವ ಕೃಪೆಮಾಡಬೇಕು. ಶ್ರೀಪತರಾಯರು ಬಂದರಂತೂ ಬಹಳ ಚನ್ನಾಯಿತು. ಇಲ್ಲದಿದ್ದರೆ ಕಿರಣ ಅಂತೂ ಇದ್ದಾರಲ್ಲ. ಅವರಿಗೆ ನಮ್ಮ ಮನೆಯ ಮೂಲೆ ಮೂಲೆಯೂ ಗೊತ್ತಿದೆ."

ತನ್ನ ಹೆಸರು ಕೇಳಿ ಆಗಲೇ ಎಚ್ಚತ್ತವರಂತೆ ಕಿರಣ ಹೇಳಿದಳು,

"ಮಾವ, ನಿನ್ನೊಡನೆ ಬ್ರಿಜ್ ಆಡದೆ ಬಹಳ ದಿನವಾಯಿತು. ಹೇಗೂ ನಾಲ್ಕು ಜನ ಇದ್ದೇವೆ."

ಎಲ್ಲರೂ ಸಮ್ಮತಿಸಿದರು. ಆದರೆ ರಮೇಶನಿಗೆ ಅಲ್ಲಿ ನಿಲ್ಲುವದೂ ಬೇಡ ವಾಗಿತ್ತು. ಕುಳಿತಲ್ಲಿಂದ ಏಳುತ್ತ ಹೇಳಿದನು,

"ಕ್ಷಮಿಸಿ, ನನಗೆ ಈ ಸುಖದ ಯೋಗವಿದ್ದಂತೆ ಕಾಣುವದಿಲ್ಲ. ತುರ್ತಾದ ಕೆಲಸವಿದೆ."

"ಏನು ಕೆಲಸ? ಈ ರಾತ್ರಿಯೇ ಕೂಲಿಕಾರರ ಮನೆಮನೆಗೆ ಹೋಗಿ

ನಿಮ್ಮ ಬೋನಸ್ಸು ನಿಲ್ಲಿಸಲಾಗಿದೆ ಎಂದು ಹೇಳಬೇಕೇನು ? ನಾಳೆ ಬೇಕಾದಷ್ಟು ವೇಳೆ ಇದೆ. ಬನ್ನಿ, ನೀವು ನನ್ನ ಪಾರ್ಟ್ನರ್. ದೊಡ್ಡ ಮನುಷ್ಯರು ಹೇಳಿದ ಹಾಗೆ ಕೇಳಬೇಕು."

ಆಟ ಮುಗಿದಾಗ ಬೆಳಗಿನ ನಾಲ್ಕು ಗಂಟೆಯಾಗಿತ್ತು.

ಶ್ರೀಪತರಾವ್ ಲಾಲಾನನ್ನು ಅಲ್ಲಿಯೇ ಮಲಗಿಕೊಳ್ಳಲು ಒತ್ತಾಯ ಪಡಿಸಿದರು. ಆ ಕರೆ ರಮೇಶನಿಗೂ ಬಂದಿತು. ಆದರೆ ಅದರಲ್ಲಿಯ 'ಉಪಚಾರ' ರಮೇಶನಿಗೆ ತಿಳಿಯದಿರಲಿಲ್ಲ. ಅವನಿಗೆ ಮಲಗಿಕೊಳ್ಳುವ ವ್ಯವಧಾನವೂ ಇರಲಿಲ್ಲ.

ಅವರ ಆಮಂತ್ರಣಕ್ಕೆ ಆಭಾರ ಮನ್ನಿಸಿ, ತುಂಬ ಕೆಲಸವಿದೆಯೆಂದು ಹೇಳಿ ಎದ್ದುಬಿಟ್ಟನು. ಎಲ್ಲವನ್ನೂ ನೋಡುತ್ತಿದ್ದ ಕಿರಣಳಿಗೆ ನಗೆ ತಡೆಯ ಲಾಗಲಿಲ್ಲ; ಗಟ್ಟಿಯಾಗಿ ನಕ್ಕುಬಿಟ್ಟಳು.

"ಏನಾಯಿತೇ ಅಷ್ಟೆಲ್ಲ ನಗಲಿಕ್ಕೆ ?"

ಅಣ್ಣಾ ಕೇಳಿದನು.

"ಏನಿಲ್ಲ; ನಿದ್ದೆ ಬಂದುಬಿಟ್ಟಿತ್ತು ಕಣ್ತುಂಬ. ಕೋಣೆಯ ವರೆಗೆ ಹೋಗಲಾದರೂ ಎಚ್ಚರಾಗಿರಲಿ ಅಂತ ನಕ್ಕುಬಿಟ್ಟೆ. ಅಚ್ಛಾ, ಗುಡ್ ಮಾರ್ನಿಂಗ್ ಮಿ. ಮಾಹುಲಿ. ಹಾದಿಯಲ್ಲಿ ಇರಾಣಿ ಹೊಟೆಲ್ ಹತ್ತಿದರೆ ಸಿಂಗಲ್ ಚಹ ಸುರುವಿಕೊಂಡೇ ಹೋಗಿರಿ."

ರಮೇಶ ಕ್ಷಣಕಾಲ ಕಿರಣನನ್ನು ನೋಡಿದನು. 'ನಿನ್ನ ಆದರ್ಶ ನೋಡು. ನೀನು ಜೀವಿಸುತ್ತಿದ್ದ ಜೀವನ ನೋಡು' ಎಂದು ಹಾಸ್ಯಮಾಡು ತ್ತಿರುವಂತಿತ್ತು ಆಕೆಯ ಚಂಚಲ ದೃಷ್ಟಿ. ಅಲ್ಲಿಂದ ಸರಸರನೆ ಹೊರಟುಬಿಟ್ಟನು.

"ನನ್ನ ಕಾರು ಬೇಕಾದರೆ ಒಯ್ದು ಬಿಡು ರಮೇಶ"

ಎಂದು ಲಾಲಾ ಹೇಳಿದ್ದು ಬಹುಶಃ ಅವನಿಗೆ ಕೇಳಿಸಲಿಲ್ಲವೇನೋ.

# ೧೮

ರಮೇಶ ಫ್ಯೋರ್ಟಿಗೆ ಬಂದಾಗ ಐದಾಗುತ್ತ ಬಂದಿತ್ತು. ನಿದ್ದೆ ಬರುವಂತೇನೂ ಕಾಣಲಿಲ್ಲ. ಆ ಬೋನಸ್ಸಿನ ವಿಚಾರ ಏನು ಮಾಡಬೇಕೆಂದು ಯೋಚಿಸುತ್ತ ಆಫೀಸಿನ ತನ್ನ ಖೋಲಿಗೆ ಹೋಗಿ ಕುಳಿತು ಬಟ್ಟೆಬರೆಗಳ ರೂಪದಲ್ಲಿಯಾದರೂ ಕೂಲಿಕಾರರ ಬೋನಸ್ಸು ಸಲ್ಲಿಸಬೇಕೆಂದು ನಿಶ್ಚಯಿಸಿದನು.

ರಾತ್ರಿ ಬರೆದು ಸಿದ್ಧಪಡಿಸಬೇಕೆಂದಿದ್ದ ಒಂದು ರಿಪೋರ್ಟಿನ ಫೈಲು ಟೇಬಲ್ ಮೇಲೆ ಕಾದು ಕುಳಿತಿತ್ತು. ರಮೇಶನ ಹೇಳಿಕೆಯಂತೆ ಶೇಖರ ಭಾರತ ಬ್ಯಾಂಕಿನ ಒಂದು ನಾಲ್ಕಾಂಶವಷ್ಟು ಶೇಅರುಗಳನ್ನು ಕೊಂಡು ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರ್‌ರೊಳಗೆ ಒಬ್ಬನಾಗಿದ್ದನು. ಬ್ಯಾಂಕಿನ ವಾರ್ಷಿಕ ಕಾನ್‌ಫರೆನ್ಸ್ ಆ ದಿನ ಮಧ್ಯಾಹ್ನ ಕೂಡುವದರಲ್ಲಿತ್ತು. ಬ್ಯಾಂಕಿನ ವಾರ್ಷಿಕ ಆಯವ್ಯಯದ ರಿಪೋರ್ಟನ್ನು ಶೇಖರ ಸಿದ್ಧಮಾಡಿ ಕಂಪನಿಯ ಪರವಾಗಿ ರಮೇಶ ಓದಬೇಕಾಗಿತ್ತು. ಶೇಖರನ ಪರವಾಗಿ ಸಿದ್ಧತೆಯನ್ನೂ ರಮೇಶನೇ ಈಗ ಮಾಡಬೇಕು. ಓದುವುದಂತೂ ಅವನೇ. ವ್ಯವಹಾರದ ಮರ್ಮಗಳಲ್ಲಿ ಇದೂ ಒಂದು. ಅದಿನ್ನೂ ಸಿದ್ಧವಾಗಿರಲಿಲ್ಲ.

ಹತ್ತೂವರೆಯ ಹೊತ್ತಿಗೆ ರಿಪೋರ್ಟು ಸಿದ್ಧವಾದಾಗ ರಮೇಶನಿಗೆ ಕೆಟ್ಟ ತಲೆ ಸಿಡಿತ ಬಂದಿತ್ತು. ದೇಹದಲ್ಲೆಲ್ಲ ನಿಶಃಕ್ತಿ ಅನಿಸುತ್ತಿದ್ದಿತು.

ಆದರೆ ವಿಶ್ರಾಂತಿ ಪಡೆಯುವಂತಿರಲಿಲ್ಲ. ಕೂಪರೇಜ್‌ದ ಹತ್ತಿರ ಇದ್ದ

ಬ್ಯಾಂಕಿನ ಕಾನ್‌ಫರೆನ್ಸ್ ಹಾಲಿಗೆ ಹೋಗಿ ರಿಪೋರ್ಟನ್ನು ಚೀಫ್ ಡೈರೆಕ್ಟರರಿಗೆ ಒಪ್ಪಿಸಬೇಕಾಗಿತ್ತು.

ಅಲ್ಲಿ ಚೀಫ್ ಡೈರೆಕ್ಟರ್ ಶಾಂತಿಕುಮಾರ್ ಪಹೇಲಿಯಾ ಬೇರೆಯೇ ಚಿಂತೆಯಲ್ಲಿ ಮುಳುಗಿದ್ದರು. ಒಂದು ಘಂಟೆಗೆ ಶೆಅರ್‌ಹೋಲ್ಡರ್ಸ್ ಮತ್ತು ಪತ್ರಿಕಾಕರ್ತರ ಮುಂದೆ ಅವರು ಕೊಡಲಿದ್ದ ವಿಚಾರಾತ್ಮಕ, ಸುಶ್ರಾವ್ಯ ಭಾಷಣವಿನ್ನೂ ತಯಾರಾಗಿರಲಿಲ್ಲ. ಅವರ ಸೆಕ್ರೆಟರಿ ಮೂರು ದಿನದಿಂದ ಜ್ವರದಿಂದ ನರಳುತ್ತಿದ್ದವನು ಮತ್ತೆರಡು ದಿನದ ರಜೆಯ ಚೀಟಿ ಕಳಿಸಿದ್ದನು. ರಮೇಶನನ್ನು ನೋಡಿ ಪಹೇಲಿಯಾ ದಯನೀಯವಾಗಿ ಹೇಳಿಕೊಂಡರು.

“ನೋಡಿ ಮಿ. ಮಾಹುಲಿರಾವ್, (ದಕ್ಷಿಣ ಹಿಂದುಸ್ಥಾನದ ಬಹಳಷ್ಟು ಹೆಸರುಗಳಿಗೆ ಮರ್ಯಾದಾರ್ಥವಾಗಿ ‘ರಾವ್’ ಪದವಿ ಹಚ್ಚುತ್ತಾರೆ ಎಂದು ಕಂಡುಕೊಂಡಿದ್ದ ಈ ಲಕ್ಷಾಧೀಶರ ಲಕ್ಷಾಧೀಶ ಪಾರ್ಸಿ ಪ್ರಿಮೆಟ್ರಿಕ್ ಮನುಷ್ಯ ರಮೇಶನಿಂದ ತನ್ನ ಕೆಲಸವಾಗಬೇಕಾದ್ದರಿಂದ ಅಡ್ಡ ಹೆಸರಿಗೂ ‘ರಾವ್’ ಗಿರಿ ಹಚ್ಚುವ ಬುದ್ಧಿವಂತಿಕೆ ಖರ್ಚುಮಾಡಿದ್ದನು!) ನನ್ನ ಸೆಕ್ರೆಟರಿ ಮೋಸ ಮಾಡಿಬಿಟ್ಟನು. ಈಗ ನೀವೊಂದು ಲೆಕ್ಚರ್ ಬರೆದುಕೊಡದಿದ್ದರೆ ಈವತ್ತಿನ ಎನ್ಯುಅಲ್ ಮೀಟಿಂಗೇ ನಡೆಯಲಾರದು. ಅಷ್ಟು ತೊಂದರೆ ವಹಿಸುತ್ತೀರಿ ತಾನೆ?”

ರಮೇಶ ವಾಚು ನೋಡಿಕೊಂಡನು. ೧೧॥ ಆಗಿತ್ತು. ತಲೆ ಸಿಡಿತ ವಂತೂ ಒಂದೇಸಮನೆ ಬಾಧಿಸುತ್ತಿತ್ತು. ರಾತ್ರಿಯೆಲ್ಲ ನಿದ್ರೆಯಿಲ್ಲದ್ದರಿಂದ ಅವನ ಅಂಗಾಂಗಗಳೂ ಮುಳ್ಳು ಚುಚ್ಚಿದಂತೆ ನೋಯುತ್ತಿದ್ದವು. ಯಾವಾಗ ಹಾಸಿಗೆಗೆ ಬೆನ್ನು ತಾಗಿಸಿಯೇನು ಎನಿಸುತ್ತಿದ್ದಿತು. ಹೇಗಾದರೂ ಮಾಡಿ ಈ ಕೀಟಲೆಯನ್ನು ತಪ್ಪಿಸಬೇಕೆಂದು ಯೋಚಿಸಿ ನುಡಿದನು.

“ನಿಮಗೆ ಮೈಯಲ್ಲಿ ನೆಟ್ಟಗಿಲ್ಲವೆಂದು ಹೇಳಿಬಿಡಿ. ಡಾಯರೆಕ್ಟರ್ ಶಹಾನಿಯವರು ಇಂಥದಕ್ಕೆಲ್ಲ ಆಫ್ ಹೆಂಡ್ ಮಾತಾಡಲಿಕ್ಕೆ ತಯಾ ರಾಗಿರುತ್ತಾರೆ.”

ಆದರೆ ಪಹೇಲಿಯಾರ ಕಣ್ಣೆದುರು ನಾಳಿನ ದೈನಿಕಗಳಲ್ಲಿ ‘ಪಹೇಲಿ ಯಾರರ ಮನನೀಯ ಭಾಷಣ’ ಎಂದು ಬರಬಹುದಾದ ದೊಡ್ಡಕ್ಷರಗಳ ತಲೆಬರೆಹ ಕುಣಿಯುತ್ತಿತ್ತು. ಇಂಥ ಸಂಧಿ ಕಳೆದುಕೊಳ್ಳುವದೆ! ಹೇಳಿದರು–

"ನೋಡಿ, ಮಾಹುಲಿರಾವ್. ಈ ಬ್ಯಾಂಕಿನ ಬಿಸಿನೆಸ್ ಅಂದರೆ ಬಹಳ ಡೆಲಿಕೇಟಾದದ್ದು. ಚೀಫ್ ಡ್ಯಾರೆಕ್ಟರ್ ಮಾತಾಡಲಿಲ್ಲ ಎಂದಕೂಡಲೆ ಇಲ್ಲದ ಸಂಶಯಕ್ಕಾಸ್ಪದ. ಬ್ಯಾಂಕಿನ ಮೇಲೆ ಜನರ ವಿಶ್ವಾಸ ಉಳಿಯ ಬೇಕಾದರೆ ಯೋಗ್ಯರಾದವರಿಂದ ಯೋಗ್ಯ ಶಬ್ದಗಳೇ ಬರುತ್ತಿರಬೇಕು. ನಿಮ್ಮ ಕರ್ತೃತ್ವ ಶಕ್ತಿಯನ್ನು ಅರಿತೇ ನಿಮ್ಮನ್ನು ಕೇಳಿಕೊಂಡೆ."

ಪಹೇಲಿಯಾರ ಮುಖಸ್ತುತಿಯ ಪ್ರಯತ್ನಕ್ಕೆ ಬರುತ್ತಿದ್ದ ನಗೆಯನ್ನು ಹತ್ತಿಕ್ಕಿಕೊಂಡು 'ಹ್ಞೂ' ಎಂದು ಹೇಳಿ ರಮೇಶ ಭಾಷಣ ಬರೆಯಲು ಕುಳಿತನು. ಬರೆದಂತೆ ಅದನ್ನು ಟೈಪು ಮಾಡುವ ಕೆಲಸವೂ ಪಹೇಲಿಯಾರ ಖಾಸ ಟ್ಯಾಪಿಸ್ಟ್ಳಿಂದ ನಡೆದಿತ್ತು. ಅದನ್ನೊಮ್ಮೆ ರಮೇಶನ ಮುಂದೆ ಓದಿ ಹೇಳಿ ಪಹೇಲಿಯಾರ ರಿಹರ್ಸಲ್ಲು ಮುಗಿಯುವ ಹೊತ್ತಿಗೆ ಒಂದುವರೆಗೆ ನಡೆಯಲಿದ್ದ ಮೀಟಿಂಗಿಗೆ ಹದಿನೈದು ನಿಮಿಷ ಮಾತ್ರ ಉಳಿದಿತ್ತು.

ರಮೇಶನ ರಿಪೋರ್ಟು ಓದುವ ಸರತಿ ಬಂದಾಗ ಎರಡೂವರೆ ಆಗಿತ್ತು. ನಿಂತಿದ್ದಂತೆ ಒಮ್ಮೆ ಆತನಿಗೆ ಬೀಳುವಂತಾಯಿತು. ಟೇಬಲ್ಲಿನ ಮೇಲೆ ಕೈಯೂರಿ ಹದಿನೈದು ನಿಮಿಷದ ರಿಪೋರ್ಟನ್ನು ಹೇಗೋ ಮುಗಿಸಿದನು. ಮೂರು ಘಂಟೆಗೆ ಡೈರೆಕ್ಟರ್ ಬೋರ್ಡಿನವರೆಲ್ಲ ಕೂಡಿ ಚಹಕ್ಕೆ ನೆರೆಯುವದು ಎಂದು ನಿಶ್ಚಿತವಾಗಿತ್ತು. ಮೀಟಿಂಗಿಗೆ ಬಂದಿದ್ದ ಡೈರೆಕ್ಟರ್ ಶೇಖರನೊಡನೆ ರಮೇಶನಿಗೂ ಚಹದ ಔತಣ ದೊರೆಯಿತು ಪಹೇಲಿಯಾರಿಂದ. ಆದರೆ ರಮೇಶ ಬಹಳ ದೊಡ್ಡ ಥ್ಯಾಂಕ್ಸಿನೊಡನೆ ಅದನ್ನು ನಮ್ರವಾಗಿ ನಿರಾಕರಿಸಿ ಹೊರಟುಬಿಟ್ಟನು.

ಅಕ್ಟೋಬರದ ಪ್ರಖರ ಬಿಸಿಲು ಹೊರಗೆ ಉರಿಯುತ್ತಿದ್ದಿತು. ಬೆಳಗಿ ನಿಂದ ಸುರುವಿಕೊಂಡಿದ್ದ ನಾಲ್ಕೈದು ಸಾರೆಯ ಚಹ ಬಿಟ್ಟು ರಮೇಶ ಏನನ್ನೂ ತಿಂದಿರಲಿಲ್ಲ. ತುಂಬ ಹಸಿವೆಯಾಗಿದ್ದರೂ ಆ ತಲೆಸಿಡಿತದಿಂದಾಗಿ ಏನನ್ನೂ ತಿನ್ನಬೇಕೆನಿಸಿರಲಿಲ್ಲ. ನಿದ್ದೆಗೆಟ್ಟಾಗಲೆಲ್ಲ ಯಾವಾಗಲೂ ಬರುವ ರೋಗ ವಾದ್ದರಿಂದ ಯಾವ ಆಸ್ಪ್ರೋ ಗುಳಿಗೆಯಿಂದಲೂ ಅದು ಹೋಗಲಾರದೆಂದು ಅವನಿಗೆ ಗೊತ್ತಿತ್ತು. ಬಸ್ಸುಸ್ಟಾಂಡಿಗೆ ಹೋಗುವಾಗ ಸಿಗುವ ಇರಾಣಿ ಹೋಟೆಲ್ ಹೊಕ್ಕು ರೈಸ್‌ಪ್ಲೇಟ್ ಬೇಡಿದನು. ಆದರೆ ಅಷ್ಟುಹೊತ್ತಿಗೆ ಅಗುಳಿ ನಂತಾದ ಆ ಅನ್ನ, ಕುದಿದು ಕುದಿದು ರುಚಿಗೆಟ್ಟ ಆ ಸಾರು ಗಂಟಲಿಳಿಯಲಿಲ್ಲ.

ಅದನ್ನು ಬದಿಗೆ ತಳ್ಳಿ ಅಷ್ಟು ಕೇಕು ತಿಂದು ಮತ್ತೆ ಚಹ ಸುರುವಿಕೊಂಡು ಬಸ್‌ಸ್ಟಾಂಡಿಗೆ ಬಂದು ನಿಂತನು. ಅದಾಗಲೇ ನಾಲ್ಕಾರು ಜನ ಬಿಸಿಲಿನಲ್ಲಿ ಒಣಗುತ್ತ ನಿಂತಿದ್ದರು. ರಮೇಶನೂ ನಿಂತನು. ಒಂದು ಟ್ಯಾಕ್ಸಿ ಮಾಡ ಬಹುದಾಗಿತ್ತಲ್ಲ ಅನ್ನಿಸಿತು. ಹತ್ತಿರ ಎಲ್ಲಿಯೂ ಒಂದೂ ಕಾಣಿಸಲಿಲ್ಲ.

ಐದು ನಿಮಿಷ ಕಳೆಯಿತು. ಆಗಲೇ ಒಂದು ಬಸ್ಸು ಬಂದು ಮೂವರನ್ನು ಹತ್ತಿಸಿಕೊಂಡೊಯ್ದಿದ್ದಿತು. ರಮೇಶ 'ಕ್ಯೂ ನಿಲ್ಲಿರಿ' ಸಂಜ್ಞೆಯ ಕಂಭ ವನ್ನೊರಗಿಕೊಂಡು ಹೇಗೋ ನಿಂತಿದ್ದನು.

ಹೊಟ್ಟೆಯಲ್ಲಿಯಂತೆ ಅವನ ಮನಸ್ಸಿನಲ್ಲಿಯೂ ಭಯಂಕರ ತುಮುಲ ವೆದ್ದಿತು. ಭರ್ರನೆ ಓಡಾಡುತ್ತಿರುವ ಕಾರುಗಳನ್ನು ನೋಡಿ ಇವನ್ನೆಲ್ಲ ಒಂದು ಮುಷ್ಟಿಯಲ್ಲಿ ಹಿಡಿದು ಉರುಳಿಸಿ ಬಿಡಬೇಕು ಅನ್ನುವಷ್ಟು ಆತನ ಮನಸ್ಸು ದಂಗೆ ಯೆದ್ದಿತು, ಸಿರಿವಂತಿಕೆಯ ವಿರುದ್ಧ.

ತನ್ನಷ್ಟೇ ಪಂಡಿತರಾದ ನಾಲ್ಕು ಶೇಅರ್‌ಹೋಲ್ಡರ್ಸ್ ಮುಂದೆ ಮುರುಕು ಇಂಗ್ಲೀಷಿನಲ್ಲಿ ನಾಲ್ಕು ಶಬ್ದ ಹೇಳಲಾಗದ ಪಹೇಲಿಯಾನ ನೆನಪಾಯಿತು. ಆದರೆ ಅವನೇ ಮುಂಬಯಿಯ ಕೆಲವೇ ಆಧಾರಸ್ತಂಭಗಳಲ್ಲೊಬ್ಬನಾಗಿದ್ದನು! ಹತ್ತಾರು ಡ್ಯಾರೆಕ್ಟರ್ ಬೋರ್ಡುಗಳ ಮಾನ್ಯ ಸದಸ್ಯನಾಗಿದ್ದನು. ಹತ್ತಾರು ಮಿಲ್ಲುಗಳು ಹತ್ತಾರು ಹೆಸರುಗಳಲ್ಲಿ ನಡೆಯುತ್ತಿದ್ದರೂ ಅವನ ಕೈಗೊಂಬೆ ಗಳಾಗಿದ್ದವು. ಇಂಥ ಜನರೇ ಹಿಂದುಸ್ಥಾನದ ಔದ್ಯೋಗಿಕ ಅರಸರು ಎಂದು ಬಿರುದು ಧರಿಸಿ ಓಡಾಡುತ್ತಿರುತ್ತಾರೆ! ಅವರ ವ್ಯವಹಾರ ಸಾಗಿಸುತ್ತಿದ್ದ ತನ್ನಂಥವರು, ಆ ಹತ್ತಾರು ಮಿಲ್ಲುಗಳ ಮ್ಯಾನೇಜರರು, ಸೆಕ್ರೆಟರಿಗಳು, ತಿಂಗಳಿಗೆ ಇನ್ನೂರೋ ಮುನ್ನೂರೋ ಪಗಾರು ಪಡೆದು, ಇವರ ದೊಡ್ಡಸ್ತಿಕೆ ಯನ್ನು ಪ್ರಸಿದ್ಧಪಡಿಸುವದಕ್ಕಾಗಿ ಹಸಿವೆ, ನಿದ್ದೆ, ಬಿಸಿಲು, ಮಳೆ ಅನ್ನದೆ ದುಡಿಯುತ್ತಿರಬೇಕು! ಸಾವಿರಾರು ಕೂಲಿಕಾರರು........ಓಹ್!

ಭರ್ರೆಂದು ಬರುತ್ತಿದ್ದ ಕಾರೊಂದು ನಿಂತಿದ್ದವರ ಮುಂದೆಯೇ ಹಾಯ್ದು ಒಂದೆರಡು ಮಾರು ದಾಟಿ ಕಿರ್ರೆಂದು ನಿಂತಿತು. ಏನೋ ಅಪಘಾತವಾಗಿರ ಬೇಕೆಂದು ಎಲ್ಲರೊಡನೆ ರಮೇಶನೂ ಅತ್ತ ನೋಡಿದನು. ಕಾರನ್ನು ಹಿಂಗಾಲಿ ನಿಂದ ರಮೇಶ ನಿಂತಲ್ಲಿ ತಂದು ಕಿರಣ ಕಿಟಕಿಯಿಂದ ಹೊರಗೆ ಇಣಕಿದಳು.

"ಇದೇನು ಇಲ್ಲಿ! ಬನ್ನಿ ಹೋಗುವ."

"ತುಂಬ ಉಪಕಾರವಾಯಿತು. ನೀವು ಮುಂದೆ ಹೋಗಿ. ನನ್ನ ಬಸ್ಸು ಇದೇ ಈಗ ಬರಬಹುದು."

ರಮೇಶನ ಪ್ರತಿಶಬ್ದದಿಂದಲೂ ದ್ವೇಷದ ಅಗ್ನಿ ಭುಗಿಲೆನ್ನುತ್ತಿದೆ ಎಂದು ಅವನ ಮನಸ್ಸಿನ ವಿಚಾರವನ್ನರಿತಿದ್ದ ಯಾರಾದರೂ ಹೇಳಬಹುದಾಗಿತ್ತು.

ಕಿರಣ ಕ್ಷಣಕಾಲ ದಂಗಾಗಿ ರಮೇಶನನ್ನು ನೋಡಿದಳು. ಕ್ಯೂ ನಿಂತಿದ್ದ ಜನರೂ 'ಗಮ್ಮತ್ತು' ನೋಡುತ್ತಿದ್ದರು. ಸುಂದರ ತರುಣಿಯೊಬ್ಬಳು ಆಸ್ಟಿನ್ ೮ನೇ ಮಾಡೆಲ್ ಕಾರಿನಲ್ಲಿ ಕುಳಿತು ಬಾ ಅನ್ನುತ್ತಿರುವಾಗ ತಮ್ಮೊಡನೆ ಬಡಿಯುತ್ತಿರುವ ಆ ಬಿಸಿಲಿನಲ್ಲಿ ಬಿ. ಇ. ಎಸ್. ಟಿ. ಯ 'ರದ್ದಿ' ಬಸ್ಸಿಗಾಗಿ ಕಾಯುತ್ತ ನಿಂತಿರುವ ರಮೇಶ ಅವರಿಗೂ ಅರ್ಥವಾಗುತ್ತಿರಲಿಲ್ಲ.

"ನನ್ನ ಚೇಷ್ಟೆ ಮಾಡಬೇಕೆಂದಿದ್ದೀರೇನು?"

ಅಷ್ಟು ಜನರ ಮುಂದೆ ನಿಃಸಂಕೋಚವಾಗಿ ಕಿರಣ ನುಡಿದಿದ್ದ ಆ ದನಿಯಿಂದ ರಮೇಶನಿಗೆ ಒಮ್ಮೆಲೇ ತನ್ನ ತಾಯಿಯ ನೆನಪಾಯಿತು. ಮೂರು ಮಿಲ್ಲುಗಳ ಒಡೆಯರೊಬ್ಬರ ತಂಗಿಯಾದ ಈ ಬಿಂಕದ ಹುಡುಗಿ ಆ ಕ್ಷಣದಲ್ಲಿ ತನ್ನಂತೆ, ತನ್ನವರಂತೆ ಕರುಣೆ ಮಮತೆಗಳಿಂದ ಕೂಡಿದ ತೀರ ಸಾಮಾನ್ಯ ಹೆಂಗರುಳಾಗಿ ತೋರುತ್ತಿದ್ದಳು.

"ಅನ್ಯಾಯವಾಗಿ 'ಬೆಸ್ಟ್' ಕಂಪನಿಗೆ ಎರಡಾಣೆ ಚಕ್ರ"

ಎನ್ನುತ್ತ ವಾತಾವರಣದ ಗಂಭೀರತೆಯನ್ನು ನಗೆಯಲ್ಲಿ ತೇಲಿಸುವ ವ್ಯರ್ಥ ಪ್ರಯತ್ನ ಮಾಡುತ್ತ ರಮೇಶ ಆಕೆಯ ಪಕ್ಕದಲ್ಲಿ ಬಂದು ಕುಳಿತನು. ಕಿರಣ ಕಾರು ನಡೆಸಿದಳು.

ಕೆಲಹೊತ್ತು ಯಾರೂ ಮಾತಾಡಲಿಲ್ಲ. ಕಾರು ತಾನೆಣಿಸಿದಂತೆ ಫ್ಲೋರ್ಟನತ್ತ ಲಾಲಾನ ಮನೆಯ ಕಡೆಗೆ ಹೋಗದೆ ಮರಿನ್‌ಡ್ರೈವ್ಸ್‌ದತ್ತ ತಿರುಗಿದುದನ್ನು ನೋಡಿ ರಮೇಶ ಕೇಳಿದನು.

"ಚೌಪಾಟಿಗೆ ಹೋಗಿ ತಂಪಾಗಿ ಮಳಲ ಮೇಲೆ ಸುತ್ತಿಬರೋಣ ಅಂತೀರೇನು?"

"ಬೆಳಗ್ಗೆ ಎಷ್ಟು ಹೊತ್ತಿಗೆ ಎದ್ದಿರಿ?"

ರಮೇಶನ ಹಾಸ್ಯವನ್ನು ಕಂಡೂ ಕಾಣದವರಂತೆ ಕಿರಣ ತಟ್ಟನೆ ಕೇಳಿದಳು.

“ ಏನೋ, ನೆನಪಿಲ್ಲ. ಹತ್ತುಹತ್ತೂವರೆಯಾಗಿರಬೇಕು.”

“ ನಾನು ಒಂಬತ್ತು ಗಂಟೆಗೆ ಫೋನು ಮಾಡಿದಾಗ ಆಫೀಸಿನ ಕ್ಲಾರ್ಕು ಏನೋ ಬರೆಯುತ್ತಿದ್ದಾರೆ ಎಂದು ಹೇಳಿದಳು. ಬೆಳಗಿನಿಂದ ಆಫೀಸಿನಲ್ಲಿಯೇ ಇದ್ದಿರಂತೆ.”

“ ನೆನಪಿಲ್ಲ ಎಂದೆನಲ್ಲ. ನಿದ್ದೆಯಲ್ಲಿ ಹಾಗೇನಾದರೂ ಮಾಡಿರಲೂ ಸಾಕು. ನೋಡಿ, ನನ್ನನ್ನು ಮನೆಯತನಕ ಬಿಟ್ಟು ಬಿಟ್ಟು ನೀವು ಏನು ಬೇಕಾದರೂ ಮಾಡಿಕೊಳ್ಳಿ. ತಲೆ ಸಿಡಿದು ಹೋಗುತ್ತೇನೆ ಎನ್ನುತ್ತಿದೆ. ಇಬ್ಬರೂ ಕೂಡಿ ಎಲ್ಲಿಯಾದರೂ ಓಡಿಹೋಗುವ ವಿಚಾರವಿದ್ದರೆ ನಾಳೆ ನೋಡೋಣ.”

“ ಈ ಹೊತ್ತು ಕನ್ನಡಿ ನೋಡಿಕೊಂಡಿದೀರೇನು ?”

“ ಅದರಲ್ಲಿ ನಮ್ಮನಮ್ಮದೇ ಪ್ರತಿಬಿಂಬ ಕಾಣುತ್ತದಂತೆ. ಅದಕ್ಕೆ ಅಷ್ಟೆಲ್ಲ ತೊಂದರೆ ವಹಿಸಲಿಲ್ಲ.”

“ ಆರು ತಿಂಗಳು ಜ್ವರ ತಿಂದವರಂತಾಗಿದ್ದೀರಿ. ನಮ್ಮ ಮನೆ ಬಿಟ್ಟ ಮೇಲೆ ಮಲಗಲೇ ಇಲ್ಲ ಅಲ್ಲವೆ ? ಅದೇನೋ ಬ್ಯಾಂಕ್ ರಿಪೋರ್ಟ್ ನೀವು ಬರೆಯಬೇಕಾಗಿದೆ ಅಂತ ಲಾಲಾ ಬೆಳಿಗ್ಗೆ ಹೇಳಿದರು. ಆಗ ಎನಿಸಿತು, ನಿಮ್ಮನ್ನು ರಾತ್ರಿ ಆಡಲಿಕ್ಕೆ ಕರೆದು ದೊಡ್ಡ ತಪ್ಪು ಮಾಡಿದೆ ಅಂತ. ನೀವೂ ಹೇಳಲಿಲ್ಲ.”

ರಮೇಶ ಮಾತಾಡಲಿಲ್ಲ. ಈ ಹುಡುಗಿಗೆ ನಿಜವಾಗಿಯೂ ಇಷ್ಟು ಅನುಕಂಪ ಉಂಟಾಗಿರಬಹುದೆ ? ಎಂದುಕೊಂಡನು.

ಕಿರಣ ಆತನಿಂದ ಯಾವ ಉತ್ತರವನ್ನೂ ಅಪೇಕ್ಷಿಸದೆ ತಾನೇ ಮುಂದು ವರಿಸಿದಳು,

“ ಈಗ ದಾದರಕ್ಕೆ ನಮ್ಮ ಮನೆಗೆ ಹೋಗೋಣ. ಮಾವ ಮಂಗಲ ದಾಸನನ್ನು ಕಂಡು ನಾಲ್ಕು ಗಂಟೆಗೆ ಲಾಲಾನ ಮನೆಗೆ ಅಣ್ಣನೊಡನೆ ಬರ ಬೇಕೆಂದು, ಅಷ್ಟುಹೊತ್ತಿಗೆ ಲಾಲಾನೂ ಮೀಟಿಂಗ್ ಮುಗಿಸಿಕೊಂಡು ಬಂದಿರ ಬೇಕೆಂದು ಎಲ್ಲರೂ ಮಾತನಾಡಿಕೊಂಡಿದ್ದಾರೆ. ವೈನಿಯೂ ಆಗಲೇ ಗಿರಿಜಾ

ತಾಯಿಯೊಡನೆ ಬಂದು ಕುಳಿತಿರಬೇಕು. ನೀವೀಗ ಮನೆಗೆ ಹೋದರೆ ಯಾವ ವಿಶ್ರಾಂತಿಯನ್ನೂ ಅಪೇಕ್ಷಿಸುವಂತಿಲ್ಲ."

"ನಿಮ್ಮ ಮನೆಯಲ್ಲಿ ಅಪೇಕ್ಷಿಸಬಹುದು! ನಿಮ್ಮ ಅಣ್ಣ, ಮಾವ, ಲಾಲಾ ಎಲ್ಲರೂ ಸೇರುತ್ತಾರೆ ಎಂದಮೇಲೆ ಏನೋ ಭಾರಿ ಪ್ರೋಗ್ರಾಮು ಇಟ್ಟು ಕೊಂಡಿರಬೇಕಲ್ಲ. ನೀವು ಹೇಗೆ ತಪ್ಪಿದಿರಿ?"

ಕಿರಣ ಉತ್ತರವೀಯದೆ ಮೌನವಾಗಿ ಕೆಲಹೊತ್ತು ಕಾರು ನಡೆಸುತ್ತಿದ್ದಳು. ಕಡೆಗೆ ಶಬ್ದಗಳನ್ನು ಆರಿಸಿ ಹೇಳುತ್ತಿರುವಂತೆ ಗಂಭೀರವಾಗಿ ನುಡಿದಳು.

"ಹಿಂದೆ ಡಾರ್ವಿನ್ನನ 'ಬಲವಂತನು ಬದುಕುತ್ತಾನೆ' ತತ್ವದ ವಿಷಯ ಮಾತಾಡಿದಾಗ ಅದರ ಅರ್ಥ ಬಲವಂತರು ದುರ್ಬಲರನ್ನು ಹತ್ತಿಕ್ಕುವದು ಎಂದಲ್ಲ ಎಂದು ನೀವು ಹೇಳಿದ್ದು ನೆನಪಿದೆಯೆ? ಆದರೆ ಆ ದುರ್ಬಲರಿಗೇ ತಾವು ದುರ್ಬಲತೆಯನ್ನು ಬಿಡುವದು ಬೇಡವಾಗಿದ್ದರೆ ತಪ್ಪು ಯಾರದು? ಸುಕೃತ್ಯ ಅನ್ನುವದು ಯಾವಾಗಲೂ ಸ್ವಾರ್ಥಕ್ಕಾಗಿ ಮಾತ್ರ ಆಗಿರಬೇಕು, ರಮೇಶ. ಇನ್ನೊಬ್ಬರಿಗೆ ಒಳ್ಳೆಯದನ್ನು ಮಾಡಿದರೆ ತನಗೆ ಒಳ್ಳೆಯದಾಗುತ್ತದೆ ಅನ್ನುವ ವ್ಯಕ್ತಿ ವ್ಯಕ್ತಿವಾದದ ಈ ಜಗತ್ತಿನಲ್ಲಿ ಬದುಕುವದಿಲ್ಲ. ತನಗೆ ಒಳ್ಳೆಯ ದನ್ನು ಮಾಡಿಕೊಂಡರೆ ಇತರರಿಗೂ ಒಳ್ಳೆಯದಾಗಬಹುದು ಎನ್ನುವ ಭಾವನೆ ಯಿದ್ದರೇ ಬದುಕುವದು ಸಾಧ್ಯ. ನಿಸ್ವಾರ್ಥಿಗಳೇ ತುಂಬಿಕೊಂಡಿದ್ದ ಜಗತ್ತು, ಕಾಲಗಳಲ್ಲಿ ನಿಸ್ವಾರ್ಥ ಒಂದು ಸದ್ಗುಣವಾಗಬಹುದು, ಉದಾತ್ತ ಜೀವನವಾಗ ಬಹುದು. ಆದರೆ ಜೀವನದ ಪರಮ ಆದರ್ಶವೇ ಸ್ವಾರ್ಥವಾಗಿದ್ದ ಸಮಾಜ ದಲ್ಲಿ ಪರಾರ್ಥ ಒಂದು ಸದ್ಗುಣ ಎಂದು ತಿಳಿದುಕೊಂಡಿದ್ದರೆ ತನ್ನ ಜೀವನಕ್ಕೇ ತಾನು ತಿಲಾಂಜಲಿ ಕೊಡುತ್ತೇನೆ ಎಂದು ಅರ್ಥ."

ಇಷ್ಟೆಲ್ಲ ಮಾತಾಡುತ್ತಿರುವಾಗ ಕಿರಣ ಒಂದು ಸಾರೆಯಾದರೂ ರಮೇಶ ನತ್ತ ಹೊರಳಿ ನೋಡಿರಲಿಲ್ಲ. ಮಾತು ನಿಲ್ಲಿಸಿದ ಮೇಲೆಯೂ ರಸ್ತೆಯನ್ನೇ ನಿಟ್ಟಿಸುತ್ತ ಭರ್ರನೆ ಕಾರು ಬಿಡುತ್ತಲೇ ಇದ್ದಳು.

ರಮೇಶ ಒಂದು ಕೈಮೇಲೆ ತನ್ನ ತಲೆಯ ಭಾರವನ್ನೆಲ್ಲ ಇಟ್ಟುಕೊಂಡು ಕಿರಣಳನ್ನೇ ನೋಡುತ್ತಿದ್ದವನು ತಾನೂ ಹೊರಗೆ ನೋಡತೊಡಗಿದನು. ಹಾಯಾಗಿ ಕುಳಿತು ಗಾಳಿಗೆ ತಲೆಯೊಡ್ಡಿದುದಕ್ಕೆ ತಲೆನೋವೂ ಕೊಂಚ ಕಡಿಮೆ ಯಾಗಿತ್ತು. ತುಟಿಯ ಮೇಲೆ ನಗೆತಂದುಕೊಂಡು ನುಡಿದನು.

" ನಿನ್ನೆ ರಾತ್ರಿ ನಿಮ್ಮ ಮಾತಿಗೊಪ್ಪಿ ಆಡಲು ಕುಳಿತಾಗ ಇಷ್ಟೆಲ್ಲ ಸ್ವಾರ್ಥ ಪರಾರ್ಥ ವಿಚಾರ ಮಾಡಲಿಲ್ಲ. ಸುಂದರ ಯುವತಿಯೊಬ್ಬಳು, ಏನೋ ಸಣ್ಣ ವಿಷಯ ಕೇಳಿಕೊಂಡಾಗ ಅಲ್ಲ ಅನ್ನುವಷ್ಟು ಶಿವೆಲ್ರಿ ಹೋಗಿಲ್ಲವೆಂಬುದನ್ನು ತೋರಿಸಲಿಕ್ಕೆ ಒಪ್ಪಿ ಕುಳಿತುಕೊಂಡೆ. ನಿಮ್ಮಂಥವರು ಕೇಳುವದು ಹೆಚ್ಚೋ ನಾನು ನಡೆದುಕೊಳ್ಳುವದು ಹೆಚ್ಚೋ ?"

" ಈ ಭಾವನೆ ಇದೇ ಈಗ ಕಾರಿನಲ್ಲಿ ಬನ್ನಿ ಎಂದಾಗ ಎಲ್ಲಿಗೆ ಹೋಗಿತ್ತು ? ಅಷ್ಟು ಜನರೆದುರು ಖಂಡಿತವಾಗಿ ಬರುವದಿಲ್ಲ ಎಂದವರಿಗೆ ನಿನ್ನೆ ಕೆಲಸವಿದೆ ಆಡುವದಿಲ್ಲ ಎನ್ನುವದು ಕಠಿನವಾಗಿತ್ತೆ ? ನಿಮಗೇ ನೀವು ಮೋಸಮಾಡಿಕೊಳ್ಳ ಬೇಡಿರಿ, ಮಾಹುಲಿ. ಶ್ರೀಮಂತರ ಮೇಲೆ ಸೇಡು ತೀರಿಸಿಕೊಳ್ಳುವ ಭಾವನೆ ಇದೆಯಲ್ಲವೆ ನಿಮ್ಮಲ್ಲಿ ? ಆದರೆ ಈ ರೀತಿಯ ನಿಮ್ಮ ನಡತೆ ಎಷ್ಟರಮಟ್ಟಿಗೆ ನಿಮ್ಮ ಧ್ಯೇಯ ಸಾಧಿಸುತ್ತದೆ ಎಂಬುದನ್ನು ನೀವೇ ವಿಚಾರಿಸಿಕೊಳ್ಳಿ. ತಿಂಗಳು ಮುನ್ನೂರೈವತ್ತು ರೂಪಾಯಿ ಪಗಾರು ಪಡೆದು ಲಾಲಾಗೆ ಲಕ್ಷಗಟ್ಟಳೆ ಹಣ ವನ್ನು ಗಳಿಸಿಕೊಡುತ್ತಿದ್ದೀರಿ. ಮೇಲಿಂದ ಸ್ವರ್ಗವನ್ನೇ ನಿಮಗೆ ಕೊಟ್ಟವರಂತೆ ಅವರ ಉಪಕಾರ ಹೊಗಳುತ್ತೀರಿ. ಅದೇನೋ ನಮ್ಮ ಸಂಬಂಧ ಕಲುಷಿತ ವಾಗುತ್ತದೆ ಅಂತ ಸಾವಿರಾರು ಕೂಲಿಕಾರರ ಹೊಟ್ಟೆಯ ಮೇಲೆ ಕಾಲು ಕೊಡುತ್ತಿರುವಾಗ ನೀವೇನು ಸಾಧಿಸಿದಂತಾಯಿತು ? ರಾತ್ರಿಯೆಲ್ಲ ತಮ್ಮ ಮನರಂಜನೆಗೆ ಒದಗಿ ಬಂದವನು ಬೆಳಗಿನ ನಾಲ್ಕು ಗಂಟೆಯಷ್ಟು ಹೊತ್ತಿಗೆ ತೂಕಡಿಸುತ್ತ ಸ್ಟೇಶನ್‌ವರೆಗೆ ನಡೆದು ಗಾಡಿಹತ್ತಿ ಫೋರ್ಟಿಗೆ ಹೋಗುತ್ತಿರುವಾಗ ಒಬ್ಬರಿಗಾದರೂ ಹಾರ್ದಿಕವಾಗಿ ಅಲ್ಲಿಯೇ ಮಲಗ ಹೇಳುವ ಸೌಜನ್ಯವಿರಲಿಲ್ಲ ! ಇದೆಲ್ಲ ನಿಮ್ಮ ಪರಾರ್ಥದ ಸುಫಲಗಳು, ಮಾಹುಲಿ. ಇವತ್ತಿನ ನಿಮ್ಮ ಈ ತಲೆನೋವು, ಈ ಇಳಿಬಿದ್ದ ಮೋರೆ, ಈ ಸುಕ್ಕಿಹೋದ ಕಣ್ಣುಗಳು ಇವೆಲ್ಲ ನಿಮಗೆ ಸಿಕ್ಕ ಇನಾಮುಗಳು."

" ಬಹುಶಃ ರಸ್ತೆಯ ಮೇಲೆ ನಿಮಗೆ ನನ್ನ ಕಣ್ಣು ಮೋರೆಯ ಪ್ರತಿಬಿಂಬ ಕಾಣುತ್ತಿರಬೇಕಲ್ಲವೆ ?"

ಇನ್ನೂ ರಸ್ತೆಯನ್ನೇ ನೋಡುತ್ತಲಿದ್ದ ಕಿರಣಳನ್ನು ನಗಿಸುವ ಪ್ರಯತ್ನ ಮಾಡುತ್ತ ರಮೇಶ ನುಡಿದನು. ಎಂದೆಂದೂ ಕಾಣದ ಕಿರಣಳ ಆ ಗಾಂಭೀರ್ಯ ಅವನಿಗೆ ವಿಚಿತ್ರವೆನಿಸತೊಡಗಿತ್ತು, ಅಸಹನೀಯವೆನಿಸತೊಡಗಿತ್ತು. ಆದರೆ

ಕಿರಣ ರಮೇಶನ ಮಾತಿಗೆ ಉತ್ತರವೀಯಲಿಲ್ಲ. ಟಿಳಕ್ ಬ್ರಿಜ್ಜಿನ ಮೇಲೆ ಕಾರು ಹೋಗುತ್ತಲಿದ್ದುದರಿಂದ ತಿರುಗಿ ನೋಡುವಂತೆಯೂ ಇರಲಿಲ್ಲ. ರಮೇಶನೇ ಮುಂದುವರಿಸಿದನು,

"ನೀವು ನನ್ನನ್ನು ತಪ್ಪು ತಿಳಿಯುತ್ತಿದ್ದೀರಿ, ತಾವಡೇಕರ್. ನಿನ್ನೆಯ ನನ್ನ ನಡತೆಯಲ್ಲಿ ಯಾವ ತ್ಯಾಗಬುದ್ಧಿಯೂ ಇರಲಿಲ್ಲ. ನನಗಾಗಿ ಬಹಳಷ್ಟು ಯೋಚಿಸದಿರುವದು ಚಿಕ್ಕಂದಿನಿಂದಲೂ ನನಗೆ ಬಂದ ಸಂಸ್ಕಾರ. ಆದರೆ ಅದು ತ್ಯಾಗವೆಂದಾಗಲಿ, ನಿಸ್ವಾರ್ಥ ಬುದ್ಧಿ ಎಂದಾಗಲಿ ನನಗೆ ಅನಿಸಿಯೇ ಇಲ್ಲ. ಈ ಸ್ವಾರ್ಥ, ಪರಾರ್ಥಗಳ ವಿಷಯವಾಗಿಯಂತೂ ನಾನು ಎಂದೂ ವಿಚಾರ ಮಾಡಿಲ್ಲ. ನನ್ನ ತಂದೆಯೂ ಇದೇ ಭಾವನೆಯನ್ನಿಟ್ಟುಕೊಂಡು ಇಂದಿಗೆ ೬೨ ವರ್ಷಗಳನ್ನು ಕಳೆದಿದ್ದಾನೆ. ಅವನಷ್ಟು ಕರ್ತವ್ಯ ಬುದ್ಧಿಯಿಂದ ಜೀವಿಸುವದು ನನ್ನಿಂದಲೂ ಶಕ್ಯವಿಲ್ಲವೆಂಬುದನ್ನು ಒಪ್ಪುತ್ತೇನೆ. ಆದರೆ ಅವನಿಂದ ಬಂದ ಸಂಸ್ಕಾರ ಮಾತ್ರ ಹೋಗಿಲ್ಲ. ಅದು ಹೋಗಿಲ್ಲವೆಂದು, ನಾನು ಸಾಕಷ್ಟು ಸ್ವಾರ್ಥಿಯಾಗಿಲ್ಲವೆಂದು, ಹಾಗಾಗದುದಕ್ಕೆ ನನಗೆ ಸಾಕಷ್ಟು ಸುಖ ಸಿಗಲಿಲ್ಲ ವೆಂದು, ಇಲ್ಲವೆ ತೊಂದರೆಯಾಗುತ್ತದೆಂದು ಅನಿಸುವ ಘಟನೆ ಇಲ್ಲಿಯವರೆಗಂತೂ ಒಂದೂ ಬಂದಿಲ್ಲ. ಏನೋ ಅಷ್ಟು ತಲೆ ನೋಯಿಸುತ್ತಿದ್ದುದಕ್ಕೆ ನನ್ನ ಹುಟ್ಟು ಗುಣ ಬದಲಾಗುವದೆಂದು ನನಗಂತೂ ಅನಿಸುವದಿಲ್ಲ."

ಮನೆಯೆದುರು ಕಾರು ನಿಲ್ಲಿಸಿ, ಇಳಿಯುತ್ತ 'ನೀವು ಹಿಮಾಲಯದಲ್ಲಿರ ಬೇಕಾಗಿತ್ತು' ಎಂದು ಕಿರಣ ನುಡಿದಾಗ ಮೊದಲ ಬಾರಿ ಆಕೆಯ ತುಟಿಯ ಮೇಲೆ ನಗೆಯನ್ನು ನೋಡಿ ರಮೇಶನಿಗೆ ಆನಂದವಾಯಿತು.

ಇಬ್ಬರೂ ಒಳಗೆ ಬಂದರು. ಏರ್ ಕಂಡೀಷನ್ಡ್ ಮನೆಯನ್ನು ಪ್ರವೇಶಿಸಿ ಹತ್ತಿರ ಇದ್ದ ಕುರ್ಚಿಯ ಮೇಲೆ ಕೂಡ್ರುತ್ತ ರಮೇಶ ಹೇಳಿದನು,

"ಹಿಮಾಲಯಕ್ಕೆ ಹೋಗುವದರೊಳಗೆ ಅಲ್ಲಿಯ ಛಳಿಯನ್ನು ಹೇಗೆ ತಡೆಯಬೇಕೆಂಬುದನ್ನು ನಿಮ್ಮ ಮನೆಯಲ್ಲಿಯೇ ಪ್ರಾಕ್ಟೀಸುಮಾಡಿ ಹೋಗು ತ್ತೇನೆ."

"ಛಳಿ ಮಾತ್ರವಲ್ಲ ಗುಡ್ಡ ಏರಲೂ ನೀವು ಕಲಿಯಬೇಕು. ನಡೆಯಿರಿ ಮೇಲೆ ಹೋಗೋಣ."

ಎಂದು ಕಿರಣ ರಮೇಶನನ್ನು ಮೇಲೆ ಕರೆದೊಯ್ದು ತನ್ನ ಮಲಗುವ ಖೋಲಿಯ ಬಾಗಿಲು ತೆರೆದು ಕಿಟಕಿಯ ಪರದೆಯನ್ನು ಸರಿಸಿ ನುಡಿದಳು.

" ಕಾಟಿನ ಮೇಲೆ ಹಾಯಾಗಿ ಮಲಗಿಕೊಳ್ಳಿರಿ. ಯು-ಡಿ-ಕೊಲೋನ್ ತರುತ್ತೇನೆ. ತಲೆನೋವು ಹೇಗಿದೆ?"

" ನಿಮ್ಮ ಮನೆ ಪ್ರವೇಶಿಸಿದಾಗ ಅರ್ಧ ಕೈಬಿಟ್ಟಿತ್ತು. ಈಗ ಪೂರ್ಣ ಬಿಡತೊಡಗಿದೆ. ಈ ಖೋಲಿಯಲ್ಲಿ ಸಂಜೀವನಿಯಿರಬೇಕು."

" ನಾನ್ಸೆನ್ಸ್, ಅನ್ನುತ್ತ ಕಿರಣ ಆಚೆಯ ಕೋಣೆಗೆ ನಡೆದಳು. ರಮೇಶ ಕಾಟಿನ ಮೇಲೆ ಹೋಗಿ ಕುಳಿತನು. ಸುಂದರವಾಗಿ ಕೆತ್ತಿದ ಕಟ್ಟಿಗೆಯ ಪಲಂಗದ ಮೇಲೆ ರಬ್ಬರಿನ ಮೆತ್ತನೆಯ ಗಾದಿ ಹಾಕಿದ್ದರು. ಅದರ ಮೇಲೆ ಉಣ್ಣೆಯ ಚಾದರ್‌ವೊಂದನ್ನು ಹಾಸಿ ಅದನ್ನು ಸಿಲ್ಕಿನ ಮಗ್ಗಲು ಹಾಸಿಗೆಯಿಂದ ಮುಚ್ಚಿದ್ದರು. ಹೊದೆಯುವ ಇನ್ನೊಂದು ಕಾನ್‌ಪುರದ ಚಾದರ್‌ವನ್ನು ಸರಿಯಾಗಿ ಮಡಿಸಿ ಕಾಲಬದಿಯಲ್ಲಿ ಇಡಲಾಗಿತ್ತು. ರಮೇಶನಿಗೆ ಅದನ್ನೆಲ್ಲ ನೋಡಿ ಮಲಗುವಂತಾದರೂ ಸಾಹಸವಾಗಲಿಲ್ಲ.

ಬಾಟ್ಲ ಹಿಡಿದು ಕೊಂಡು ಒಳಗೆ ಬರುತ್ತ ಕಿರಣ ನುಡಿದಳು,

" ಏಕೆ ಕುಳಿತೇ ಇರುವಿರಲ್ಲ?"

" ಅಂಜಿಕೆ ಯಾಯಿತು."

" ಅಂಜಲಿಕ್ಕೆ ಹಾವುಹಣಿ ಏನೂ ಅದರಲ್ಲಿ ಮುಚ್ಚಿಟ್ಟಿಲ್ಲ. ನಾನಿದ್ದೇನೆ. ಮಲಗಿಬಿಡಿ. ಯು-ಡಿ-ಕೊಲೋನ್ ಹಚ್ಚುತ್ತೇನೆ"

ಎನ್ನುತ್ತ ಕಿರಣ ರಮೇಶನ ತಲೆಯಬದಿಗೆ ಕುಳಿತು ಮೃದುವಾಗಿ ಅವನ ಹಣೆಯ ಮೇಲೆ ಕೈಯಿಟ್ಟಳು. ರಮೇಶ ಆ ಕೈಯನ್ನು ತನ್ನ ಕೈಯಲ್ಲಿ ಹಿಡಿದು ಇನ್ನೊಂದು ಕೈಯಿಂದ ಆಕೆಯ ಎಡಗೈಯಲ್ಲಿ ಇದ್ದ ಬಾಟ್ಲಯನ್ನು ತೆಗೆದುಕೊಳ್ಳುತ್ತ ಹೇಳಿದನು,

" ಈ ಕರಪಲ್ಲವಿ ಇನ್ನೂ ಬಹಳ ಮಹತ್ವದ ಕಾರ್ಯಗಳಿಗೆ ಉಪಯೋಗವಾಗಬೇಕು, ತಾವಡೇಕರ್. ನಮ್ಮಂಥವರಿಗೆ ಯು-ಡಿ-ಕೋಲೋನ್ ಹಚ್ಚುವದಕ್ಕಲ್ಲ. ಇಲ್ಲಿ ತನ್ನಿ, ನಾನೇ ಹಚ್ಚಿಕೊಳ್ಳುತ್ತೇನೆ."

ರಮೇಶ ನಿರೀಕ್ಷಿಸಿದ್ದಂತೆ ಕಿರಣ ಅವನನ್ನು ತಡೆಯಲಿಲ್ಲ. ಬಾಟ್ಲಯನ್ನು

ಅವನಿಗೆ ಕೊಟ್ಟುಬಿಟ್ಟು ಮೃದುವಾಗಿ ತನ್ನ ಕೈ ಬಿಡಿಸಿಕೊಂಡು ಕಿಟಕಿಯ ಹತ್ತಿರ ಹೋಗಿ ಹೊರಗೆ ನೋಡುತ್ತ ನಿಂತು ಬಿಟ್ಟಳು.

ರಮೇಶ ಅದನ್ನು ಹಚ್ಚಿಕೊಳ್ಳುತ್ತ ಕಿರಣ ಮಾತಾಡಬಹುದೇನೆಂದು ಐದು ನಿಮಿಷ ಹಾದಿ ನೋಡಿ ಕೇಳಿದನು.

"ಎಷ್ಟು ಸಿಟ್ಟಾಗಿದ್ದೀರಿ?"

"ತಿಳಿದು ಏನು ಮಾಡ ಬೇಕೆಂದಿದ್ದೀರಿ? ನೀವೇನೂ ರಮಿಸ ಬೇಕಾಗಿಲ್ಲ" ನಿಂತಲ್ಲಿಂದಲೇ ರಮೇಶನತ್ತ ತಿರುಗಿ ಕಿರಣ ನುಡಿದಳು.

"ಹಾಗಲ್ಲ, ಇಲ್ಲಿಯವರೆಗೆ ನನಗೆ ತಿಳಿದಂದಿನಿಂದ ಮನೆಯಲ್ಲಿಯೂಸಹ ಎರಡನೆಯವರಿಂದ ಸೇವೆಮಾಡಿಸಿಕೊಳ್ಳಲಿಲ್ಲ. ಸುದೈವದಿಂದ ಅಂಥ ಪ್ರಸಂಗವೂ ಬರಲಿಲ್ಲ. ಈಗಲೂ ಸಂಕೋಚ ತಡೆಯಲಾಗುವದಿಲ್ಲ."

ಕಿರಣ ಮಾತಾಡಲಿಲ್ಲ. ರಮೇಶನೇ ಆಗಾಗ ಏನೇನೋ ಹರಟುತ್ತಿದ್ದನು. ಅಷ್ಟರಲ್ಲಿ ಅಡಿಗೆಯವ ಪ್ಲೇಟಿನಲ್ಲಿ ಇಡ್ಲಿ ಮೊಸರು ಹಾಕಿಕೊಂಡು ತಂದಿಡುತ್ತ ಕಿರಣಳನ್ನು ಕುರಿತು ಹೇಳಿದನು,

"ಅಣ್ಣಾವ್ರು ಫೋನಿನಲ್ಲಿ ಕರೀತಿದಾರೆ"

"ನಾನು ಬರುವದರೊಳಗೆ ಮುಗಿಸಿಡಿರಿ. ತಲೆನೋವಿಗೆ ಅದು ರಾಮ ಬಾಣ."

ಎಂದು ಹೇಳಿ ಅಡಿಗೆಯವನಿಗೆ ಎರಡುಗ್ಲಾಸು ಶರ್ಬತ್ ತರಹೇಳಿ ಕಿರಣ ಕೆಳಗೆ ಹೋದಳು.

೭॥ ಸುಮಾರಿಗೆ ರಮೇಶ ತಿರುಗಿ ಮನೆಗೆ ಬಂದಾಗ ಲಾಲಾನ ಅತಿಥಿಗಳು ಮನೆಬಿಟ್ಟು ಬಹಳ ಹೊತ್ತಾಗಿತ್ತು. ಲಾಲಾ ರೇಡಿಯೋ ಹಚ್ಚಿಕೊಂಡು ಕುಳಿತಿದ್ದನು. ರಮೇಶನನ್ನು ನೋಡಿ ಹೇಳಿದನು.

"ರಿಪೋರ್ಟ್ ಓದಿದನಂತರ ಮನೆಗೆ ಬರುತ್ತೇನೆ ಎಂದಿದ್ದೆಯಲ್ಲ. ಕಿರಣನ ಮನೆಗೆ ಹೋಗಿದ್ದೆಯಂತೆ."

"ಹುಂ, ಬ್ಯಾಂಕಿನಿಂದ ಹೊರಗೆ ಬರುವದರೊಳಗೆ ಅವರೂ ಕಾರಿನಲ್ಲಿ ಬರುತ್ತಿದ್ದರು. ನನಗೂ ತುಂಬ ಸುಸ್ತಾಗಿ ಬಿಟ್ಟಿತ್ತು. ನಿಮಗಿನ್ನೂ ಅವಕಾಶ ವಿದೆಯೆಂದು ಅವರ ಮನೆಯ ತನಕ ಹೋಗಿಬರುವ ಎಂದು ಕೊಂಡೆವು. ಹರಟೆಯಲ್ಲಿ ವೇಳೆ ತಿಳಿಯಲಿಲ್ಲ."

" ಏನೋಪ್ಪ, ಕಿರಣ ಇಲ್ಲಿ ಬರುತ್ತೇನೆ ಎಂದಿದ್ದಳು. ಎಲ್ಲರೂ ಕೂಡಿ ೬॥ ಮೆಟ್ರೋಕ್ಕೆ ಹೋಗೋಣ ಎಂದು ಕೊಂಡಿದ್ದೆವು. ಆ ಹುಡುಗಿಗೆ ಹರಟೆ ಎಂದರಾಯಿತು. ನೀನೂನೂ ಇಲ್ಲದ ಸಲ್ಲದ ವಾದ ಹೂಡುತ್ತಿ ಪೊಲಿಟಿಕ್ಸ್, ಕಮ್ಯುನಿಝಂ, ಹಠವಾದ ಅದ್ವೈತವಾದ ಅನ್ನುತ್ತ. ಶುದ್ಧ ತಲೆಹರಟೆ."

" ತಪ್ಪು ನಂದೊಬ್ಬನದೇ ಅಲ್ಲ. ನನ್ನ ನೋಡಿದ ಕೂಡಲೇ ಅವರಿಗೂ ವಾದವಿವಾದದ ಹುಚ್ಚುಹಿಡಿಯುತ್ತದೆ. ನಾಳೆ ವೈನಿಯಾಗಿ ಈ ಮನೆಗೆ ಬಂದರೆಂದರೆ ಮುಂದೇನು ಎಂದು ಯೋಚಿಸುತ್ತಲಿದ್ದೇನೆ."

" ನಾಲ್ಕು ಶಬ್ದಗಳಿಗೆ ಒಂದಾಣೆಯಂತೆ ದಂಡ ವಿಧಿಸುತ್ತೇನೆ. ಆದರೆ ಕಿರಣಳ ಮನೋಗತ ಮಾತ್ರ ತಿಳಿಯುವದಿಲ್ಲವಲ್ಲ, ರಮೇಶ."

ರಮೇಶ ಮಾತಾಡಲಿಲ್ಲ. ಹೊರಬರುತ್ತಿದ್ದ ನಿಟ್ಟುಸಿರನ್ನು ಹತ್ತಿಕ್ಕಿ ಕೊಂಡು ತನ್ನ ಕೋಣೆಯತ್ತ ನಡೆದು ಬಿಟ್ಟನು.

## ೧೯

ಬೇಸಿಗೆಯ ರಜೆಗಾಗಿ ಕಾಲೇಜು ಮುಚ್ಚಿ ಆಗಲೇ ಒಂದು ತಿಂಗಳಾಗಿತ್ತು. ಈ ಸಾರೆ ಕಿರಣ ಮುಂಬಯಿಬಿಟ್ಟು ಎಲ್ಲಿಗೂ ಹೋಗಲಿಲ್ಲ. ಪ್ರತಿ ರಜೆಯಲ್ಲಿಯೂ ಸಿಮ್ಲಾ, ನೀಲಗಿರಿ, ಕಾಶ್ಮೀರ ಅನ್ನುತ್ತ ಎಲ್ಲಿಯಾದರೂ ಹೋಗಿ ಎಲ್ಲೆಡೆಯೂ ಇದ್ದ ತನ್ನ ತಂದೆಯ ಮಿತ್ರರು, ಸಂಬಂಧಿಕರೊಡನೆ ಎರಡು ತಿಂಗಳಿದ್ದು ಬರುವದು ವಾಡಿಕೆಯಾಗಿತ್ತು. ಆಕೆಯಂತೆಯೇ ಇಲ್ಲವೆ ಆಕೆಗಾಗಿಯೇ ಹೋಗುತ್ತಿದ್ದ ಮುಂಬಯಿಯ ಲಕ್ಷಾಧಿಪತಿಗಳ ಮಕ್ಕಳು, ಕಿರಣನ ಕಾಲೇಜು ಮಿತ್ರರು ಅಲ್ಲಲ್ಲಿ ಭೆಟ್ಟಿಯಾಗುತ್ತಿದ್ದರು. ಅವರೊಡನೆ ಸುಖವಾಗಿ ರಜ ಕಳೆದು ಜೂನ್‌ಗೆ ತಿರುಗಿ ಮುಂಬಯಿಗೆ ಬರುತ್ತಿದ್ದಳು.

ಆದರೆ ಈಸಾರೆ ಕಿರಣಳ ಅಣ್ಣನಿಗೆ ಒಂದು ತಿಂಗಳು ಅಹಮದಾಬಾದಕ್ಕೆ ಹೋಗಿರಬೇಕಾಗಿ ಬಂತು. ಕಿರಣಳ ಸೋದರ ಮಾವ ಭಾವೂ ಸಾಹೇಬರು ಅಕಸ್ಮಾತ್ ತೀರಿಕೊಂಡು ಎರಡು ತಿಂಗಳಾಗಿತ್ತು. ಅವರಿಗಾಗಲೇ ಅರವತ್ತರ ಹತ್ತಿರ ಬಂದಿತ್ತು. ಆದರೂ ನೋಡಲು ಗಟ್ಟಿಗರಾಗಿಯೇ ಇದ್ದರು. ಒಂದು ದಿನ ಇದ್ದಕಿದ್ದಂತೆ ಎದೆ ನೋವು ಎಂದು ಮಲಗಿದವರು ಮತ್ತೆ ಏಳಲಿಲ್ಲ. ಕಿರಣ, ಕಿರಣಳ ಅಣ್ಣ, ಅತ್ತಿಗೆ ಹೋಗುವದರೊಳಗಾಗಿ ಅಂತ್ಯವಿಧಿಗಳೂ ಆಗಿಹೋಗಿದ್ದವು. ಭಾವೂ ಸಾಹೇಬರ ಹೆಂಡತಿ ಸತ್ತು ಬಹಳ ವರ್ಷಗಳಾಗಿದ್ದವು. ಇದ್ದ ಒಬ್ಬ ಮಗಳು ಲಗ್ನವಾಗಿ ವೆಸ್ಟ್ ಇಂಡೀಜ್‌ದಲ್ಲಿ ಚೀಫ್ ಸೆಕ್ರೆಟರಿಯಾಗಿದ್ದ ಗಂಡನೊಡನೆ ಸಂಸಾರ ಹೂಡಿಕೊಂಡಿದ್ದಳು.

ಭಾವೂ ಸಾಹೇಬರು ಮಗಳ ಹೆಸರಿನಲ್ಲಿ ೫೦,೦೦೦ ರೂಪಾಯಿ ಬರೆದಿಟ್ಟು ಅಹಮದಾಬಾದಿನ ನಾಲ್ಕು ಮಿಲ್ಲುಗಳ ಒಡೆತನವನ್ನೆಲ್ಲ ಶ್ರೀಪತರಾಯರಿಗೇ ವಹಿಸಿಟ್ಟು ಹೋಗಿದ್ದರು. ಆ ಮಿಲ್ಲುಗಳು ಹುಟ್ಟಲು ಕಾರಣರಾದವರೂ ಶ್ರೀಪತರಾಯರ ತಂದೆಯೇ ಆಗಿದ್ದರು.

ಶ್ರೀಪತರಾಯ ವ್ಯವಹಾರದ ಉಳಿದ ಎಲ್ಲ ಕೊಡುವ ತಕ್ಕೊಳ್ಳುವದನ್ನು ತೀರಿಸಿ ಮಿಲ್ಲುಗಳ ಯೋಗ್ಯ ವ್ಯವಸ್ಥೆ ಮಾಡಿ ಅಲ್ಲಿಯೇ ಒಂದೆರಡು ತಿಂಗಳಿದ್ದು ಮುಂಬಯಿಗೆ ಬರುವದಾಗಿ ಹೇಳಿ ತಂಗಿಯನ್ನು ತಿರುಗಿ ಕಳಿಸಿಕೊಟ್ಟನು. ಮುಂಬಯಿಯ ವ್ಯವಹಾರವೆಲ್ಲ ನುರಿತ ಮ್ಯಾನೇಜರರ ಕೈಯಲ್ಲಿ ಚನ್ನಾಗಿಯೇ ಸಾಗುವಂತಿದ್ದರೂ ಕಿರಣಳೂ ಮುಂಬಯಿಯಲ್ಲಿದ್ದುಕೊಂಡು ಆಗಾಗ ಮಿಲ್ಲುಗಳಿಗೆ ಹೋಗಿ ವಿಚಾರಿಸಿಕೊಂಡಿರುವದು ಒಳ್ಳೆಯದೆಂದು ಆಕೆಗೆ ಮುಂಬಯಿಯಲ್ಲಿಯೇ ಇರಹೇಳಿದ್ದನು.

ಹಾಗೆಂದು ಆಕೆಯ ಮುಂಬಯಿಯ ಕಾರ್ಯಕ್ರಮಗಳಿಗೇನೂ ಕೊರತೆ ಇರಲಿಲ್ಲ. ಸೋದರ ಮಾವನ ಮರಣದ ನೋವು ಆರುತ್ತ ಬಂದಿತ್ತು. ಕಾಲೇಜಿನ ಗೆಳತಿಯರೋ, ಗೆಳೆಯರೋ ಕೂಡಿ ಮುಂಬಯಿಯ ಸುತ್ತ ಎಲ್ಲಿಯಾದರೂ ಪಿಕ್‌ನಿಕ್ ತೆಗೆದರೆ ಹೋಗಿ ಬರುತ್ತಿದ್ದಳು. ಕೋನ್ಹೇರಿ ಗುಹೆಗಳಿಗೆ ಐದನೆಯ ಬಾರಿಯೂ ಕಾರ್ಲೆಗೆ ಎರಡನೆಯ ಬಾರಿಯೂ ಹೋಗಿ ಬಂದುದಾಯಿತು.

ಒಮ್ಮೆ ಎಲೆಫಂಟಾಕ್ಕೆ ಲಾಲಾನ ಮನೆಯವರೂ, ಪ್ರೊಫೆಸರ್ ಪಾರಿಖರೂ, ಆಕೆಯೂ ಕೂಡಿ ಹೋಗಿದ್ದರು. ರಮೇಶನೂ ಒಂದು ದಿನದ ಮಟ್ಟಿಗೆ ಕೆಲಸದ ಜಂಜಡ ತಪ್ಪಿಸಿಕೊಂಡಿದ್ದನು. ಎಲೆಫಂಟಾದ ವಿಗ್ರಹಗಳನ್ನು ನೋಡುತ್ತ ಲಲಿತಕಲೆ, ಸಾಹಿತ್ಯ–ಜೀವನ ಸೌಂದರ್ಯ ಎಂದು ಮುಂತಾಗಿ ರಮೇಶನೂ ಕಿರಣನೂ ವಾದವಿವಾದವೆಬ್ಬಿಸಿ ಲಾಲಾಗೆ ತೀರ ಬೇಸರ ತಂದಿದ್ದರು. ಪಾರೀಖರು ಮಾತ್ರ ಮಧ್ಯೆ ಮಧ್ಯೆ ವಾದದೊಡನೆಯೂ ಸೇರಿ ಸಣ್ಣ ಲೆಕ್ಚರು ಕೊಡುತ್ತ ಎಲ್ಲರನ್ನೂ ನಗಿಸುತ್ತ 'ಬೆಲೆನ್ಸ್ ಆಫ್ ಹ್ಯುಮರ್' ತಂದಿದ್ದರು.

ಅಂಥದೊಂದು ಪ್ರಸಂಗದಲ್ಲಿ ಹಿಂದೆ ಘಟಿಸಿದ ಒಂದು ಸಂಗತಿಯನ್ನು ಹೇಳಿದರು.

'ಒಮ್ಮೆ ಹೀಗಾಯಿತು. ಎಂಟ್ಪತ್ತು ಜನ ಕಾಲೇಜು ವಿದ್ಯಾರ್ಥಿಗಳೊಡನೆ

ನಾವು ಒಬ್ಬಿಬ್ಬರು ಪ್ರೊ. ಗಳೂ ಇಲ್ಲಿ ಟ್ರಿಪ್‌ಗೆ ಬಂದಿದ್ದೆವು. ಅವರಲ್ಲಿ ಶ್ಯಾಮ ಸುಂದರಂ ಅಂತ ಒಬ್ಬ ಹುಡುಗನಿದ್ದ. ತುಂಬ ಅಭಿಮಾನಿ. ಒಳ್ಳೆಯ ಕಲಾವಂತ. ಕಾಲೇಜಿನಲ್ಲಿದ್ದಾಗಲೇ ಅವನ ಒಂದೆರಡು ಚಿತ್ರಗಳು ಆರ್ಟ್ ಎಗ್ಸಿಬಿಶನ್‌ಗೆ ಹೋಗಿದ್ದವು. ಆದರೆ ಮನುಷ್ಯ ಸ್ವಲ್ಪ ಎಕ್ಸ್ಟ್ರಾ ಆರ್ಡಿನರಿ. ತನ್ನ ಕಲಾ ಪ್ರಪಂಚದಲ್ಲಿ ಮುಳುಗಿದವನಿಗೆ ಹೊರಗಿನ ಯಾವುದರ ಧ್ಯಾನವೂ ಇರುತ್ತಿರಲಿಲ್ಲ.

ನೋಡಲು ಸುಂದರನಾಗಿ ಎತ್ತರವಾಗಿ ಭವ್ಯವಾಗಿದ್ದನು. ಹೀಗಾಗಿ ಕಾಲೇಜಿನ ವಿದ್ಯಾರ್ಥಿನಿಯರದೆಲ್ಲ ಅವನ ಮೇಲೆಯೇ ಕಣ್ಣು. ಅವರಲ್ಲಿ ಮೋಲಿನಾ ಜಯವಂತ ಅಂತ ಉತ್ತರ ಹಿಂದುಸ್ಥಾನದ ಹುಡುಗಿಯೊಬ್ಬಳು ಆತನಿಗೆ ಬಹಳ ಮನಸೋತಿದ್ದಳು. ಅವಳ ತಂದೆ ಇಲ್ಲಿಯ ಟಾಟಾ ಇಂಡಿಸ್ಟ್ರೀಲಿ ಚೀಫ್ ಆರ್ಗನೈಸರ್ ಆಗಿದ್ದನು. ಶ್ರೀಮಂತಿಕೆ, ಅಧಿಕಾರ, ಸೌಂದರ್ಯ ಎಲ್ಲದ ರಿಂದಲೂ ಬಿಂಕಗೊಂಡ ಆ ಹುಡುಗಿ ಈ ಕಲಾವಿದನ ಪರಿಚಯ ಮಾಡಿ ಕೊಳ್ಳಲಿಕ್ಕೆ ಬಹಳ ಪ್ರಯತ್ನ ಮಾಡಿದಳು. ಆದರೆ ಆ ಬಡವನಿಗೆ ಇನ್ನೂ ಹೆಣ್ಣು, ಗಂಡು, ಪ್ರೇಮ, ಗೆಳೆತನ ಇವುಯಾವುದರ ಅರಿವೂ ಇದ್ದಂತಿರಲಿಲ್ಲ. ಆಕೆ ನಿತ್ಯ ಚಹಕ್ಕೆ ಕರೆಯಬೇಕು. ಆತ ಹೂ ಎಂದು ಹೇಳಿಬಿಟ್ಟು ಒಂದು ದಿನವೂ ಹೋಗದಿರಬೇಕು. 'ಏಕೆ ಬರಲಿಲ್ಲ?' ಎಂದು ಕೇಳಿದರೆ 'ಮನಸ್ಸಾಗಲಿಲ್ಲ' ಎಂದೋ 'ನೆನಪಿರಲಿಲ್ಲ' ವೆಂದೋ ನಿರ್ಭಿಡೆಯಿಂದ ಹೇಳಿಬಿಡುತ್ತಿದ್ದನು. ಹಾಗೆ ಯಾವಾಗಾದರೊಮ್ಮೆ ಹೋದರೂ ಏನಾದರೂ ನೆನಪಾದರೆ, ಇಲ್ಲವೆ ಯಾವದಾದರೊಂದು ಚಿತ್ರದ 'ಮೂಡ್' ಬಂದರೆ ಅರ್ಧ ಕುಡಿದ ಚಹವನ್ನೂ ಹಾಗೆಯೇ ಬಿಟ್ಟು ಹೋಗುತ್ತೇನೆ ಎನ್ನುವ ಸೌಜನ್ಯವನ್ನೂ ತೋರಿಸದೆ ನಡೆದುಬಿಡುತ್ತಿದ್ದನು.

ಆ ದಿನ ಶ್ಯಾಮಸುಂದರಂ ಟ್ರಿಪ್‌ಗೆ ಬರುವವನಿದ್ದಾನೆಂದು ಕೇಳಿ ಅದೇ ಮುನ್ನಾದಿನ ಬಂದುಹೋಗಿದ್ದರೂ ಆ ಹುಡುಗಿ ಮತ್ತೆ ಬಂದಿದ್ದಳು. ಆತ ಇದೇ ಮೂರ್ತಿಯ ಎದುರು ನಿಂತು ತನ್ನ ಕ್ಯಾಮರಾ ಎಜಸ್ಟ್ ಮಾಡತೊಡಗಿದ್ದನು. ಆ ಹುಡುಗಿಯೂ ಆತ ಫೋಟೋ ತೆಗೆಯುತ್ತಿದ್ದುದನ್ನು ಅರಿತೋ, ಅರಿಯದೆಯೋ ವಿಗ್ರಹದ ಎದುರು ತೀರ ಸನಿಹದಲ್ಲಿ ಕಲೆಯನ್ನು ಬಹಳ ಸೂಕ್ಷ್ಮವಾಗಿ ಪರೀಕ್ಷಿಸುತ್ತಿರುವಂತೆ ನಿಂತಿದ್ದಳು. ಅವಳ ಅಸ್ತಿತ್ವದ ಕಲ್ಪನೆಯೂ

ಅವನಿಗೆ ಇರಲಿಲ್ಲ. ವಿಗ್ರಹದ ಮೇಲೆಯೇ ಕಣ್ಣಿಟ್ಟಿದ್ದು ಆಕೆ ನಿಂತಿರುವದನ್ನೂ ಕಾಣದಿರುವಷ್ಟು ನಿರ್ಲಕ್ಷವಿತ್ತು ಬಾಹ್ಯ ಪ್ರಪಂಚದ ಮೇಲೆ ಅವನಿಗೆ.

ಕ್ಯಾಮರಾ ಕ್ಲಿಕ್ ಎಂದಾಗ ಮೊಲಿನಾ ತಿರುಗಿ, ಆತನ ಕೈಯಲ್ಲಿಯ ಕ್ಯಾಮರಾ ನೋಡಿ ತನಗಾಗಿಯೇ ಫೋಟೋ ತೆಗೆದಿರಬೇಕೆಂದು ಊಹಿಸಿ ಕೊಂಡು ಕೊರಳು ಕೊಂಕಿಸುತ್ತ ಹೇಳಿದಳು,

" ನನ್ನ ಒಂದು ಮಾತು ಕೇಳಿದ್ದರೆ ನಾನೇನೂ ಬೇಡ ಅನುತ್ತಿರಲಿಲ್ಲವಲ್ಲ. ಬೇಕಾದರೆ ನನ್ನ ರೊಲೆಕ್ಸ್ ಕ್ಯಾಮರಾನೇ ಕೊಡುತ್ತಿದ್ದೆ "

ಶ್ಯಾಮಸುಂದರಗೆ ಆಕೆ ತನ್ನನ್ನು ತಪ್ಪು ತಿಳಿದಿದ್ದಕ್ಕೆ, ವಿಪರೀತ ಕೋಪ ಬಂದಿತು. ಆಕೆಯ ಚಿತ್ರವೂ ತನ್ನ ಫೋಟೋದಲ್ಲಿ ಮೂಡಬಹುದೆಂಬ ಕಲ್ಪನೆ ಆತನಿಗೆ ಆಗಲೂ ಇರಲಿಲ್ಲ. ತಟ್ಟನೆ ನುಡಿದನು,

" ಏನಾದರೂ ಹರಟಬೇಡಿರಿ. ನಿಮ್ಮನ್ನು ಕೇಳದೆ ನಿಮ್ಮ ಫೋಟೋ ತೆಗೆದುಕೊಳ್ಳುವಷ್ಟು ಕುಸಂಸ್ಕೃತಿ ನನ್ನಲ್ಲಿಲ್ಲ. ಆ ವಿಗ್ರಹದ ಸ್ನ್ಯಾಪ್ ಹೊಡೆದಿದ್ದೇನೆ. ನನಗೆ ನನ್ನ ಚಿತ್ರದ ಹಿನ್ನೆಲೆಗೆ ಅದು ಬೇಕಾಗಿತ್ತು "

ಮೊಲಿನಾಗೆ ಮುಖ ಭಂಗವಾದಂತಾಯಿತು. ತನ್ನ ಚಿತ್ರವೂ ಅದರಲ್ಲಿ ಮೂಡಿರಲೇಬೇಕೆನ್ನುವ ಖಾತ್ರಿಯೂ ಇತ್ತು ಅವಳಲ್ಲಿ. ನಗುತ್ತ ಹೇಳಿದಳು,

" ನೋಡಿ ಅಷ್ಟು ದೊಡ್ಡ ಮಾತಾಡಿ ನೀವೇನೂ ತಪ್ಪಿಸಿಕೊಳ್ಳಬೇಕಾಗಿಲ್ಲ. ನನ್ನ ಫೋಟೋ ತೆಗೆದಿರೆಂತ ನಾನೇನೂ ಸಿಟ್ಟಾಗಿಲ್ಲ. ನನ್ನನ್ನು ಒಂದು ಮಾತು ಕೇಳಬಹುದಾಗಿತ್ತು ಎಂದೆ. ಡೆವಲಪ್ ಮಾಡಿಸಿ ನನಗೂ ಒಂದು ಕಾಪಿ ಕೊಟ್ಟರೆ ತುಂಬ ಆಭಾರಳಾಗುತ್ತೇನೆ "

ತಾನು ಆಕೆಯ ಚಿತ್ರ ತೆಗೆದಿಲ್ಲವೆಂದು ಆತನೂ ತನ್ನ ಹಠ ಸಾಧಿಸಿದನು. ಆದರೆ ಡೆವಲಪ್ ಮಾಡಿಸಿದಾಗ ಆತನಿಗೆ ತನ್ನ ತಪ್ಪು ತಿಳಿಯಿತು. ಆಕೆ ಹೇಳಿದಂತೆ ಮೊಲಿನಾಳ ಚಿತ್ರ ಅಚ್ಚಳಿಯದೆ ಮೂಡಿತ್ತು. ಇಷ್ಟೇ ಅಲ್ಲ ಒಂದು ನಿರ್ಜೀವ ಭವ್ಯ ವಿಗ್ರಹ, ಇನ್ನೊಂದು ಸಜೀವ ಸುಂದರ ಯುವತಿ ; ಇವೆರಡು ಚಿತ್ರಗಳಿಂದ ಕೂಡಿ ಫೋಟೋ ಅತ್ಯಂತ ಸುಂದರವಾಗಿ ಬಂದಿತ್ತು. ಆತ ಸೋಲ ನ್ನೊಪ್ಪಬೇಕಾಯಿತು.

ಒಂದಲ್ಲ ಎರಡು ವಿಷಯಗಳಲ್ಲಿ.

" ಅಂದರೆ ?"

"ಒಂದು ಫೋಟೋ ವಿಷಯದಲ್ಲಿ. ಇನ್ನೊಂದು....ಈಗ ಶ್ರೀಯುತ ಶ್ಯಾಮಸುಂದರಂ 'ಆರ್ಟಿಸ್ಟ್' ಶ್ರೀಮತಿ ಮೊಲಿನಾದೇವಿಯವರೊಡನೆ ಸಂಸಾರ ಹೂಡಿ ಲಖನೌದಲ್ಲಿ ಸ್ಟುಡಿಯೋ ಇಟ್ಟಿದ್ದಾರೆ. ಮೊನ್ನೆ ಮಗನ ಹುಟ್ಟು ಹಬ್ಬಕ್ಕೆ ಕರೆಯೋಲೆ ಬಂದಿತ್ತು. ಬಡ ಪ್ರೊಫೆಸರ್‌ರನ್ನು ಮರೆಯಲಿಲ್ಲ.'

ಆ ದಿನ ಸಂಜೆಯ ವರೆಗೆ ನಾಲ್ವರೂ ವಿಗ್ರಹ ನೋಡುವದಕ್ಕಿಂತ ಬ್ರಿಜ್ ಆಟ ಹೆಚ್ಚು ಇಂಟರೆಸ್ಟಿಂಗ್ ಎಂದುನಿರ್ಣಯಿಸಿಕೊಂಡು, ಎಂಟು ಜನರಿಗಾಗು ವಷ್ಟು ಕಟ್ಟಿ ಒಯ್ದಿದ್ದ ಡಬ್ಬವನ್ನು ಯಥೇಚ್ಛ ತಿಂದು ಉಳಿದುದನ್ನು ಚೆಲ್ಲಿ ಮುಂಬಯಿಗೆ ತಿರುಗಿದ್ದರು. ತಿರುಗಿ ಸ್ಟೀಮರ್ ಮೇಲೆ ಕುಳಿತಾಗ ಕಿರಣ ರಮೇಶನನ್ನು ಕೇಳಿದಳು,

"ಬಹಳ ಮಜಾ ಆಯಿತಲ್ಲವೆ ?"

"ಏನೋ, ಹಿಂದೊಮ್ಮೆ ನಾನು ಅಕ್ಕ, ಭಾವನೊಡನೆ ಇಲ್ಲಿಗೆ ಬಂದಾಗ ಎಲೆಫಂಟಾದ ಗುಹೆಗಳಲ್ಲಿ ದಿವ್ಯಶಾಂತಿ, ಸ್ಥಿರತೆಯನ್ನು ತಂದುಕೊಡುವ ಶಕ್ತಿ ಇದೆ ಎಂದುಕೊಂಡಿದ್ದೆ. ಈವತ್ತು ಅಂಥದೇನೂ ಅನಿಸಲಿಲ್ಲ"

ಎಂದು ಹೇಳಿದಾಗ ಕಿರಣ ನಕ್ಕಿದ್ದಳು.

ರಜೆಯಲ್ಲಿ ಕಿರಣ ಮುಂಬಯಿಯಲ್ಲಿಯೇ ಇದ್ದಾಗ ನಿತ್ಯ ಲಾಲಾನ ಮನೆಗೆ ಬಂದು ಹೋಗುತ್ತಿದ್ದಳು. ಅದಕ್ಕೆ ಹೊತ್ತು ಗೊತ್ತು ಯಾವ ವಿಚಾರವೂ ಬೇಕಿರಲಿಲ್ಲ. ಬಂದು ಆಫೀಸಿನಲ್ಲಿಯೋ, ತನ್ನ ಕೋಣೆಯಲ್ಲಿಯೋ ಇರುತ್ತಿದ್ದ ರಮೇಶನೊಡನೆ ಹರಟೆ ಹೊಡೆಯುತ್ತ ಕುಳಿತಿರುತ್ತಿದ್ದಳು. 'ನಿಮಗೆ ಕೆಲಸವಿಲ್ಲದಿದ್ದರೆ ಇದನ್ನಷ್ಟು ಕಾಪಿ ಮಾಡಿ' ಎಂದು ನಗುತ್ತ ರಮೇಶ ಆಫೀಸಿನ ಏನಾದರೂ ಕೆಲಸ ಕೊಟ್ಟರೆ 'ಯಸ್ ಸರ್' ಎಂದು ಗಂಭೀರವಾಗಿ ಅದನ್ನು ತಗೊಂಡು ಒಂದು ಹತ್ತು ನಿಮಿಷ ಬರೆಯುತ್ತ ಕುಳಿತಿರುತ್ತಿದ್ದಳು. ಕಡೆಗೆ ಬೇಸರ ಬಂದು 'ಈವತ್ತಿನ ಎಂಗೇಜ್‌ಮೆಂಟ್ಸ್ ಓದಿದೀರೇನ್ರಿ ಪೇಪರಿನಲ್ಲಿ ?' ಎಂದು ಕೇಳತೊಡಗುತ್ತಿದ್ದಳು.

ಬಿ. ಬಿ. ಆರ್. ಎ. ಸೊಸೈಟಿಯ ವತಿಯಿಂದ ಟೌನ್ ಹಾಲ್‌ನಲ್ಲಿ ಮಿ. ಎಂಥನಿ ವಾಲ್ಟರ್‌ರ 'My Impressions on Asia' ಎನ್ನುವ ಲೆಕ್ಚರ್ ಇದೆ. ಅವರು ಬಹು ದೊಡ್ಡ ಮಾತುಗಾರರಂತೆ."

ಅಷ್ಟರ ನಂತರ ರಮೇಶ ಸಹಜವಾಗಿಯೇ, ಹಾಗಾದರೆ ಹೋಗಿ ಬರೋಣ

ಅನ್ನುತ್ತಿದ್ದ. ಇಬ್ಬರೂ ಅಲ್ಲಿಂದ ಹೊರಟರೆ ನಿಜವಾಗಿ ಕಾರ್ಯಕ್ರಮಗಳಿದ್ದಲ್ಲಿ ಹೋಗುವ ಪ್ರಸಂಗಗಳು ಬಹಳ ಕಡಿಮೆ.

"ಅದೆಲ್ಲಾ 'ಪ್ರಾಪಗಾಂಡಾ' ಲೆಕ್ಚರು ಎಂದು ಕಿರಣ ತಾನೇ ಹೇಳಿಬಿಟ್ಟು ಲಿಬರ್ಟಿಯತ್ತ, ಜುಹುದತ್ತ ಎಲ್ಲಿಯಾದರೂ ಕಾರನ್ನು ತಿರುಗಿಸಿಬಿಡುತ್ತಿದ್ದಳು."

ಇಲ್ಲವೆ 'ನಿಮ್ಮಂತೆ ಕೆಲಸವಿಲ್ಲದೆ ಮೇಲೆ ಲಾಲಾ ಕುಳಿತಿದ್ದಾನೆ' ಅವನೊಡನೆ ಹರಟೆ ಹೊಡೆಯುತ್ತೀರಿ ಎಂದು ರಮೇಶ ಸೂಚಿಸಿದರೆ 'ಏಕೆ ನನ್ನೊಡನೆ ಮಾತಾಡಿ ಬೇಸರ ಬಂದುಬಿಟ್ಟಿತೆ? ನಾಳೆನಿಂದ ಬರುವದಿಲ್ಲ' ಎನ್ನುತ್ತಿದ್ದಳು. ಇಲ್ಲವೆ ಬ್ಯಾಡ್‌ಮಿಂಟನ್ ರ್‍ಯಾಕೆಟ್ ಹಿಡಿದುಕೊಂಡು ಗಡಗಡನೆ ಬಂದು 'ಈ ಹೊತ್ತು ಹೊಟ್ಟೆ ತುಂಬ ಆಡಬೇಕಾಗಿದೆ. ಆಯರ್ವಿನ್ ಕ್ಲಬ್ಬಿನ ಮಕ್ಕಳಾಟ ಬೇಸರ ಬಂದುಹೋಯಿತು' ಎಂದು ರಮೇಶ ಏನಾದರೂ ಹೇಳುವ ಮೊದಲೇ ಅವನನ್ನು ಎಬ್ಬಿಸಿಕೊಂಡು ನಡೆದುಬಿಡುತ್ತಿದ್ದಳು. ಮೇಲೆ ಲಾಲಾ ಇವಳಿಗಾಗಿಯೇ ಕಾದು ಕುಳಿತಿರುವನೆಂದು ಅರಿತಿದ್ದ ರಮೇಶನಿಗೆ ಉಭಯಸಂಕಟವಾಗುತ್ತಿತ್ತು.

## ೨೦

ಒಂದು ರವಿವಾರ ಮಧ್ಯಾಹ್ನ ರಮೇಶ ಚಹ ಕುಡಿದು ಬಿಸಿನೆಸ್ ವರ್ಲ್ಡ್ ಪತ್ರಿಕೆ ಓದುತ್ತ ಕುಳಿತಿದ್ದನು. ಲಾಲಾ ಆಗಷ್ಟೆ ಸ್ನೇಹಲತಾ ವರೇರ್ ಕರ್‌ಳೊಡನೆ ಯಾವದೋ ಮ್ಯಾಟನಿಗೆ ಹೋಗಿದ್ದನು. ಲಾಲಾ ಫೋನಿನಲ್ಲಿ ಕಿರಣಳನ್ನು ಕರೆದಾಗ ಆಕೆ ತನಗೆ ಮತ್ತೆಲ್ಲಿಯೋ ಹೋಗಬೇಕೆಂದು ಹೇಳುವದಕ್ಕೂ 'ಏಳಿ ಯಾವದಾದರೂ ಮ್ಯಾಟನಿಗೆ ಹೋಗೋಣ' ಅನ್ನುತ್ತ ಸ್ನೇಹಲತೆ ಮನೆಗೆ ಬರುವದಕ್ಕೂ ಸರಿಹೊಂದಿತ್ತು. ಸ್ನೇಹಲತೆ ಕಿರಣಳ ಸಹಪಾಠಿ. ಆಕೆಯೇ ಲಾಲಾನಿಗೆ ಅವಳ ಪರಿಚಯ ಮಾಡಿಸಿದ್ದಳು. ಹ್ಯಾಕೋರ್ಟು ಜಡ್ಜಿಯೊಬ್ಬರ ಮಗಳಾಕೆ. ಸ್ವಭಾವದಿಂದ ಬಹಳ ಗೌರವ. ನಾಚಿಕೆಯ ಸ್ವಭಾವ. ಆಗಾಗ ಲಾಲಾನ ಮನೆಗೆ ಬಂದು ಹೋಗುತ್ತಿರುತ್ತಿದ್ದಳು.

ರಮೇಶ ಬೇಸರಗೊಂಡು ತಾನೂ ಯಾವದಾದರೂ ಮ್ಯಾಟನಿಗೆ ಹೋದರಾಗುತ್ತಿತ್ತಲ್ಲ ಎಂದುಕೊಂಡು ವಾಚು ನೋಡಿಕೊಂಡನು. ಮೂರುವರೆಗೆ ಹತ್ತು ನಿಮಿಷಗಳಿದ್ದವು. ಇನ್ನೆಲ್ಲಿ ಹೋಗುವದು ಎಂದು ಆಕಳಿಸುತ್ತಿದ್ದ ಹಾಗೆಯೇ ಫೋನಿನ ಗಂಟೆ ಬಾರಿಸಿತು. ಕಿರಣ ಮಾತಾಡುತ್ತಿದ್ದಳು.

"ಮೂರು ದಿನಗಳ ಹಿಂದೆಯೇ ಇಂದಿನ ಮ್ಯಾಟನಿಗೆ ಲಿಬರ್ಟಿಯಲ್ಲಿ ರಿಜರ್ವ್ ಮಾಡಿಸಿದ್ದೆ. ಮೂರುವರೆಗೆ ಇನ್ನು ಹತ್ತೇ ನಿಮಿಷವಿದೆ. ಚಟ್ಟನೆ ಟ್ಯಾಕ್ಸಿ ಮಾಡಿಕೊಂಡು ಬನ್ನಿ."

"ಮತ್ತೆಲ್ಲಿಯೋ ಹೋಗಬೇಕು ಎಂದಿದ್ದಿರಲ್ಲ?"

"ಹೇಳಿದ್ದೆ. ಹೋಗಲಿಲ್ಲ. ಮಾತಾಡಿ ಹೊತ್ತು ಕಳೆಯಬೇಡಿ. ನಾನು ಮೇಲಿನ ವೇಟಿಂಗ್ ರೂಮಿನಲ್ಲಿರುತ್ತೇನೆ."

ಎಂದು ಹೇಳಿ ಕಿರಣ ಇನ್ನೇನು ಮಾತಾಡುವದಕ್ಕೂ ಅವಕಾಶವೀಯದೆ ರಿಸೀವ್ಹರ್ ಇಟ್ಟುಬಿಟ್ಟಳು. ರಮೇಶ ಲಗುಬಗೆಯಿಂದ ಅರಿವೆ ಧರಿಸಿ ಲಿಬರ್ಟಿಗೆ ಬಂದಾಗ ಆಗಲೆ ನ್ಯೂಸ್ ಆರಂಭವಾಗಿತ್ತು. ಇಬ್ಬರೂ ಒಳಗೆ ಹೋಗಿ ಕುಳಿತರು.

ಐದು ಮುಕ್ಕಾಲಿಗೆ ಚಿತ್ರ ಮುಗಿದು ಇಬ್ಬರೂ ಹತ್ತಿರವೇ ಇದ್ದ ವೆಸ್ಟ್ ಎಂಡ್ ಹೊಟೆಲ್‌ಗೆ ಹೋಗಿ ಒಂದು ಫೆಮಿಲಿ ರೂಮು ಹಿಡಿದು ಚಹ, ಕ್ರೀಮ್, ಬಿಸ್ಕೀಟು, ಕೇಕ್ಸ್ ಆರ್ಡರು ಕೊಟ್ಟು ಕುಳಿತರು.

"ಜೀವನ ವಾದಕ್ಕೂ ಸ್ವಾರ್ಥಕ್ಕೂ ಎಷ್ಟು ಹತ್ತಿರದ ಸಂಬಂಧ ಎನ್ನುವದನ್ನು ತೋರಿಸಲು ಇದೂ ಒಂದು ದೃಷ್ಟಾಂತ."

ಎಂದು ಚಿತ್ರದ ಕಥೆಯನ್ನುದ್ದೇಶಿಸಿ ಕಿರಣ ನುಡಿದಳು.

"ಇದ್ದೀತು. ಚಿತ್ರಕಥೆ ಬರೆದವರು, ನಟಿಸಿದವರು, ಡೈರೆಕ್ಟ್‌ಮಾಡಿದವರು ಎಲ್ಲ ಸಾವಿರದ ಒಂಬತ್ತುನೂರಾ ಐವತ್ತು ಮೂರನೆಯ ಇಸ್ವಿಯ ಮುಂಬಯಿಯ ಜನ ಅಂದ ಮೇಲೆ ಅದಕ್ಕೂ ಬೇರೆ ಮತ್ತೇನನ್ನು ಅಪೇಕ್ಷಿಸುತ್ತೀರಿ?"

"ಇಲ್ಲ ಕಥೆ ರಿಯಲಿಸ್ಟಿಕ್ ಆಗಿಯೇ ಇದೆ. 'ನೀನು ಜೀವಿಸು, ಉಳಿದವರನ್ನೂ ಜೀವಿಸಗೊಡು' ತತ್ವದಲ್ಲಿ ಮೊದಲನೆಯ ತತ್ವ ತಾನು ಜೀವಿಸುವದು. ಅಂತೆಯೇ ಚಿತ್ರದಲ್ಲಿಯ ವ್ಹಿಲನ್‌ನನ್ನು ವ್ಹಿಲನ್ ಅನ್ನಬರುವದಿಲ್ಲ. ಮೊನ್ನೆ ಪೇಪರಿನಲ್ಲಿ ಈ ಚಿತ್ರದ ಕಮೆಂಟ್ಸ್ ಓದುವಾಗ ಇದನ್ನು ನೀವು ನೋಡಬೇಕು ಅನ್ನಿಸಿತು. ಅದಕ್ಕೆ ಬರಹೇಳಿದೆ."

"ಬಹಳ ಉಪಕಾರವಾಯಿತು."

ರಮೇಶ ಅನ್ಯಮನಸ್ಕನಾಗಿ ಚಹದ ಹುಡುಗನು ತರುತ್ತಿದ್ದ ಟ್ರೇಯನ್ನೇ ನೋಡುತ್ತ ನುಡಿದನು.

"ಈವತ್ತು ಆಡುವದು ಗೀಡುವದು ಏನೂ ಬೇಡ. ಚಹ ಕುಡಿದು ಜುಹುಬೀಚಿಗೆ ಹೋಗೋಣ. ನಿಮ್ಮ ಬಿಸಿತಲೆಗೆ ಸ್ವಲ್ಪ ಶಾಂತ, ತಂಪಾದ ಗಾಳಿ ತಾಗಬೇಕು. ಅಲ್ಲಿಯೇ ರಾತ್ರಿ ಊಟಮಾಡಿ ಬಂದರಾಯಿತು. ನೀವೂ

ನಾನಾಗೆ ಫೋನು ಮಾಡಿಬಿಡಿ, ಊಟಕ್ಕೆ ಬರುವದಿಲ್ಲವೆಂದು. ನನಗೂ ಮನೆಯ ಊಟ ಬೇಸರವಾಗಿದೆ. ಅಣ್ಣನೂ ಇಲ್ಲದ್ದರಿಂದ ಒಬ್ಬಳೇ ಉಣ್ಣುವದೂ ಬೇಡವಾಗಿದೆ."

"ಹಾಗಾದರೆ ಲಾಲಾನ ಮನೆಗೆ ಬಂದುಬಿಡಿರಿ. ಅವರಿಗೂ ಬಹಳ ಸಂತೋಷವಾಗುವದು. ನಾನಾನ ಕೈಯ ಅಮೃತ ಉಂಡು ರಾತ್ರಿ ಬ್ರಿಜ್ಜು ಹಚ್ಚಬಹುದು."

"ಬೇಡ, ಲಾಲಾ ಇಲ್ಲದ ಹರಟೆಗೆ ತೊಡಗುತ್ತಾರೆ. ಮೇಲಾಗಿ ಇಲ್ಲಿಯವರೆಗೆ ಒಮ್ಮೆಯೂ ನಾನಲ್ಲಿ ಊಟ ಮಾಡಲಿಲ್ಲ. ಈಗ ನಾನಾಗಿಯೇ ಹೋದರೆ ಏನಾದರೂ ತಿಳಿದುಕೊಳ್ಳಬಹುದು."

"ಏನಾದರೂ – ಏನೂ ತಿಳಿದುಕೊಳ್ಳುವದಿಲ್ಲ. ನಡೆಯಿರಿ. ನನ್ನನ್ನು ಹೋಟೆಲ್ಲಿಗೆ ಕರೆದರೆ ನಾನು ಮಾತ್ರ ಏನಾದರೂ ತಿಳಿದುಕೊಳ್ಳುವದಿಲ್ಲ – ಅಲ್ಲವೆ ?"

"ಇಲ್ಲ, ಹಾಗೆ ಮನುಷ್ಯರು ಬಹಳ ಬುದ್ಧಿವಂತರಿದ್ದೀರಿ. ತಲೆಯೊಳಗಿನ ನರೆಬಣ್ಣದ ವಸ್ತು ಮಾತ್ರ ಸ್ವಲ್ಪ ಕಡಿಮೆ. ನೋಡಿ ಬಹಳ ಹಠ ಮಾಡಬೇಡಿರಿ."

"ಬರುವದಿಲ್ಲ ಎಂದರೆ ?"

"ಕೈಹಿಡಿದು ಎಳೆದೊಯ್ಯಬೇಕಾಗುವದು."

ರಮೇಶನ ಕೈಹಿಡಿದು ಎಳೆಯುವಂತೆ ನಟಿಸುತ್ತ ಕಿರಣ ನುಡಿದಳು.

"ಬರದಿರಲು ಅಂಥ ಅನಾನುಕೂಲತೆಯೇನೂ ಇಲ್ಲವಲ್ಲ. ಸುಳ್ಳೇ ಜರಬು ತೋರಿಸಬೇಡಿ."

"ನೀವು ತಪ್ಪು ಮನುಷ್ಯನನ್ನು ಒತ್ತಾಯಪಡಿಸುತ್ತಿದ್ದೀರಿ."

ಕೇಕಿನ ಚೂರನ್ನು ಬಾಯಲ್ಲಿಟ್ಟುಕೊಳ್ಳುತ್ತ ರಮೇಶ ನುಡಿದನು—

"ಹಾಗಿದ್ದರೆ ಲಾಲಾನಿಗೂ ಫೋನು ಮಾಡುವ. ಗಿರಿಜಾತಾಯಿಯೂ ಬರಬಹುದು. ಮನೆಯಿಂದ ಏನಾದರೂ ಕಟ್ಟಿಕೊಂಡು ಬರಹೇಳಿದರೆ ರೆಗ್ಯುಲರ್ ಪಿಕ್‌ನಿಕ್ ಆದಂತಾಗುವದು. ನವಮಿಯ ಬೆಳದಿಂಗಳೂ ಇದೆ. ಲಾಲಾನಿಗೆ ಸುಳ್ಳು ಫೋನು ಬೇರೆ ಮಾಡಿ ಅಪರಾಧಿಯಾಗಿದ್ದೀರಿ."

"ಅದಕ್ಕೆ ನಿಮಗೇನೂ ಶಿಕ್ಷೆಕೊಡುವ ಅಧಿಕಾರವಿಲ್ಲವಲ್ಲ. ಅವರೆಲ್ಲ ಇದ್ದರೆ ಮಾತುಕಥೆ ನೀರಸವಾಗಿಬಿಡುವದು. ನೀವಾವರೂ ಒಳ್ಳೇ ಹೋಗುವದು ಬೇಡವಾದವರಂತೆ ಮಾತಾಡುತ್ತಿದ್ದೀರಿ."

"ನನ್ನ ವಿಷಯದಲ್ಲಿ ಪೂರ್ಣ ಆತ್ಮವಿಶ್ವಾಸವಿದ್ದವರಂತೆ ಹೇಳುತ್ತಿರುವಿರಲ್ಲ. ಆದರೆ ಬೀಚಿಗೆ ಬಂದು ನಾನು ಏನೇನನ್ನೆಲ್ಲ ಮಾಡಬೇಕಾಗುವದೆಂಬುದನ್ನು ನೀವು ಹೇಳಿಕೊಡಬೇಕು. ಬೀಚಿನ ಮೇಲೆ ವಾಡಿಕೆಯಾಗಿದ್ದ ನಲ್ಲ – ನಲ್ಲೆಯರ ಮಾತುಗಳು ನನಗಿನ್ನೂ ಪಾಠವಾಗಬೇಕಾಗಿದೆ. ಈ ರೋಮಾನ್ಸ್ ಅನ್ನುವ...."

"ಶಟ್‌ಅಪ್!"

ಕಪ್ಪಿನಲ್ಲಿಯ ಚಹ ಕವಡುತ್ತ ನಿರ್ಲಕ್ಷವಾಗಿ ಮಾತಾಡುತ್ತಿದ್ದ ರಮೇಶ ಬೆಚ್ಚಿಬಿದ್ದು ಕತ್ತೆತ್ತಿ ನೋಡಿದ. ಕಿರಣ ಕುರ್ಚಿಬಿಟ್ಟು ಎದ್ದುನಿಂತಿದ್ದಳು. ರಕ್ತ ಚಿಮ್ಮಿ ಸಿಡಿದು ಬೀಳುತ್ತದೋ ಅನ್ನುವಷ್ಟು ಆಕೆಯ ಗಲ್ಲಗಳು ಕೆಂಪಾಗಿದ್ದವು. ಮೇಲಿನ ಟ್ಯೂಬ್‌ಲ್ಯಾಟಿನ ಪ್ರಕಾಶದಲ್ಲಿ ಅಗಲವಾದ ಆ ಕಣ್ಣುಗಳಿಂದ ಕಿಡಿ ಉದುರುತ್ತಿದ್ದಂತೆ ತೋರುತ್ತಿತ್ತು. ಕಾಲಿನಿಂದ ತಲೆಯ ವರೆಗೆ ನಡುಗುತ್ತ ಮಾತಾಡುವ ಎಚ್ಚರವೂ ಇಲ್ಲದವರಂತೆ ಕೆಲ ಕ್ಷಣ ನಿಂತು ಹೇಳಿದಳು.

"ನನ್ನನ್ನು ಏನಂತ ತಿಳಿದಿರಿ, ಮಾಹುಲಿ? ನನ್ನ ಗೆಳೆತನದ ಅರ್ಥವನ್ನು ಹೀಗೆ ಮಾಡಿಕೊಳ್ಳುತ್ತಿದ್ದೀರಿ! ನಾನಿತ್ತ ಸ್ನೇಹದ ದುರುಪಯೋಗ ಈ ರೀತಿ ಮಾಡಿಕೊಳ್ಳುತ್ತಿದ್ದೀರಿ! ನಿಮ್ಮ ಆದರ್ಶ ಜೀವನದಲ್ಲಿ ಪಡೆದ ಸಂಸ್ಕೃತಿಯದು! ತಿಳಿಯಾದ ಸ್ನೇಹವನ್ನು ಸ್ನೇಹವಾಗಿಯೇ ಕಾಣಲು ನೀವೊಬ್ಬರಾದರೂ ಕಲಿತು ಕೊಂಡಿದ್ದೀರಿ, ಎಂದುಕೊಂಡಿದ್ದೆ. ಎಷ್ಟು ಕ್ಷುಲ್ಲಕವಾಗಿ ವಿಚಾರ ಮಾಡು ತ್ತಿದ್ದೀರಿ! ಮುಂಬಯಿಗೆ ಬಂದು ಇಷ್ಟು ದಿನಗಳಾದರೂ ಹಳ್ಳಿಗತನ ಕಳೆದು ಕೊಳ್ಳಲಿಲ್ಲ! ಇಲ್ಲಿಯ ವಿಚಾರ ವೈಶಾಲ್ಯತೆ ಬರಲಿಲ್ಲ! ಎಷ್ಟು ದೊಡ್ಡ ಮಾತಾಡುತ್ತಿದ್ದೀರಿ! ಆದರೆ ಆ ಸಂಸ್ಕಾರ ಹೋಗಲಿಲ್ಲ. ಅಖೈರ ಮುಂಬಯಿಯ ಜನರು ತಾವೇನಿರುವೆವು ಎಂಬುದನ್ನು ಮುಚ್ಚಿಡಲು ಪ್ರಯತ್ನಿ ಸುವದಿಲ್ಲ. ಆದರೆ ನೀವು! ನೀವು!....ಓಹ್, ಮೋಸಹೋದದ್ದು ನನ್ನ ತಪ್ಪು."

ಭಾವನೆಗಳ ಒತ್ತಡಕ್ಕೆ ಸರಿಯಾಗಿ ಶಬ್ದಗಳು ಸಿಗಲಾರದವರಂತೆ ಕಿರಣ ಉಬ್ಬಸಗೊಂಡವರಂತೆ ಉಸಿರಾಡಿಸುತ್ತ ನಿಂತಳು.

ಇಷ್ಟೆಲ್ಲವನ್ನೂ ಕೇಳುತ್ತ ರಮೇಶ ಆರುತ್ತಿದ್ದ ಚಹವನ್ನೇ ದಿಟ್ಟಿಸಿ ನೋಡುತ್ತಿದ್ದನು. ಈಗಲೂ ಆತ ಮಾತಾಡಿದಾಗ ಮೋರೆ ಕೆಳಗೇ ಇತ್ತು. ದನಿಯೂ ಶಾಂತವಾಗಿತ್ತು.

" ನನ್ನ ಸ್ವಭಾವವನ್ನರಿಯಲು ಬಹಳ ದಿನ ಬೇಕಾಯಿತು, ತಾವಡೇಕರ್."

" ಅದು ನನ್ನ ಸ್ನೇಹದ ನಿರ್ಬಲತೆ. ಇನ್ನು ನಿಮ್ಮ ಮೋರೆಯನ್ನೂ ನೋಡುವದು ಬೇಡವಾಗಿದೆ. ನಿಮ್ಮೊಡನೆ ಮಾತಾಡುವದೂ ಬೇಡವಾಗಿದೆ. ನಿಮ್ಮಲ್ಲಿ ಏನಾದರೂ ಸಭ್ಯತನ ಉಳಿದಿದ್ದರೆ ನನ್ನ ಈ ಇಚ್ಛೆಯನ್ನು ನೀವೂ ನಡೆಸಿಕೊಡುತ್ತೀರೆಂದು ಆಶಿಸುತ್ತೇನೆ. ಇಲ್ಲಿಯವರೆಗಾದ ಪರಿಚಯದ ತಪ್ಪಿಗೆ ನಾಲ್ಕು ಜನರ ಮುಂದೆ ಉಪಚಾರಕ್ಕಾಗಿ ಎಷ್ಟು ಬೇಕೋ ಅಷ್ಟು ಮಾತ್ರ."

ಕಿರಣ ಮಾತು ನಿಲ್ಲಿಸಿ ಏನಾದರೂ ಉತ್ತರ ಬರಬಹುದೇನೆಂದು ಕ್ಷಣಕಾಲ ಮಾತ್ರ ನಿರೀಕ್ಷಿಸಿದಂತಿತ್ತು. ಆದರೆ ರಮೇಶ ಮೌನವಾಗಿಯೇ ಚಹದ ಬಟ್ಟಲನ್ನು ನಿರೀಕ್ಷಿಸುತ್ತ ಕುಳಿತಿದ್ದನು. ಕಿರಣ ತನ್ನ ಪರ್ಸ್ ಎತ್ತಿಕೊಂಡು ಅದರಲ್ಲಿಯ ಎರಡು ರೂಪಾಯಿ ನೋಟೊಂದನ್ನು ಬಿಲ್‌ಗಾಗಿ ಟೇಬಲ್ಲಿನ ಮೇಲೆ ಚಲ್ಲಿ ಬಾಗಿಲೆಡೆ ಕಾಲಿಡುತ್ತ ನುಡಿದಳು,

" ಚಿತ್ರ ನೋಡಲು ಕರೆದ ತಪ್ಪಿಗೆ ಮನೆಯವರೆಗೆ ಕಾರಿನಲ್ಲಿ ಬಿಟ್ಟು ಹೋಗುತ್ತೇನೆ. ಬೇಕಾದರೆ ಬರಬಹುದು."

" ಥ್ಯಾಂಕ್ಸ್. ಬೇಕಾಗಿಲ್ಲ. ಬಹಳ ಉತ್ತೇಜಿತರಾಗಿದ್ದೀರಿ. ಸಾವಧಾನರಾಗಿ ಕಾರು ನಡೆಸಿಕೊಂಡು ಹೋಗಿರಿ."

ರಮೇಶನ ಕಡೆಯ ಮಾತು ಕಿರಣಳಿಗೆ ಕೇಳಿಸಿತೋ ಇಲ್ಲವೋ. ಅವನ ಎರಡನೆಯ ಶಬ್ದ ಕೇಳಿದಾಗಲೇ ಆಕೆ ಸರಸರನೆ ನಡೆದುಬಿಟ್ಟಿದ್ದಳು. ಹೊರಗೆ ಕಾರಿನ ಸಪ್ಪಳವೂ ಕೇಳಿಸಿ ಶಾಂತವಾಯಿತು.

ಹೊಟೆಲ್‌ನ ಯಾವ ಮೂಲೆಯಲ್ಲಿಯೋ ನಡೆಯುತ್ತಿದ್ದ ಕ್ಯಾಬರೆಟ್ ಡ್ಯಾನ್ಸಿನ ಮ್ಯುಸಿಕ್ ಕ್ಷೀಣವಾಗಿ ಕೇಳಿಸುತ್ತಿದ್ದಿತು.

ಒಳಗೆ ಬಂದ ಮಾಣಿಗೆ ಉಳಿದಿದ್ದ ಹಣವನ್ನೆಲ್ಲ ಇಟ್ಟುಕೊಳ್ಳ ಹೇಳಿ ಆತನ ಅಚ್ಚರಿಯ ದೃಷ್ಟಿಯತ್ತ ಲಕ್ಷವೀಯದೆ ರಮೇಶ ಹೊರಗೆ ಬಂದನು.

ಆಗಲೇ ಕತ್ತಲಾಗತೊಡಗಿತ್ತು. ಹೊಟೆಲ್ ಎದುರಿಗೇ ಅಲೆದಾಡುತ್ತಿದ್ದ ಹುಡುಗನೊಬ್ಬ 'ಟ್ಯಾಕ್ಸಿ ಸಾಬ್ ?' ಎಂದು ಕೇಳುತ್ತಿದ್ದುದನ್ನು ಗಮನಿಸದೆ

ರಮೇಶ ನಡೆಯುತ್ತ ಮರಿನ್ ಲ್ಯಾನ್ಸ್‌ದಿಂದ ರೇಲ್ವೆ ಬ್ರಿಜ್ ದಾಟಿ ಚೌಪಾಟಿಯತ್ತ ನಡೆದನು. ಅಗಲವಾದ ಫುಟ್‌ಪಾತಿನ ಮೇಲೆ ಜನರು ಒಂದೇ ಸವನೆ ಓಡಾಡತೊಡಗಿದ್ದರು. ಹುಡುಗರ ಓಡಾಟ ಕೂಗಾಟ ನಡೆದಿತ್ತು. ಆ ಗದ್ದಲದಲ್ಲಿಯೂ ಅವರನ್ನು ಕರೆಯುತ್ತ ಆಯಾಗಳೋ, ತಂದೆತಾಯಂದಿರೋ ಅತ್ತಿತ್ತ ಓಡಾಡತೊಡಗಿದ್ದರು. ತನ್ನಂತೆ ಒಬ್ಬಂಟಿಗನಾಗಿ ಹೋಗುತ್ತಿರುವವನು ತಾನೊಬ್ಬನೇ ಎಂದುಕೊಂಡನು ರಮೇಶ.

ಅವಮಾನದಿಂದ ಅರಿವುಗೆಟ್ಟಿದ್ದ ಕಿರಣಳ ಆ ರುದ್ರ, ಅಭಿಮಾನೀ ಮೋರೆ ಅವನ ಕಣ್ಮುಂದೆ ಇನ್ನೂ ಕಟ್ಟಿದಂತಿತ್ತು.

ತಾನೇಕೆ ಹಾಗೆ ಹೇಳಿದೆ! ಎಂದುಕೊಂಡನು. ಮೊದಲಿನಿಂದಲೂ ಮಾತು ತಮಾಶೆಯಾಗಿಯೇ ಆರಂಭವಾಗಿತ್ತು. ತಾನೂ ಹಾಸ್ಯವಾಗಿ ಏನೋ ಹೇಳಿಬಿಟ್ಟೆ. ಆದರೆ ಆ ಬಿಂಕದ ಲಕ್ಷಾಧೀಶರ ಮಗಳಿಗೆ ಅದು ಅವಮಾನವಾಗಿ ತೋರಿದ್ದರೆ ಅಚ್ಚರಿಯಲ್ಲ.

ಕ್ಷುಲ್ಲಕ ಮನೋವೃತ್ತಿಯವ ಅಂದುಬಿಟ್ಟಳಲ್ಲ!

ಕಾಲೇಜಿನ ಮಿತ್ರರನ್ನು ತಪ್ಪಿಸಿ, ಲಾಲಾನನ್ನೂ ತಪ್ಪಿಸಿ ತನ್ನೊಡನೆ ಆಡಲೆಂದೋ, ತಿರುಗಾಡಲೆಂದೋ ಬಂದಿದ್ದ ಹಿಂದಿನ ಎಷ್ಟೋ ಸನ್ನಿವೇಶಗಳನ್ನು ರಮೇಶ ನೆನಸಿಕೊಂಡನು. ಹಾಗೆ ತಪ್ಪಿಸಿ ಬಂದುದನ್ನಾಕೆ ಮುಚ್ಚಿಡುತ್ತಲೂ ಇರಲಿಲ್ಲ, ತಪ್ಪಿಸಿ ಬಂದುದಕ್ಕೆ ಆಕೆಗೆ 'ಅಪರಾಧ' ಅನಿಸುತ್ತಲೂ ಇರಲಿಲ್ಲ.

ರಮೇಶನಿಗೆ ನಗೆಬಂದಿತು.

ಈ ದಿನವೂ ಲಾಲಾನಲ್ಲಿ 'ಎಲ್ಲಿಗೋ' ಹೋಗುವ ಸುಳ್ಳು ಕಾರ್ಯಕ್ರಮವನ್ನೇ ಹೇಳಿ ತನ್ನನ್ನು ಚಿತ್ರ ನೋಡಲೆಂದು ಕರೆದಿದ್ದಳು.

ಇಷ್ಟು ದಿನಗಳನಂತರವೂ ಈ ಹುಡುಗಿಯನ್ನರಿತುಕೊಳ್ಳುವದು ನನ್ನಿಂದಾಗಲಿಲ್ಲವೆ!

ಹಂ, ಆದದ್ದೂ ಒಳ್ಳೆಯದೇ ಆಯಿತು.

ಮೊನ್ನೆ ತಾನೇ ಶಾಂತಿನಿಕೇತನದ ಮಂಡಳಿಯೊಂದರ ನೃತ್ಯದ ಕಾರ್ಯಕ್ರಮ ಕೆಪಿಟೋಲ್‌ದಲ್ಲಿ ನಡೆದಿದ್ದಾಗ ತನಗೆ ಕಲ್ಯಾಣಕ್ಕೆ ಹೋಗಬೇಕಾಗಿದೆಯೆಂದು ಲಾಲಾನಿಗೆ ಹೇಳಿ ತಪ್ಪಿಸಿಕೊಂಡವಳು, ಕೆಪಿಟೋಲ್‌ದಲ್ಲಿ ರಮೇಶ

ಟಿಕೆಟ್ ತೆಗೆಯಲೆಂದು ಕ್ಯೂ ನಿಂತಾಗ ಅಕಸ್ಮಾತ್ ಬಂದು 'ಇಷ್ಟು ಸ್ವಾರ್ಥಿಯಾಗಬೇಡಿರಿ. ನಮಗೂ ಸ್ವಲ್ಪ ನಾಚು ಸಂಗೀತ ಎಂದರೆ ನೋಡುವ ಎಂದು ಆಶೆ' ಎಂದು ಹೇಳಿ ಎರಡು ರೂಪಾಯಿ ಐದಾಣೆಯ ತೀರ ಕಡೆಯ ದರ್ಜೆಯ ಟಿಕೆಟ್ ತೆಗೆಯಲು ನಿಂತ ರಮೇಶನನ್ನು ಕ್ಯೂದಿಂದ ಎಬ್ಬಿಸಿ ಹದಿನೈದು ರೂಪಾಯಿಯ ಟಿಕೆಟ್ ತೆಗೆಯಹಚ್ಚಿದ್ದಳು.

ಅದಾಗಲೇ ಸ್ನೇಹಲತೆಯೊಡನೆ ಅಲ್ಲಿಯೇ ಬಂದು ಕುಳಿತಿದ್ದ ಲಾಲಾ ಇವರನ್ನು ನೋಡಿದ ದೃಷ್ಟಿ ರಮೇಶನಿಗೆ ಇನ್ನೂ ನೆನಪಿದ್ದಿತು.

ಹಂ, ಆದದ್ದು ಒಳ್ಳೆಯದೇ ಆಯಿತು.

ದೊಡ್ಡವರ ಮಧ್ಯೆ ನಾನು ಇಷ್ಟು ತನ್ನತನ ತೋರಿಸಿದ್ದೇ ತಪ್ಪು.

ನಾಳೆ ಲಾಲಾನನ್ನು ಲಗ್ನವಾಗಿ ತನ್ನ ಒಡತಿಯಾಗಲಿದ್ದವಳಿಗೆ ಏನೇನೆಲ್ಲ ಹೇಳುತ್ತಿದ್ದೆ! ಎಷ್ಟು ಗೀಳು ಹೊಯ್ದುಕೊಳ್ಳುತ್ತಲಿದ್ದೆ! ಅಷ್ಟು ಸ್ವಾತಂತ್ರ್ಯ ವಹಿಸಲು ನನಗೆ ಯಾವ ಹಕ್ಕಿದೆ? ಹಿಂದೊಮ್ಮೆ ತುಂಬ ಕೆಲಸದಲ್ಲಿದ್ದಾಗ ಬ್ಯಾಡ್‌ಮಿಂಟನ್ ಆಡಲಿಕ್ಕೆ ಸುತಾರಾಂ ಬರುವದಿಲ್ಲವೆಂದಿದ್ದಕ್ಕೆ ನನ್ನ ಕುತ್ತಿಗೆಯಲ್ಲಿ ಕಿಲಬಿಲಮಾಡಿ ಕುಳಿತಲ್ಲಿಂದ ಎಬ್ಬಿಸಿದ್ದಳು.

"ಈಗಿನ ಹುಡುಗಿಯರಿಗೆ ನಾಚಿಕೆ ಅನ್ನುವದು ಏನೂ ಗೊತ್ತಿಲ್ಲ."

ಎಂದು ಹೇಳಿ ನಾಲಿಗೆ ಕಚ್ಚಿಕೊಂಡಾಗ ಕಿರಣ ಮಾತ್ರ ನಗುತ್ತಲೇ ನುಡಿದಿದ್ದಳು.

"ಅದು ಸಿದ್ಧವಾಗಿ ಬಹಳ ದಿನವಾಯಿತು. ಈಗ ಮುಂಬಯಿಯಲ್ಲಿ ಹಾಗೆ ಹೇಳುವದೂ ಹಳೇ ಫ್ಯಾಶನ್ ಆಗಿಬಿಟ್ಟಿದೆ."

ಹಾಗೆಲ್ಲ ಹೇಳಲು ತಾನು ಯಾರು? ಒಬ್ಬ ಫ್ಯಾಕ್ಟರಿ ಒಡೆಯರ ಕೆಲಸದಲ್ಲಿರುವ ಮುನ್ನೂರೈವತ್ತು ರೂಪಾಯಿ ಪಗಾರಿನ ಮನುಷ್ಯ. ತನ್ನ ತಂದೆ ಯಾವದೋ ಹಳ್ಳಿಯಲ್ಲಿ ಕರಣಿಕನಾಗಿದ್ದನು!

ಇದೇ ವರ್ಷದ ಮೊದಲು ತಾನಾದರೂ ವಕೀಲರೊಬ್ಬರಲ್ಲಿ ೧೫೦ ರೂಪಾಯಿಯ ಮೇಲೆ ಕೇಸುಗಳನ್ನು ಕಾಪಿಮಾಡುವ ಕೆಲಸಮಾಡುತ್ತಿದ್ದೆ!

ಆಕೆ ಲಕ್ಷಾಧೀಶರ ಹುಡುಗಿ.

ಏಳು ಮಿಲ್ಲುಗಳ ಒಡೆಯರ ತಂಗಿ.

ಆದದ್ದು ತುಂಬ ಒಳ್ಳೆಯದಾಯಿತು.

ಈ ಸತ್ಯ ಸಂಗತಿಯನ್ನು ಅಲ್ಲಗಳೆದು ವಾದಮಾಡುತ್ತಿದ್ದ ಯಾರಿಗೋ ತಿಳಿಸಿ ಹೇಳಿಕೊಡುವಂತೆ ರಮೇಶ ಮೂರನೆಯ ಬಾರಿ ಅಂದುಕೊಂಡನು.

ಇಲ್ಲಿಯವರೆಗೆ ಆದ ಸಂಗತಿಗಳೆಲ್ಲ ಆಗಬಾರದ ಸಂಗತಿಗಳಾಗಿದ್ದವು. ತನ್ನಲ್ಲಿ ಅವಳಾದರೂ ಏನು ಕಂಡಿದ್ದಳೋ. ಎಲ್ಲರಲ್ಲಿಯೂ ಬಿಂಕದ ಹುಡುಗಿಯೆಂದು, ನಿಷ್ಠುರ ಹೃದಯಳೆಂದು ಅನಿಸಿಕೊಂಡವಳು ತನ್ನ ಮುಂದೆ ಮಾತ್ರ ಹತ್ತು ವರ್ಷದ ತುಂಟ ಹುಡುಗಿಯಂತೆ ಕುಣಿಯುತ್ತಿರುತ್ತಿದ್ದಳು. ಅದರ ದುರುಪಯೋಗ ಮಾಡಿಕೊಂಡ ತಪ್ಪು ನನ್ನದಲ್ಲವೆ? ಆ ಅಭಿಮಾನ, ಆ ನಿಸ್ಸಂಖಲತೆ, ಆ ಶ್ರೀಮಂತಿಕೆಯ ಗಾಂಭೀರ್ಯ, ಆ ಸಹಜ ಸುಂದರ ಸ್ನೇಹ – ಹೌದು ಇವೆಲ್ಲವೂ ಒಬ್ಬಳಲ್ಲಿಯೇ ಇರಬಲ್ಲವು ಎಂದು ಅರಿಯದಿದ್ದುದು ನನ್ನ ತಪ್ಪು.

ಆದದ್ದು ತೀರ ಒಳ್ಳೆಯದಾಯಿತು.

ಇನ್ನು ಲಾಲಾನ ಆ ತೀಕ್ಷ್ಣ ದೃಷ್ಟಿಗೆ ಎಡೆಯಿರುವದಿಲ್ಲ.

ಯಃಕಶ್ಚಿತ್ ಕ್ಲಾರ್ಕ್ ಆಗಿದ್ದವನನ್ನು ಒಂದು ದೊಡ್ಡ ಬಿಸಿನೆಸ್ಸಿನ ಮ್ಯಾನೇಜರನನ್ನಾಗಿಮಾಡಿ ನನ್ನಲ್ಲಿ ಎಲ್ಲ ವಿಶ್ವಾಸವನ್ನೂ ಇಟ್ಟಿದ್ದ ಲಾಲಾ – ನಾನು ವಿಶ್ವಾಸಘಾತ ಮಾಡುತ್ತಿದ್ದೇನೆ ಎಂದು ಭಾವಿಸುವದು ಬೇಡ.

ಆದದ್ದು ನೂರುಸಾರೆ ಒಳ್ಳೆಯದಾಯಿತು.

ಎಂದು ತನ್ನ ಹೃದಯಕ್ಕೆ ಖಾತ್ರಿ ಮಾಡಿಕೊಡುತ್ತ ರಮೇಶ ಸರಸರನೆ ಮನೆಯ ಹಾದಿ ಹಿಡಿದನು.

## ೨೧

ಮೇಲೆ ಹೇಳಿದ ಘಟನೆಯಾಗಿ ಎಂಟು ದಿನಗಳಾಗಿದ್ದವು.

ಈ ಮಧ್ಯೆ ಒಂದೆರಡುಸಾರೆ ಕಿರಣ ಲಾಲಾನ ಮನೆಗೆ ಬಂದಾಗ ಅವನಿಲ್ಲದುದನ್ನು ನೋಡಿಕೊಂಡು ಬಂದುದು ಇದ್ದರೂ ಪರಸ್ಪರವಾಗಿಯೇ ಗಿರಿಜಾತಾಯಿಯೊಡನೆ, ಇಲ್ಲ ಲಾಲಾನೊಡನೆ ಮಾತಾಡಿಕೊಂಡು ಹೋಗಿದ್ದುದು ರಮೇಶನಿಗೆ ತಿಳಿದಿತ್ತು.

ಕಿರಣಳ ಕಾರ್ಯಕ್ರಮದಲ್ಲಾದ ಈ ಅಕಸ್ಮಾತ್ ಬದಲಾವಣೆ ಯಾರಿಗೂ ತಿಳಿಯಲಿಲ್ಲ. ಯಾಕಂದರೆ ಈಗೀಗ ಲಾಲಾನೇ ಬಹಳಷ್ಟುಸಾರೆ ಕಿರಣಳ ಮನೆಗೇ ಹೋಗುತ್ತಿರುತ್ತಿದ್ದನು.

ಆದರೂ ಒಂದೆರಡು ಸಾರೆ ರಮೇಶನಿಗೆ ಕಿರಣನ ಭೆಟ್ಟಿಯಾಗದಿರಲಿಲ್ಲ.

ಒಮ್ಮೆ ರಾಕ್ಸಿಯಲ್ಲಿ ಯಾವದೋ ಚಿತ್ರ ನೋಡಹೋಗಿದ್ದಾಗ ಕಿರಣನೂ ಸ್ನೇಹಲತಾ, ಮತ್ತಿಬ್ಬರು ಗೆಳತಿಯರೊಡನೆ ಕಾರಿನಲ್ಲಿ ಅವನ ಮುಂದೆಯೇ ಇಳಿಯುತ್ತಿದ್ದಳು. ಸ್ನೇಹಲತೆ ಸಹಜವಾಗಿ ರಮೇಶನನ್ನೂ ತಮ್ಮೊಡನೆ ಕೂಡಿಕೊಳ್ಳಲು ಕರೆದಳು. ರಮೇಶ ಮಾತ್ರ ತನ್ನೊಬ್ಬರು ಮಿತ್ರರೊಡನೆ ಬಂದಿರುವೆನಾಗಿ ಹೇಳಿ ಕ್ಷಮೆ ಕೇಳಿ ಎಲ್ಲರೊಡನೆ ಕಿರಣಳಿಗೂ ನಮಸ್ಕಾರಮಾಡಿ ಆಚೆ ನಡೆದುಬಿಟ್ಟಿದ್ದನು. ಕಿರಣಳೂ ಎಂದಿನಂತೆ ಪ್ರತಿ ನಮಸ್ಕಾರ ಹೇಳಿ ಗುರುತಿನ ನಸುನಗೆ ನಕ್ಕಿದ್ದಳು.

ಇನ್ನೊಮ್ಮೆ ಆಯರ್ವಿನ್ ಕ್ಲಬ್ಬಿನಲ್ಲಿ.

ಆ ದಿನ ಸ್ನೇಹಲತೆಯ ತಂದೆಯ ಮಿತ್ರರೊಬ್ಬರು, ದಿಲ್ಲಿಯಲ್ಲಿ ಬ್ಯಾಡ್ ಮಿಂಟನ್ ಚ್ಯಾಂಪಿಯನ್ ಆಗಿದ್ದವರು ಏನೋ ಕೆಲಸಕ್ಕೆ ಮುಂಬಯಿಗೆ ಬಂದವರು ಸ್ನೇಹಲತೆಯೊಡನೆ ಅಯರ್ವಿನ್ ಕ್ಲಬ್ಬಿಗೂ ಬಂದಿದ್ದರು. ಕ್ಲಬ್ಬಿನ ಭವ್ಯ ಹಾಲನ್ನು ನೋಡಿ ಅವರಿಂದ ಹಾಗೆಯೇ ತಿರುಗುವದಾಗಲಿಲ್ಲ. ಯಾರಾದರೂ ಇನ್ನಿಬ್ಬರೂ ಚನ್ನಾಗಿ ಆಡುವವರಿದ್ದರೆ ಹೊಟ್ಟೆ ತುಂಬ ಡಬಲ್ಸ್ ಆಡಿ ಹೋಗಬಹುದಾಗಿತ್ತು ಎಂದು ತಮ್ಮ ದಿವ್ಯೇಚ್ಛೆಯನ್ನು ವ್ಯಕ್ತಮಾಡಿದರು.

ಕ್ಲಬ್ ಸೆಕ್ರೆಟರಿಗೆ ದಿಲ್ಲಿಯ ಈ ಚ್ಯಾಂಪಿಯನ್‌ಗೆ ತಮ್ಮ ಕ್ಲಬ್ಬಿನ 'ರುಬಾಬ'ನ್ನು ತೋರಿಸಬೇಕೆಂದು ಹಂಬಲ. ಆದರೆ 'ಷೋಕಿ'ಗಾಗಿ ಸದಸ್ಯ ರಾಗಿದ್ದ ಲಕ್ಷ್ಮೀಪುತ್ರರಿಂದ ತುಂಬಿದ ಆ ಕ್ಲಬ್ಬಿನಲ್ಲಿ, ಅದೂ ಈ ಅವೇಳೆಯಲ್ಲಿ ಹಾಗೆ ಆಡುವವರು ಯಾರು ಸಿಗಬೇಕು?

ಕಡೆಗೆ ಸ್ನೇಹಲತೆ, ಸೆಕ್ರೆಟರಿ ಇಬ್ಬರೂ ಮಾತಾಡಿಕೊಂಡು ಸ್ನೇಹಲತೆ ಕಿರಣಳಿಗೆ ಫೋನು ಮಾಡಬೇಕೆಂದೂ ಸೆಕ್ರೆಟರಿ ರಮೇಶನಿಗೆ ಫೋನು ಮಾಡ ಬೇಕೆಂದೂ ನಿರ್ಣಯಿಸಿದರು.

ಇಬ್ಬರಿಗೂ ಇಂಥದಕ್ಕೆ ಎಂದು ಹೇಳಿರಲಿಲ್ಲ! ಅವರಿಬ್ಬರೂ ಬಂದು ದಿಲ್ಲಿಯ ಮಹಾನುಭಾವರಿಗೆ ಅವರ ಪರಿಚಯ ಮಾಡಿಕೊಟ್ಟ ನಂತರ ಆಟ ಆರಂಭವಾಯಿತು. ಅತಿಥಿಗಳು ಕಿರಣನನ್ನು ತಮ್ಮ ಪಾರ್ಟ್ನರ್ ಆಗಿ ಆರಿಸಿ ಕೊಂಡಿದ್ದರು.

ಮೂವತ್ತೈದು ನಿಮಿಷಗಳ ನಂತರ ಆಟ ಮುಗಿದಾಗ ಕಿರಣಳ ಪಕ್ಷದ ಮೇಲೆ ಹನ್ನೆರಡು ಲವ್ ಕೊಟ್ಟು ರಮೇಶ, ಸ್ನೇಹಲತೆ ಗೇಮು ತಿಂದಿದ್ದರು. ಕೆಂಟೀನ್‌ದಿಂದ ತರಿಸಿದ್ದ ಕೋಲ್ಡ್ರಿಂಕ್ ಕುಡಿಯುತ್ತ, ಎಲ್ಲರ ಕೈ ಕುಲಕುತ್ತ ದಿಲ್ಲಿಯ ಮಹಾನುಭಾವರು ಹೇಳಿದರು,

"ಏನೋ ಹಾಲ್ ನೋಡಿ ಉತ್ಸಾಹದಿಂದ ಆಡುವ ಎಂದುಬಿಟ್ಟೆ. ನೀವೆಲ್ಲ ನನ್ನ ಆಟದ ತಿಂಡಿಯನ್ನೇ ತೀರಿಸಿಬಿಟ್ಟರಿ. ಮುಂಬಯಿಯ ಇಷ್ಟೆಲ್ಲ ಥಳಕಿನ ಮಧ್ಯೆ ವಾಡಿಕೆಯ ಚ್ಯಾಂಪಿಯನ್ಸ್ ಬಿಟ್ಟು ಉಳಿದವರೂ ಇಷ್ಟು ಚನ್ನಾಗಿ ಆಡುತ್ತಾರೆ ಎಂದುಕೊಂಡಿರಲಿಲ್ಲ."

"ನೀವು ಇನ್ನೂ ಮಿ. ಮಾಹುಲಿ ಮತ್ತು ಮಿಸ್ ತಾವಡೇಕರ್ ಇಬ್ಬರೇ

ಆಡುವದನ್ನು ನೋಡಿಲ್ಲ, ಸರ್. ಒಂದು ದಿನವಂತೂ ಪೂರಾ ನಲವತ್ತೈದು ನಿಮಿಷ ಆಡಿ ಕಡೆಗೂ ಒಬ್ಬರಿಗೊಬ್ಬರು ಗೇಮ್ ಕೊಡಲಾಗದೆ ಸೋತುಬಿಟ್ಟಿದಾರೆ. ಈ ಹೊತ್ತೇಕೋ ಮಾಹುಲಿಯವರು ಅಷ್ಟು ಉತ್ಸಾಹ ತೋರಿಸಲಿಲ್ಲ."

ಕ್ಲಬ್ಬಿನ ಸೆಕ್ರೆಟರಿ ಹೇಳಿದನು.

"ಇದೆಲ್ಲ ಸೆಕ್ರೆಟರಿಯವರ ಚೇಷ್ಟೆ ಮಿಸ್ಟರ್ ಅಲಿ. ತಮ್ಮ ಕ್ಲಬ್ಬನ್ನು ಎಡ್ವ್ಹಟೈಸ್ ಮಾಡೋದಕ್ಕೆ ಅವರಿಗೆ ಇದೂ ಒಂದು ಸಾಧನ. ಅದನ್ನೆಲ್ಲ ನಂಬಬೇಡಿ"

ಎಂದು ಅತಿಥಿಗಳು ಏನಾದರೂ ಹೇಳುವ ಮೊದಲೇ ಹೇಳಿಬಿಟ್ಟು ರಮೇಶ ಎಲ್ಲರ ಕ್ಷಮೆಬೇಡಿ ಅಲ್ಲಿಂದ ಹೊರಟುಬಿಟ್ಟನು.

ಆದರೆ ಕಿರಣಳತ್ತ ನೋಡುವ ಸಾಹಸ ಮಾಡಿದ್ದರೆ ಆಕೆ ಕರಚೀಫ್ ಬಾಯಿಗೆ ಒತ್ತಿಕೊಂಡು ನಗುತ್ತಿರುವದನ್ನಾತ ಕಾಣಬಹುದಾಗಿತ್ತು!

ನಿನ್ನೆ ರಾತ್ರಿ ರಮೇಶ ಊಟಮಾಡಿ ತನ್ನ ಕೋಣೆಯಲ್ಲಿ ಜಯಂತಿ ಓದುತ್ತ ಆರಾಮುಕುರ್ಚಿಯ ಮೇಲೆ ಒರಗಿಕೊಂಡಿದ್ದಾಗ ಲಾಲಾ ಕಿರಣಳೊಡನೆ ಕಾರಿನಿಂದ ಇಳಿಯುತ್ತ ಪ್ರೊಫೆಸರ್‌ರನ್ನು ಕರೆಯುತ್ತಿದ್ದುದು ಕೇಳಿಸಿತು. ಪ್ರೊಫೆಸರರೂ ಒಂಟಿಗಾಲಿನಲ್ಲಿ ಸಿದ್ಧರಾಗಿ ನಿಂತವರಂತೆ,

"ಲಾಲಾಜಿ, ಈವತ್ತು ಈ ಮಕ್ಕಳಿಗೆ ಬ್ರಿಜ್ಜಿನ ಗಮ್ಮತ್ತನ್ನು ಪೂರ್ಣ ತೋರಿಸಿಬಿಡೋಣ"

ಅನ್ನುತ್ತ ಒಳಗೆ ಬಂದರು.

"ಅದಕ್ಕೇನೇ ಒಲ್ಲೆ ಒಲ್ಲೆ ಎನ್ನುತ್ತಿದ್ದ ನಿಮ್ಮ ಪಟ್ಟಶಿಷ್ಯೆಯನ್ನೂ ಕರೆದು ಕೊಂಡು ಬಂದೆ"

ಎನ್ನುತ್ತ ಲಾಲಾ ರಮೇಶನನ್ನೂ ಕರೆದನು.

ರಮೇಶ – ಕಿರಣ ಪಾರ್ಟ್ನರ್ಸ್ ಆಗಿ ಆಡುವದಕ್ಕೆ ಕುಳಿತರು. ಹಿಂದೆ ನಾಲ್ಕೆಂಟು ಸಾರೆ ಹಠದಿಂದ ಕಿರಣಳ ಪಾರ್ಟ್ನರ್ ಆಗಿ ಕುಳಿತಾಗ ಒಂದು ರಬರನ್ನೂ ಮಾಡಲಾಗದೆ ಬೇಸತ್ತು ಲಾಲಾ ಈಗ ಕಿರಣಳ ಪಾರ್ಟ್ನರ್ ಆಗುವದನ್ನು ಬಿಟ್ಟುಬಿಟ್ಟಿದ್ದನು. ಕಿರಣಳೊಡನೆ ಕುಳಿತರೆ ಅವರಿಬ್ಬರಿಗೂ ಆಟವೇ ಬರುತ್ತಿರಲಿಲ್ಲ.

ಆಟಕ್ಕೆ ಕುಳಿತಾಗ ತೀರ ಸಹಜ ರೀತಿಯಿಂದ ಆಟಕ್ಕೆಷ್ಟು ಬೇಕೋ ಅಷ್ಟನ್ನೇ ಎಂದಿನಂತೆ ಮಾತಾಡುತ್ತಿದ್ದ ಕಿರಣಳ 'ನಾಟಕ' ರಮೇಶನಿಗೆ ಅಚ್ಚರಿಯನ್ನುಂಟು ಮಾಡುತ್ತಿತ್ತು. ಮಧ್ಯೆ ಒಮ್ಮೆ ನಗೆಯೂ ಬಂದುಬಿಟ್ಟಿತು. ಅದಕ್ಕೆ ಆಟದ ಏನೋ ಸಂದರ್ಭ ಜೋಡಿಸಿ ಪಾರಾದನು.

ಆಟ ಮುಗಿದು ಎಲ್ಲರೂ ಆಕಳಿಸುತ್ತ ಎದ್ದಾಗ ಹನ್ನೆರಡೂವರೆ ಆಗಿತ್ತು. ತಾನು ತನ್ನ ಕಾರು ತರದೆ ಲಾಲಾನ ಕಾರಿನಲ್ಲಿಯೇ ಬಂದುದು ಕಿರಣನಿಗೆ ಆಗ ನೆನಪಾಯಿತು.

"ಬಹಳ ಚನ್ನಾಯಿತು. ಇಲ್ಲಿಯೇ ಮಲಗಿಬಿಡಿ."

ಲಾಲಾ ಸೂಚಿಸಿದನು.

ಯಾವದೋ ಕಾದಂಬರಿ ಓದುತ್ತ ಇನ್ನೂ ಎಚ್ಚತ್ತಿದ್ದ ಗಿರಿಜಾ ತಾಯಿಯೂ ಅನುಮೋದಿಸಿದಳು. ಆದರೆ ಕಿರಣ ಒಪ್ಪಲಿಲ್ಲ. ಮನೆಯಲ್ಲಿ ಆಕೆಯ ಅಣ್ಣನೂ ಇರದ್ದರಿಂದ ಹಾಗೆಲ್ಲ ರಾತ್ರಿ ಮನೆಬಿಟ್ಟು ಇರುವದು ಸರಿಯಾಗಿ ಕಾಣಲಿಲ್ಲ.

"ಹಾಗಾದರೆ ರಮೇಶ, ತಾವಡೇಕರ್‌ರನ್ನು ದಾದರದವರೆಗೆ ಬಿಟ್ಟು ಬಂದುಬಿಡು. ನೀವೇ ಕಾರು ಒಯ್ಯಬಹುದಾಗಿತ್ತು ಕಿರಣ. ಆದರೆ ರಾತ್ರಿ ಹಾಗೆ ಒಬ್ಬರೇ ಹೋಗುವದು ಸರಿಯಾಗುವದಿಲ್ಲ. ನನಗೂ ಬೆಳಿಗ್ಗೆ ಕಾರು ಬೇಕಾಗ ಬಹುದು."

ಲಾಲಾ ಹೇಳಿದನು.

"ನಾನಾನ ಎಬ್ಬಿಸಿ ಒಂದು ಟ್ಯಾಕ್ಸಿ ತರಹೇಳಿ ಲಾಲಾ. ಸುಮ್ಮನೆ ನಿಮಗೆಲ್ಲ ಏಕೆ ತ್ರಾಸು?"

"ರಮೇಶನಿಗೆ ನಿನ್ನನ್ನು ಮನೆಯವರೆಗೆ ಬಿಟ್ಟು ಬರುವದು ಮಹಾ ತ್ರಾಸು ಅಲ್ಲವೆ? ಇದು ಅವನ ನಿತ್ಯದ ಮಲಗುವ ವೇಳೆ. ನಿನ್ನಿಂದ ಈ ಮನೆಗೆ ಯಾವಾಗಲೂ ತ್ರಾಸಾಗುವದಿಲ್ಲ, ಕಿರಣ."

ಗಿರಿಜಾ ತಾಯಿ ಹೇಳಿದಳು.

ರಮೇಶ, ಕಿರಣ ಇಬ್ಬರೂ ಕಾರಿನಲ್ಲಿ ಕುಳಿತರು. ಕಿರಣ ಎಂದಿನಂತೆ ಎದುರಿನಲ್ಲಿ ರಮೇಶನ ಪಕ್ಕದಲ್ಲಿಯೇ ಕುಳಿತಳು. ಕಾರು ವೇಗವಾಗಿ ಮರಿನ್ ಡ್ರ್ಯಾವ್ಸದತ್ತ ಹೊರಳಿತು.

" ನನ್ನಿಂದ ನಿಮಗೆ ತೊಂದರೆಯಾಗುವಂತಾಯಿತು."

ಕಿರಣ ಹೇಳಿದಳು.

" ತೊಂದರೆಯೇನು ಬಂತು? ಅರ್ಧ ಮುಕ್ಕಾಲು ತಾಸಿನ ವಿಷಯ."

" ನಾಳೆ ಹೇಗೂ ರವಿವಾರ. ನಸುಕಿನಲ್ಲಿಯೇ ಏಳಬೇಕೆಂದೇನೂ ಇಲ್ಲವಲ್ಲ."

ಅದಕ್ಕೊಂದು ಉತ್ತರ ಅವಶ್ಯವಿದೆ ಎಂದೆನಿಸಲಿಲ್ಲ ರಮೇಶನಿಗೆ. ಐದು ನಿಮಿಷ ಕಾರಿನ ಸುರ್ ಎನ್ನುವ ಸಪ್ಪಳ ಬಿಟ್ಟರೆ ಮತ್ತೆಲ್ಲ ಮೌನ.

" ಆಗಲೇ ನಮ್ಮದು ಸಿಕ್ಸ್ ನೋಟ್ರಂಪ್ಸ್ ಆಟ ಡೌನ್ ಆದಾಗ ನೀವು ಸ್ಪೇಡ್ ಏಸನ್ನು ತೋರಿಸಿದ್ದರೆ ಸಿಕ್ಸ್ ಸ್ಪೇಡ್ಸ್‌ಮಾಡಿ ಸ್ಲ್ಯಾಮ್ ಹೊಡೆಯ ಬಹುದಾಗಿತ್ತು."

" ಮೊದಲನೆಯ ರೌಂಡಿನಲ್ಲಿ ನೀವು ಪಾಸ್ ಹೇಳಿದ್ದರಿಂದ ಸ್ಲ್ಯಾಮಿನ ವಿಚಾರವೇ ಬರುವಂತಿರಲಿಲ್ಲ. ನೀವು ನಾಲ್ಕು ನೋಟ್ರಂಪ್ ಮಾಡಿದಾಗಲೇ ನಾನು ಪಾಸ್ ಅನ್ನಲಿದ್ದವನು ಹೇಗೋ ಎರಡು ಎಕ್ಕ ನೋಡಿ ಧೈರ್ಯವಾಗಿ ಐದು ಹಾರ್ಟ್ಸ್ ಹೇಳಿದೆ."

" ನಿಮ್ಮಲ್ಲಿದ್ದ ಎರಡು ಏಸು ಕ್ಲಬ್ಬು ಮತ್ತು ಹಾರ್ಟ್ ಅಂತ ಲೆಕ್ಕ ಹಾಕಿದೆ. ಡೈಮಂಡ್ ಒಂದೇ ಲೋಸ್ಯುಟ್ ಆಗಿತ್ತು. ನಿಮ್ಮ ಕೈಯಲ್ಲಿ ಅಂದು ಒಂದೇ ಅನ್ನುವ ಕಲ್ಪನೆ ಯಾರಿಗಿದೆ? ಅದಕ್ಕೇ ಸಿಕ್ಸ್ ನೋಟ್ರಂಪಿನ ಜಂಪ್ ಕಾಲ್ ಕೊಟ್ಟುಬಿಟ್ಟೆ. ಇಲ್ಲದಿದ್ದರೆ ಅದು ಸ್ಪೇಡಿನಲ್ಲಿಯೇ ನಿಲ್ಲುತ್ತಿತ್ತು."

ಇದಕ್ಕೂ ಉತ್ತರ ಅವಶ್ಯವಿಲ್ಲವೆಂದು ರಮೇಶ ಮೌನವಾಗಿಯೇ ಉಳಿದನು.

ಆ ಮೌನ ಕಿರಣಳ ಮನೆಯವರೆಗೂ ಭಂಗವಾಗಲಿಲ್ಲ. ಆಕೆಯೂ ಕಿಟಕಿಯ ಹೊರಗೆ ಭರ್ರನೆ ಹಿಂದಾಗುತ್ತಿದ್ದ ಮನೆ, ಮರ, ಜನ, ವಾಹನ ಗಳನ್ನೇ ಲೆಕ್ಕ ಮಾಡುತ್ತಿದ್ದವರಂತೆ ದಿಟ್ಟಿಸುತ್ತ ಕುಳಿತಿದ್ದಳು.

" ಥ್ಯಾಂಕ್ಸ್. ಗುಡ್ ನೈಟ್."

ಅನ್ನುತ್ತ ಕಿರಣ ಕಾರಿನಿಂದಿಳಿದಳು.

ರಮೇಶನ ಮನಸ್ಸೆಲ್ಲಿದ್ದಿತೋ. ಅದೂ ಕೇಳದವರಂತೆ ಕಾರಿನ ಬಾಗಿಲು ಹಾಕಿಕೊಂಡು ಕಾರು ತಿರುಗಿಸುವದರಲ್ಲಿ ತೊಡಗಿದ್ದನು. ಮನೆಯ ಮೆಟ್ಟಲೇರಿ ಹೋಗುತ್ತಲಿದ್ದ ಕಿರಣ ನಗುತ್ತಿರುವಂತೆ ತೋರಿದುದು ತನ್ನ ಭ್ರಮೆಯಾಗಿರಬಹುದೆ ಎಂದು ಆಶ್ಚರ್ಯಪಡುತ್ತ ಪೋರ್ಟಿನ ಹಾದಿ ಹಿಡಿದನು.

೨೨

ಮರುದಿನ ಮಧ್ಯಾಹ್ನ ಊಟಮಾಡಿ ರವಿವಾರದ ವಿಶ್ರಾಂತಿಯನ್ನನು ಭವಿಸುತ್ತ ಕಾಟಿನ ಮೇಲೆ ಬಿದ್ದುಕೊಂಡು ರಮೇಶ ತ್ರಿವೇಣಿ ಪತ್ರಿಕೆಯನ್ನು ಓದುತ್ತಲಿದ್ದನು. ಲಾಲಾ, ಗಿರಿಜಾ ತಾಯಿ ಇಬ್ಬರೂ ತಮ್ಮ ತಮ್ಮ ಕೋಣೆ ಯಲ್ಲಿ ಮಲಗಿದ್ದರು.

ರಮೇಶನ ಕೋಣೆಯ ಬಾಗಿಲು ಸಪ್ಪಳವಾಯಿತು. ಚಿಲಕ ಹಾಕಿರಲಿಲ್ಲ ವಾದ್ದರಿಂದ ಮಲಗಿದಲ್ಲಿಂದಲೇ 'ಕಮ್ ಇನ್' ಎಂದನು. ಬಾಗಿಲು ತೆರೆದಾಗ ಕಿರಣ ಬಾಗಿಲಿನಲ್ಲಿ ನಿಂತಿದ್ದಳು!

"ಒಳಗೆ ಬರಲೆ?"

"ಬನ್ನಿರಲ್ಲ."

ಮಾತಿನಲ್ಲಿ ಶಕ್ಯವಿದ್ದಷ್ಟು ನೈಜತೆಯನ್ನು ತರಲೆತ್ನಿಸುತ್ತ ಆಕೆಯನ್ನು ಸ್ವಾಗತಿಸಿ ರಮೇಶ ಎದ್ದು ಕುಳಿತನು.

"ನೀವು ಮಲಗಿಲ್ಲವೆಂಬುದನ್ನು ಕಿಟಕಿಯಲ್ಲಿಯೇ ನೋಡಿದೆ."

ಮಧ್ಯಾಹ್ನದ ಅವೇಳೆಯಲ್ಲಿಯೂ ಆಕಸ್ಮಾತ್ ಬಂದಿದ್ದ ತನ್ನ ದಿಟ್ಟತನ ವನ್ನು ಸಮರ್ಥಿಸಿಕೊಳ್ಳುವಂತೆ ಕಿರಣ ಹೇಳಿದಳು, ಹತ್ತಿರದ ಕುರ್ಚಿಯಲ್ಲಿ ಕೂಡ್ರುತ್ತ.

ರಮೇಶ ಮೌನವಾಗಿಯೇ ಉಳಿದನು. ಆಕೆಗೆ ಬೇಕಾಗಿದ್ದರೆ ಮಲಗಿ ದವರನ್ನೂ ನಿಃಸಂಕೋಚವಾಗಿ ಎಬ್ಬಿಸಬಲ್ಲಳು ಎಂಬುದನ್ನು ಕಂಡುಕೊಂಡಿದ್ದ

ಆತನ ತುಟಿಯ ಮೇಲೆ ನಗೆಯ ಕ್ಷೀಣ ಕಿರಣ ಹರಡಿ ಮಾಯವಾದಂತಾಯಿತು.

"ಅದು ತ್ರಿವೇಣಿ ಅಲ್ಲವೆ? Women as they saw them (ಸ್ತ್ರೀ – ಅವರು ಕಂಡಂತೆ) ಲೇಖವನ್ನು ಓದಿದಿರೇನು?"

"ಹುಂ, ಈಗಷ್ಟೇ ಮುಗಿಸಿದೆ. ಹೊಸದೇನೂ ಇಲ್ಲ."

"ಆದರೂ ಓದಿದಾಗ 'ಹೌದು' ಅನ್ನಿಸಿತು. ಅದರಲ್ಲಿಯೂ ಕಾಳಿದಾಸನ ಶಕುಂತಲೆಯನ್ನೂ ಶೇಕ್ಸ್‌ಪಿಯರನ ಮಿರಾಂಡಾಳನ್ನೂ ಹೋಲಿಸಿ ಸ್ತ್ರೀಯರ ವಿಷಯಕ್ಕೆ ಪೂರ್ವದಲ್ಲಿಯೂ, ಪಶ್ಚಿಮದಲ್ಲಿಯೂ ಆ ಮಹಾಪುರುಷರು ಹೇಗೆ ಒಂದೇ ಅಭಿಪ್ರಾಯ ಉಳ್ಳವರಾಗಿದ್ದರು ಎಂಬುದನ್ನು ಚನ್ನಾಗಿ ವಿವರಿಸಿದ್ದಾರೆ. ಅವರಿಬ್ಬರೂ ನಾಟಕಕಾರರು ಪ್ರೇಮವನ್ನು ಅಷ್ಟು ತಿಳಿಯಾಗಿ, ಅಷ್ಟು ನೈಜವಾಗಿ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಜಗತ್ತಿನಲ್ಲಿ ಒಂದೇ ರೀತಿಯಾಗಿ ಚಿತ್ರಿಸಿದ್ದುದು ಆಶ್ಚರ್ಯ ಅಲ್ಲವೆ?"

"ಹುಂ, ಕಾಕತಾಲೀಯ ನ್ಯಾಯ ಅನ್ನಿ. ಆದರೆ ಸಹಜವಾಗಿ ಅಂದಿರಲ್ಲ. ಯಾವದು ಸಹಜ?"

"ಮಿರಾಂಡಾ – ಫರ್ಡಿನಂಡ್, ಶಕುಂತಲಾ – ದುಷ್ಯಂತರ ಪ್ರೇಮ. ಏಕೆ ಅದರಲ್ಲಿಯೂ ನಿಮಗೆ ದೂಷಣೆ ಕಾಣುವದೆ?"

"ಇಲ್ಲ. ಆದರೆ ಆ ಮಹಾಪುರುಷ ಲೇಖಕರು ಕಂಡುಕೊಂಡ ಪ್ರೇಮದ ಎಲ್ಲ ರೀತಿಗಿಂತ ಈ ಪ್ರೇಮದ ರೀತಿ, ಅಂದರೆ 'ಪ್ರಥಮ ನೋಟದ ಪ್ರೇಮ' ಇದರ ಮೇಲೆಯೇ ಆ ಲೇಖಕರ ದೊಡ್ಡಸ್ತನವನ್ನು ನಿಶ್ಚಯಿಸುತ್ತಿರುವಂತಿದೆ ತ್ರಿವೇಣಿಯ ಈ ಬರೆಹದ ಲೇಖಕ. ಶೇಕ್ಸ್‌ಪಿಯರ್, ಕಾಳಿದಾಸರು ಇಂದಿಗೆ ಮಹಾನಾಟಕಕಾರರಾಗಿ ಗಣಿಸಲ್ಪಟ್ಟುದು ಅವರು ಸ್ತ್ರೀಯರನ್ನೂ ಪ್ರೇಮವನ್ನೂ ಈ ಅರ್ಥದಲ್ಲಿ ತಿಳಿದು ಬಣ್ಣಿಸಿದುದಕ್ಕೆ ಎಂದಾಗುವದಾದರೆ ಅವರಿಬ್ಬರನ್ನೂ ಓದಿದ ನಾನು ಬಹಳ ದೊಡ್ಡ ತಪ್ಪು ಮಾಡಿದೆ ಎಂದು ತಿಳಿಯುತ್ತಿದ್ದೆ."

"ನಿಮ್ಮ ಕಾರಣಗಳು ಬೇರೆಯೇ ಇದ್ದಂತಿವೆ. ಈ 'ಲವ್ಹ್ ಎಟ್ ಫಸ್ಟ್ ಸ್ಟಾಟ್' ನಾನ್ಸೆನ್ಸ್ ಎಂದು ಒಪ್ಪುವದಾದರೂ ಅದರಿಂದಾಗಿ ಇವೆರಡು ಮಹಾನಾಟಕಗಳಲ್ಲಿಯೂ ಯಾವ ತಪ್ಪಾಗಲಿ, ಕುಂದಾಗಲಿ ಉಂಟಾಗಿಲ್ಲವಲ್ಲ."

"ಶೇಕ್ಸ್‌ಪಿಯರ್ – ಕಾಳಿದಾಸರು ನಮಗಿಂತ ಬಹಳ ಬುದ್ಧಿವಂತ

ರಾಗಿದ್ದರು, ಮಿಸ್. ತಾವಡೇಕರ್. ಆದರೆ ಇಬ್ಬರಲ್ಲಿ ಒಬ್ಬರಿಗಾದರೂ ಈ ಫಸ್ಟ್ ಸ್ಯಾಟ್ ಪ್ರೇಮದ ಕಲ್ಪನೆಯೂ ಇರಲಾರದು. ಅವೆರಡು ಕೃತಿಗಳಲ್ಲಿ ಅವರು ಸಾಧಿಸಿದುದು ಇಷ್ಟೆ. ಗಂಡು – ಹೆಣ್ಣು ಪ್ರಕೃತಿಯ ನೈಜ ಪ್ರವೃತ್ತಿಗೆ ಅನುಸಾರವಾಗಿ ಒಬ್ಬರೊಡನೊಬ್ಬರು ಕೂಡಿರಲು ಯತ್ನಿಸುತ್ತಾರೆ. ಈ ಪ್ರವೃತ್ತಿ ಗಂಡಿಗಿಂತ ಮೊದಲು ಹೆಣ್ಣಿನಲ್ಲಿ ಮೂಡಿರುತ್ತದೆ. ಶಕುಂತಲೆ ಆಶ್ರಮದಲ್ಲಿ ಬೋಳು ತಲೆಯ ವಟುಗಳನ್ನು, ಉದ್ದಗಡ್ಡದ ಯತಿಗಳನ್ನು ಬಿಟ್ಟು ಇನ್ನೊಬ್ಬ ತರುಣ ಮನುಷ್ಯನನ್ನು ನೋಡಿರಲಿಲ್ಲ – ತನ್ನ ಜೀವನದ ಹದಿನೆಂಟು ವರ್ಷಗಳವರೆಗೂ. ದುಷ್ಯಂತನಂಥ ಸಾಹಸಿ, ತೇಜಸ್ವಿ ಮನುಷ್ಯ ದೃಷ್ಟಿಗೆ ಬಿದ್ದಾಗ ಇವನೊಡನೆ ತನ್ನ ಜೀವನ ಸಾರ್ಥಕವಾಗಬಹುದು ಎಂದು ಅನಿಸಿದ್ದರೆ ಅದರಲ್ಲಿ ಯಾವ ಆಶ್ಚರ್ಯವೂ ಇಲ್ಲ, ಯಾವ ಸಿದ್ಧಾಂತವೂ ಇಲ್ಲ. ಅದರಂತೆಯೇ ಅರಮನೆಯ ನಾಟಕೀಥಳಕನ್ನನುಭವಿಸಿ ಬೇಸರಗೊಂಡ ದುಷ್ಯಂತ ಈ ವನಕುಮಾರಿಯನ್ನು ನೋಡಿ 'ಹತ್ತರೊಡನೆ ಇವಳು ಹನ್ನೊಂದಾಗಿದ್ದರೆ ಆಗಬಹುದಿತ್ತು' ಎಂದು ಯೋಚಿಸುವಲ್ಲಿ ಪ್ರಥಮದರ್ಶನ ಪ್ರೇಮದ ಯಾವ ಸಿದ್ಧಾಂತ ನಿಯಮವೂ ಬರುವದಿಲ್ಲ. ಮಿರಾಂಡಾಳ ವಿಷಯ ದಲ್ಲಿಯಂತೂ ಆಕೆ, ನರೆಗೂದಲಿನ ತನ್ನ ತಂದೆಯೊಬ್ಬನನ್ನು ಬಿಟ್ಟರೆ ಕಣ್ಣಿನಿಂದ ನೋಡಿದ ಎರಡನೆಯ ಮನುಷ್ಯ ಫರ್ಡಿನಂಡ್‌ನಾಗಿದ್ದನು. ಹೆಣ್ಣು ವ್ಯಕ್ತಿ ಗಂಡು ವ್ಯಕ್ತಿಯೊಡನೆ ಜೀವಿಸಬಯಸುತ್ತಾಳೆಯೇ ಹೊರತು ಗಂಡು ಮೃಗ ದೊಡನಲ್ಲ ಎಂದಿಷ್ಟೇ ಶೇಕ್ಸ್‌ಪಿಯರ್ ನಾಟಕದಲ್ಲಿ ಸಿದ್ಧಮಾಡಿದನು! ಮೊದಲ ನೋಟದ ಪ್ರೇಮ ಇಲ್ಲಿ ಎಲ್ಲಿ ಬರುತ್ತದೆ? ಬಹುಶಃ ಫರ್ಡಿನಂಡ್‌ನ ಸ್ಥಳದಲ್ಲಿ ನಾನು ಹೋಗಿದ್ದರೂ...."

ಕಿರಣಳೊಡನೆ ಮಾತಾಡುವಾಗ ಇನ್ನೆಂದೂ ವ್ಯಕ್ತಿಶಃ ಮಾತಾಡಬಾರದು ಎಂದು ನಿಶ್ಚಯಿಸಿಕೊಂಡ ರಮೇಶ ಅರಿಯದೇ ತನ್ನ ಮಾತು ಹಾಸ್ಯಕ್ಕೆ ತಿರುಗಿ ದುದನ್ನು ಅರಿತು ಚಟ್ಟನೆ ಮಾತು ನಿಲ್ಲಿಸಿದನು. ಆಗಲೇ ಆತನಿಗೆ ಕಿರಣಳ ಲಕ್ಷ ತನ್ನ ಮಾತಿನ ಮೇಲೆ ಸ್ವಲ್ಪವೂ ಇಲ್ಲ ಎಂಬುದು ತಿಳಿಯಿತು.

"ಹುಚ್ಚು ಹರಟೆ ಎಂದು ಲಕ್ಷಗೊಡುತ್ತಿರಲಿಲ್ಲ ಅಲ್ಲವೆ?"

"ಇಲ್ಲ ಅಂದರೆ ನಿಮಗೆ ಕೋಪ ಬರುವದಿಲ್ಲವಲ್ಲ. ನಿಮ್ಮೊಡನೆ ಮಾತಾಡಲು ಒಂದು ನೆವ ಬೇಕಾಗಿತ್ತು. ಈ ಮೂಕ ದೇವರನ್ನು ಮಾತಾಡಿಸ

ಲಿಕ್ಕೆ ಏನು ಉಪಾಯ ಹೂಡುವದು ಎಂದು ಬಹಳಷ್ಟು ಯೋಚಿಸಿ ತ್ರಿವೇಣಿಯ ಈ ಲೇಖವನ್ನು ನೆನಪಿಸಿಕೊಂಡು ಬಂದಿದ್ದೆ."

ಈ ದಿಟ್ಟ ಹುಡುಗಿಯ ನಿರ್ಭಿಡೆಯ ಮಾತಿಗೆ ಅಚ್ಚರಿಪಡುತ್ತ ರಮೇಶ ಮೌನವಾಗಿ ಕೈಲಿದ್ದ ತ್ರಿವೇಣಿಯನ್ನು ಶೂನ್ಯವಾಗಿ ದಿಟ್ಟಿಸತೊಡಗಿದನು.

ಕಿರಣ ಸ್ವಲ್ಪಹೊತ್ತು ಮೌನವಾಗಿದ್ದು ಮೃದುವಾಗಿ ಕೇಳಿದಳು,

"ನಾನು ಆ ದಿನ ಹಾಗೆಲ್ಲ ಬಡಬಡಿಸುತ್ತಿರುವಾಗ ಸುಮ್ಮನೇ ಏಕೆ ಕುಳಿತಿದ್ದಿರಿ ?"

"ಏನು ಹೇಳಬೇಕಾಗಿತ್ತು ?"

"ನಾನು ಹೇಳುತ್ತಿದ್ದುದೆಲ್ಲ ಸುಳ್ಳು. ಹಾಗೆಲ್ಲ ಹೇಳಬಾರದು ಎಂದೇಕೆ ಹೇಳಲಿಲ್ಲ ?"

ರಮೇಶ ಮಾತಾಡಲಿಲ್ಲ. ಎಂಥ ಅರ್ಥರಹಿತ ಪ್ರಶ್ನೆ ಅಂದುಕೊಂಡನು. ಕಿರಣ ಮುಂದುವರಿಸಿದಳು,

"ನಾನು ಸಣ್ಣ ಹುಡುಗಿಯಾಗಿದ್ದಾಗಿನಿಂದಲೂ ಮುಂಗೋಪಿ ಎಂದು ಹೆಸರಾಗಿದ್ದೆ. ಸಾಧಾರಣವಾಗಿ ನಾನು ಕೇಳಿದ ಯಾವ ಸಂಗತಿಯೂ ನನಗೆ ಅಲ್ಲಗಳೆಯಲ್ಪಟ್ಟಿರಲಿಲ್ಲ. ಒಮ್ಮೆ ಯಾವದೋ ನಾಟಕಕ್ಕೆ ಹೋಗಗೊಡಲಿಲ್ಲ ವೆಂದು ರಾತ್ರಿ ಮನೆಯಿಂದ ಓಡಿ ಬಿಟ್ಟು ಗ್ಯಾರಿಜದಲ್ಲಿ ಮಲಗಿಬಿಟ್ಟಿದ್ದೆ. ರಾತ್ರಿ ಮುಂಬಯಿಯನ್ನೆಲ್ಲ ಹುಡುಕಿ, ಪೋಲಿಸರಿಗೂ ವರದಿಕೊಟ್ಟು ಅಪ್ಪ ಅವ್ವ ಅಳುತ್ತ ಕುಳಿತಿದ್ದರು. ಅದೆಲ್ಲ ಗೊತ್ತಿದ್ದರೂ ಬೆಳಗಿನವರೆಗೆ ಮನೆಗೆ ಹೋಗಿರ ಲಿಲ್ಲ. ಆ ದಿನ ಸಿಟ್ಟಿನ ಭರದಲ್ಲಿ ಮೈಮರೆತು ಹೇಳಬಾರದುದನ್ನು ಹೇಳಿದ್ದಕ್ಕೆ ನೀವೂ ಅಷ್ಟು ಮನಸ್ಸಿಗೆ ಹಚ್ಚಿಕೊಳ್ಳಬಾರದು."

"ಮನಸ್ಸಿಗೆ ಹಚ್ಚಿಕೊಂಡೆ ಎಂದು ಯಾವರೀತಿಯಿಂದಲಾದರೂ ನಾನು ತೋರಿಸಿದ್ದರೆ ನನ್ನನ್ನು ಕ್ಷಮಿಸಿ."

"ಮತ್ತೆ ಎಂಟು ದಿನ ತೀರ ಪರಕೀಯರಂತೆ ಇದ್ದುಬಿಟ್ಟಿರಲ್ಲ ?"

"ಹೋಗಲಿ ಬಿಡಿ. ಆ ದಿನ ಆದದ್ದನ್ನೆಲ್ಲ ಪೂರಾ ಮರೆತು ಬಿಡೋಣ. ಇನ್ನು ಮುಂದೆ ಅದನ್ನು ಕುರಿತು ಮಾತಾಡುವದೂ ಬೇಡ. ನನ್ನ ಬಾಯಿಂದಲೇ ಕೇಳಬೇಕೆಂದಿರುವಿರಾದರೆ ಹೇಳಿಬಿಡುತ್ತೇನೆ ಇಂಥ ಸಣ್ಣ ವಿಷಯಗಳಿಂದೆಲ್ಲ ಕೆಸರಾಗುವಷ್ಟು ನಮ್ಮ ಸ್ನೇಹ ಕ್ಷುಲ್ಲಕ ಎಂದು ನಾನೆಂದೂ ತಿಳಿದಿಲ್ಲ."

"ಆ ದಿನವೆಲ್ಲ ಹಾಗೆಯೇ ಸಿಟ್ಟಿನಿಂದ ಉರಿಯುತ್ತಲೇ ಇದ್ದೆ. ಮರು ದಿನ ಮಾತ್ರ ತುಂಬ ನಾಚಿಕೆಯಾಯಿತು. ನಿಮಗೆ ಫೋನು ಮಾಡಬೇಕೆಂದು ನಾಲ್ಕು ಸಲ ರಿಸೀವ್ಹರ್ ಎತ್ತಿಕೊಂಡೆ. ಆದರೆ ಹಾಳು ಅಭಿಮಾನ ಬಿಡಲಿಲ್ಲ. ಮೇಲಾಗಿ ನೀವಾಗಿಯೇ ಫೋನು ಮಾಡಬಹುದು ಎಂದೂ ನಿರೀಕ್ಷೆಯಿತ್ತು."

"ಆಗಲೇ ಹೇಳಿದೆ. ಇನ್ನು ಆ ದಿನದ ಹೆಸರು ಕೂಡ ಎತ್ತುವಂತಿಲ್ಲ. ನನ್ನ ಶರ್ಯತ್ತಿಗೆ ಒಪ್ಪಿದರೇನೇ...."

"ಒಪ್ಪುತ್ತೇನ್ರೀ ಒಪ್ಪುತ್ತೇನೆ. ನಿಮ್ಹುತ್ರ ಇನ್ನೆಂದೂ ಜಗಳಾಡುವ ಪ್ರಸಂಗ ತಂದುಕೊಳ್ಳುವದಿಲ್ಲವೆಂದು ಆಣೆಯಿಟ್ಟುಕೊಂಡಿದ್ದೇನೆ. ನೀವೂ ಬಹಳ ಸೊಕ್ಕಿನವರು. ನನ್ನ ಕಾಲೇಜು ಮಿತ್ರರಾಗಿದ್ದರೆ ಈವತ್ತು ನನ್ನಿಂದ ಹೊಡೆಸಿಕೊಂಡಿದ್ದರೂ ಮರುದಿನ ತಾವೇ ದೊಡ್ಡ ತಪ್ಪು ಮಾಡಿದವರಂತೆ ಕ್ಷಮೆ ಕೇಳಿ ಕೆಂಟೀನಿಗೆ ಕರೆಯುತ್ತಾರೆ. ಇನ್ನು ನಿಮ್ಮನ್ನು ಅಲ್ಲಿ ಬಾ – ಇಲ್ಲಿ ಬಾ ಅಂತ ಕರೆಯುವದೂ ಇಲ್ಲ. ಪೂರ್ಣ ಎಚ್ಚರಿಕೆ ವಹಿಸುತ್ತೇನೆ"

ರಮೇಶ ಮಾತಾಡಲಿಲ್ಲ. ಆದರೆ ತನ್ನ ಎಚ್ಚರಿಕೆ ವಹಿಸುವ ವಿಷಯ ಎಷ್ಟರ ಮಟ್ಟಿಗೆ ಸತ್ಯವಾಗಬಹುದೆಂಬುದನ್ನು ನೆನೆದು ಕಿರಣ ನಕ್ಕುಬಿಟ್ಟಳು. ರಮೇಶನಿಗೂ ಅದರ ಅರಿವಾಗಿ ನಗೆಬಂದಿತು. ಇಬ್ಬರ ನಡುವೆಯೂ ಇದ್ದ ಎಂಟು ದಿನಗಳ ಗೋಡೆ ಒಮ್ಮೆಲೇ ಸರಿದಂತಾಯಿತು.

ಅವರ ನಗೆಗೆ ಎಚ್ಚರವಾಗಿಯೋ ಏನೋ ಲಾಲಾ ಆಕಳಿಸುತ್ತ ಒಳಗೆ ಬಂದನು. ಕಿರಣ ಉತ್ಸಾಹದಿಂದ ಹೇಳಿದಳು,

"ಈವತ್ತು ಮೆಟ್ರೋದಲ್ಲಿ ಫಸ್ಟ್‌ಶೋಕ್ಕೆ ಹೋಗುವದು. ನಿಮ್ಮ ಮ್ಯಾನೇಜರ್‌ರನ್ನೂ ಎಬ್ಬಿಸಿರಿ"

ಆದರೆ, ಹೋಗದಿರಲು ರಮೇಶನಿಗೆ ಬೇಕಷ್ಟು ನೆವಗಳಿದ್ದವು.

## ೨೩

ಕಾಲೇಜು ಆರಂಭವಾಗಿದ್ದರೂ ಆರಂಭದ ದಿನಗಳಾದ್ದರಿಂದ ಕಿರಣ ಇನ್ನೂ ರಜೆಯ ಗುಂಗಿನಲ್ಲಿಯೇ ಇದ್ದಳು. ಆ ದಿನ ಮಾತು ಕೊಟ್ಟಿದ್ದಂತೆಯೇ ಕಿರಣ ಈಗ ಆಡಲೆಂದೋ, ಚಿತ್ರ ನೋಡಲೆಂದೋ ರಮೇಶನನ್ನು ಕರೆಯುತ್ತಿರಲಿಲ್ಲ. ಆದರೆ ತನಗೆ ಹೋಗಬೇಕೆನಿಸಿದಾಗ ರಮೇಶನ ಆಫೀಸು ಕೋಣೆಗೆ ಬಂದು ಅವನ ವ್ಯವಹಾರದಲ್ಲಿ ತುಂಬ ಅಭಿರುಚಿಯಿದ್ದವರಂತೆ ಏನಾದರೂ ಕೇಳುತ್ತ ಕುಳಿತಿರುತ್ತಿದ್ದಳು. ಹತ್ತು ನಿಮಿಷ ತಡೆದು

"ಇಪ್ಪತ್ತುನಾಲ್ಕು ತಾಸೂ ಈ ಹಾಳು ಎಕೌಂಟ್ಸ್‌ದಲ್ಲಿ ತೊಡಗಿರುವದು ನಿಮಗೆ ಬೇಸರ ಬರುವದಿಲ್ಲವೆ?"

ಎಂದು ಕೇಳುತ್ತಿದ್ದಳು.

"ಹೌದು, ಅಷ್ಟು ತಿರುಗಾಡಿ ಬಂದರೆ ಹಾಯಾಗಿರುತ್ತದಲ್ಲವೆ?"

ಎಂದು ರಮೇಶ ನಕ್ಕು ಕೇಳುತ್ತಿದ್ದನು.

"ನೋಡಿ ನಾನೇನೂ ಹೋಗೋಣ ಅನ್ನುವದಿಲ್ಲ. ನನಗಾಗಿ ಯಾರೂ ಏನೂ ತೊಂದರೆ ವಹಿಸಬೇಕಾಗಿಲ್ಲ"

ಎನ್ನುತ್ತಿದ್ದಳು ಕಿರಣ ಗಂಭೀರವಾಗಿ ಇರಲೆತ್ನಿಸುತ್ತ. ಇಬ್ಬರೂ ನಗುತ್ತ ಕ್ಲಬ್ಬಿಗೋ, ಸಿನೇಮಕ್ಕೋ, ತಿರುಗಾಡಲೋ ಹೋಗುತ್ತಿದ್ದರು.

ಆ ದಿನ ಯಾವದೋ ಹಬ್ಬವಾಗಿತ್ತು. ಭಾವನ ಒತ್ತಾಯಕ್ಕೆ ಒಪ್ಪಿಕೊಂಡು ರಮೇಶ ಮಧ್ಯಾಹ್ನ ಕುರ್ಲಾಕ್ಕೆ ಊಟಕ್ಕೆ ಹೋಗಿದ್ದನು. ಈಗಿತ್ತ

ಲಾಗಿ ಆತ ಕೆಲಸದ ಗಡಬಡಿಯಲ್ಲಿ ಕುರ್ಲಾಕ್ಕೆ ಹೋಗಿಬರುವದು ಕಡಿಮೆ ಯಾಗಿತ್ತು.

" ನೀನೇಕೆ ಬರುತ್ತೀಯಪ್ಪಾ ಈಗ ಬಡವರ ಮನೆಗೆ. ದೊಡ್ಡ ಬಿಸಿನೆಸ್ ಮಾಡುತ್ತಿ, ದೊಡ್ಡ ಮನೆಯಲ್ಲಿರುತ್ತಿ, ದೊಡ್ಡವರ ಕಾರಿನಲ್ಲಿ ದೊಡ್ಡವರ ಜತೇಲಿ ಓಡಾಡುತ್ತಿ "

ಎಂದು ಭಾವನ ಟೀಕೆಯೂ ಆಗಿತ್ತು.

" ಅಲ್ಲಯ್ಯ, ಆ ದಿನ ಯಾರೋ ರಂಭೆಯಂಥ ಹುಡುಗಿಯೊಡನೆ ಕೆಪಿಟೋಲ್‌ದ ಹತ್ತರ ಕಾರಿನಲ್ಲಿ ನೀನು ಕುಳಿತಿರುವದನ್ನು ಕಂಡೆನಲ್ಲ. ಯಾರೋ ಅದು ?"

ಹಿಂದೊಂದು ದಿನ ರಮೇಶ ಅಕ್ಕನ ಮನೆಗೆ ಹೋಗಿದ್ದಾಗ ಭಾವ ತನಿಖೆ ನಡೆಸಿದ್ದನು.

" ಹಿಂದುಸ್ಥಾನದ ಟೂರಿಸ್ಟ್ ಡಿಪಾರ್ಟ್‌ಮೆಂಟ್‌ದವರು ಅಮರಾವತೀಲೂ ಒಂದು ಶಾಖೆ ತೆಗೆದಿದ್ದಾರೆ, ಭಾವ. ಅವರು ಅಲ್ಲಿ ಬ್ರೊಡ್‌ಕಾಸ್ಟ್ ಮಾಡಿದ ಮುಂಬಯಿಯ ವರ್ಣನೆ ಕೇಳಿ ಈ ರಂಭೆ ತಾನು ನೋಡಿ ಬರಬೇಕು ಎಂದಳಂತೆ. ಇಂದ್ರನಿಂದ ಸ್ಪೆಶಲ್ ಕನ್ಸೆಶನ್ ಟಿಕೇಟ್ ಪಡೆದು ಬಂದಿದ್ದಳು. ಅವಳಿಗೆ ಮುಂಬಯಿ ತೋರಿಸುವ ಜವಾಬುದಾರಿ ನನ್ನಂಥ ಬಡವನ ಮೇಲೆ ಬೀಳಬೇಕೆ ?"

" ಹೀಗೆಲ್ಲ ಹಾರಿಸಿ ಮಾತಾಡಿದರೆ ನಡೆಯೋದಿಲ್ಲ, ಗುಳ್ಳು. ನಿನ್ನ ಸೇಠಜಿ ಮನೇಲಂತೂ ಯಾರೂ ಇಲ್ಲ ಎಂದಿದ್ದೆಯಲ್ಲ. ಈ ಬಣ್ಣದ ಬೀಸಣಿಕೆ ಯಾರು ಹೇಳು ?"

" ಹೀಗೇ ಶೇಖರಲಾಲರ ಸ್ನೇಹಿತೆ. ಅವಳೇ ಕಂಪನಿಯ ಮಿಸ್ಟ್ರೆಸ್ಸೂ ಆಗಬಹುದು. ಲಕ್ಷಾಧೀಶರ ಮನೆಯವಳಪ್ಪ. ಸುಳ್ಳೇ ತಮಾಶೆ ಮಾಡಿಬಿಟ್ಟೆ."

" ತಮಾಶೆ ಏನು ಬಂತು. ನನ್ನ ತಮ್ಮನ್ನ ಲಗ್ನವಾಗಲಿಕ್ಕೆ ಹುಡುಗಿ ಬಹಳ ಪುಣ್ಯ ಮಾಡಿರಬೇಕು. ನಮ್ಮ ರಮೇಶ ಯಾವುದಕ್ಕೆ ಕಡಿಮೆ ಯಾಗಿದಾನ್ರಿ ?"

—ಇಂದ್ರಾಣಿ ಅಭಿಮಾನದಿಂದ ತಮ್ಮನನ್ನು ನೋಡುತ್ತ ಗಂಡನನ್ನು ಕೇಳಿದ್ದಳು.

"ಇಲ್ಲ ಕಣ್ರೀ. ನಿನ್ನ ತಮ್ಮ ದೇವಲೋಕದಿಂದಲೇ ಬಂದಿಳಿದಿದ್ದಾನೆ. ನೋಡುತ್ತಿರು ಬೇಕಾದರೆ. ಆ ಕಾರಿನ ಹುಡುಗೀನೇ ಒಂದು ದಿನ ಕರೆದು ಕೊಂಡು ಬಂದು ನಿನ್ನ ನಾದಿನಿ ಎಂದುಬಿಡುತ್ತಾನೆ."

ಕಿರಣ ಎಷ್ಟೋ ಸಾರೆ 'ನನ್ನನ್ನೂ ಒಂದು ದಿನ ನಿಮ್ಮಕ್ಕನ ಮನೆಗೆ ಕರೆದೊಯ್ಯಿರಲ್ಲ. ತೀರ ಸ್ವಾರ್ಥಿಗಳು' ಎಂದು ಹೇಳುತ್ತಿದ್ದುದು ನೆನಪಾಗಿ ರಮೇಶನಿಗೆ ನಗೆ ಬಂದಿತ್ತು.

ಕೂಡುವ, ಮಲಗುವ, ಅಡಿಗೆ ಮಾಡುವ, ಜಳಕ ಮಾಡುವ, ಊಟ ಮಾಡುವ ಸಂಸಾರದ ಎಲ್ಲ ಉಪಯೋಗಗಳಿಗೂ ಒಂದೇ ಒಂದಾಗಿದ್ದ, ಹೊಗೆ, ಹುಳಗಳ ಬಲೆಗಳಿಂದ ಕಪ್ಪಾಗಿದ್ದ ಆ ಕೋಣೆಯನ್ನು ನೆನೆದು ರಮೇಶ ಹೇಳಿದ್ದನು,

"ನಿಮ್ಮನ್ನು ಕರೆದೊಯ್ಯುವಷ್ಟು ಅತಿಥಿ ಸತ್ಕಾರ ಬುದ್ಧಿ ನಮ್ಮಲ್ಲೇನೂ ಇಲ್ಲ. ಸಿಂಗಲ್ ಚಹ ಬೇಕಾದರೆ ಆಚೆಯ ಹೊಟೆಲ್‌ದಿಂದ ತರಿಸುತ್ತೇನೆ. ಬೇಕಾದರೆ ಎರಡಾಣೆಯ 'ಸ್ಪೆಶಲ್' ಹೇಳುವ!"

ಹಬ್ಬದ ದಿನ ಊಟಕ್ಕೆ ಹೋಗಿದ್ದಾಗ ಮಾತಿನ ನಡುವೆ ಅಕ್ಕ ಒಂದು ಸಂಗತಿ ಹೇಳಿದ್ದಳು,

"ರಮೇಶ, ಮೊನ್ನೆ ಇವರು ಊರಿಗೆ ಹೋಗಿದ್ದಾಗ ಅಪ್ಪನನ್ನು ನೋಡಿ ಬಂದರು. ಬಹಳ ಸೊರಗಿಹೋಗಿದ್ದಾನಂತೆ. ಮಳೆಗಾಲದ ಎರಡು ತಿಂಗಳು ಸತತವಾಗಿ ಕೆಮ್ಮು ಹಿಡಿದಿತ್ತಂತೆ. ಇಲ್ಲಿ ಪತ್ರ ಬರೆದಾಗ ಮಾತ್ರ 'ಏನೋ ಸ್ವಲ್ಪ ಕೆಮ್ಮು' ಎಂದಿದ್ದನು"

"ಆ ಮನೆಯಂತೂ ಮುರಿದು ಬೀಳಲಾಗಿದೆ, ರಮೇಶ. 'ಹಿರಿಯರು ಮನೆಕಟ್ಟಲೆಂದು ಇಷ್ಟು ಚನ್ನಾದ ಜಾಗ ಮಾಡಿಟ್ಟಿದ್ದರೂ ನನ್ನಿಂದ ಒಂದೆ ಮನೆ ಕಟ್ಟಿಸಲಾಗಲಿಲ್ಲ, ವೆಂಕಟರಾಮು' ಎಂದು ಹೇಳಿ ಮಾವ ಅತ್ತು ಬಿಟ್ಟರು. ಅವರಿಗೆ ಕೆಮ್ಮು ಹಿಡಿದಿರೋದೂ ಗೂಡಿನಂತಿದ್ದ ಆ ಮನೆಯಿಂದಲೇ. ಸುತ್ತೆಲ್ಲ ಜವುಳು ನೆಲ. ಮಳೆಗಾಲದಲ್ಲೆಲ್ಲ ಆಚೆ ರಸ್ತೆಗೆ ಹೋಗುವದಿದ್ದರೂ ಮೊಳಕಾಲು ನೀರು ಹಾಯಬೇಕಲ್ಲ. ಮುಂದಿನ ವರ್ಷ ಅವರ ಇನ್ಶ್ಯೂರನ್ಸಿನ ಹಣ ಬರುತ್ತ ದಂತೆ. ಅದರಿಂದ ಆಚೆ, ಇದ್ದ ಹಿರಿಯರ ಆ ಜಾಗವನ್ನು ಅಡವು ಬಿಡಿಸಿಡುತ್ತೇನೆ,

ಯೋಗವಿದ್ದರೆ ರಮೇಶ ಒಂದು ಮನೆ ಕಟ್ಟಿಕೊಳ್ಳಲಿ. ತನ್ನಿಂದಂತೂ ಆಗಲಿಲ್ಲ ಎನ್ನುತ್ತಿದ್ದರು"

ಎಂದು ಭಾವ ವೆಂಕಟರಾಮು ಮುಂದಿನ ಕಥೆ ಹೇಳಿದ.

ಆರು ಘಂಟೆಯವರೆಗೆ ಅಕ್ಕನ ಮನೆಯಲ್ಲಿ ಕಳೆದು ಮುಂಬಯಿಗೆ ಹೋಗಲು ಟ್ರೇನು ಹತ್ತಿ ಕುಳಿತಿದ್ದ ರಮೇಶ ಭಾವ ಹೇಳಿದ್ದ ಮಾತುಗಳನ್ನೇ ಕುರಿತು ವಿಚಾರಿಸತೊಡಗಿದನು. ಅಪ್ಪನ ಆಶೆಯನ್ನು ಪೂರ್ಣಗೊಳಿಸುವಂತಾದರೆ ಎಂದು ಒಂದೇ ಸಮಸ್ಯೆ ಆತನ ತಲೆ ತಿನ್ನತೊಡಗಿತ್ತು. ತಾನಿಲ್ಲಿ ಲಾಲಾನ ಬಂಗ್ಲೆಯಲ್ಲಿ ಲಕ್ಷಾಧೀಶನಂತೆ ಉಂಡು ತಿಂದು ಮೆರೆಯುತ್ತಿರುವಾಗ ತಂದೆ ಅಲ್ಲಿ ಮುರುಕು ಮನೆಯಲ್ಲಿ ಕೆಮ್ಮಿನಿಂದ ನರಳುತ್ತ ಬಿದ್ದಿರುವರಲ್ಲ.

ಹಿಂದೊಮ್ಮೆ ಅಕ್ಕನ ಸಲಹೆಯಂತೆ ರಮೇಶ ತಮ್ಮ, ತಂಗಿಯರೊಡನೆ ಮುಂಬಯಿಗೇ ಬರುವಂತೆ ಒತ್ತಾಯಮಾಡಿ ಪತ್ರ ಬರೆದಿದ್ದನು. ಎಲ್ಲರೂ ಕೂಡಿ ದೊಡ್ಡ ಮನೆ ಹಿಡಿದರೆ ತಮ್ಮನ ಕಾಲೇಜು ಶಿಕ್ಷಣವೂ ಸುಗಮವಾಗುವದು ಎಂದು ತಿಳಿಸಿದ್ದನು. ಆದರೆ ಏನೂ ದುಡಿತವಿಲ್ಲದ ಮೂವರ ಖರ್ಚು ವೆಚ್ಚ ಮುಂಬಯಿಯಲ್ಲಿ ಎಷ್ಟಾಗಬಹುದು ಎಂದು ಲೆಕ್ಕ ಹಾಕಿಕೊಂಡ ಆ ತಂದೆ ಪತ್ರ ಬರೆದಿದ್ದರು,

"೬೫ ವರ್ಷಗಳನ್ನು ಈ ಹಳ್ಳಿಯಲ್ಲಿ ಕಳೆದಿದ್ದೇನೆ. ಈ ಮನೆ, ಈ ನೆರೆ, ಹಟ್ಟಿಯಲ್ಲಿಯ ಕಾಳಿ, ಚಂದ್ರಿ ಇವರನ್ನೆಲ್ಲ ಬಿಟ್ಟು ಅಲ್ಲಿ ಬಂದು ನಾನೇನು ಸಾಧಿಸಬೇಕಾಗಿದೆ ? ನಿಮ್ಮ ಸುಖದುಃಖಗಳಿಗಾಗಿ ಮಾತ್ರ ಪತ್ರ ಬರೆಯುತ್ತಿರಿ. ನಿನ್ನ ಲಗ್ನವೊಂದಾಗಿ ಈ ತಮ್ಮ ತಂಗಿಯನ್ನು ನಿನಗೊಪ್ಪಿಸಿದೆ ಅಂದರೆ ನನ್ನ ಹೊರೆ ಇಳಿದಂತಾಯಿತು. ನನಗೇಕೆ ಮುಂಬಯಿ ?"

ತಂದೆಯ ಸ್ವಭಾವವನ್ನರಿತಿದ್ದ ರಮೇಶ ಮತ್ತೆ ಒತ್ತಾಯ ಮಾಡ ಹೋಗಲಿಲ್ಲ. ಈಗ ಅಕ್ಕನ ಮಾತು ಕೇಳಿ ರಮೇಶನಿಗೆ ಬಹಳ ದುಃಖವಾಗಿತ್ತು. ತಾನು ಇಷ್ಟೆಲ್ಲ ಗಳಿಸಿ ತಂದೆಗೆ ಏನು ಸುಖ ತಂದಂತಾಯಿತು ಎಂದುಕೊಂಡನು. ತನ್ನ ಲಗ್ನವಾಗುವದರಿಂದಲೂ ತಂದೆಯ ಸಮಸ್ಯೆ ಎಲ್ಲಿ ದೂರವಾಗುತ್ತದೆ ? ಊರಲ್ಲಿಯ ಆ ಮುರುಕು ಮನೆ, ಮುಂಬಯಿಯ ಈ ೧೨ ತಾಸಿನ ಯಾಂತ್ರಿಕ ಜೀವನ ಇವುಗಳ ಮಧ್ಯೆ ಯಾವ ಅರ್ಥದಿಂದ ಲಗ್ನವಾಗುವದು ? ಅದರಿಂದ ಇಲ್ಲಿಯವರೆಗೆ ತಿಂಗಳಾ ನೂರೈವತ್ತರಂತೆ ಉಳಿಸುತ್ತಿದ್ದ ಗಳಿಕೆ ಮಾತ್ರ ಇಲ್ಲ

ದಾಗುವದು. ಇಲ್ಲಿಯವರೆಗೆ ಬ್ಯಾಂಕಿನಲ್ಲಿ ಕೂಡಿದ್ದ ಸಾವಿರದ ಎಂಟು ನೂರು ರೂಪಾಯಿಯಿಂದ ಮನೆಯನ್ನೇನೂ ಕಟ್ಟಲಾಗುವದಿಲ್ಲವಲ್ಲ.

ಮನೆ, ಮನೆ ಅನ್ನುತ್ತ ದಾದರ ಸ್ಟೇಶನ್‌ದ ಆಚೆಗೆ ಸಾಲಾಗಿ, ಭದ್ರವಾಗಿ ಕಟ್ಟಿದ 'ಪ್ರಭಾತ ವ್ಯೂ, ಸನ್ ರ್‍ಯಾಸ್ ವ್ಯೂ' ಮನೆಗಳ ಮೇಲಿನ ಹೆಸರುಗಳನ್ನು ಓದುತ್ತಿದ್ದ ಹಾಗೆ ದಾದರ ಸ್ಟೇಶನ್ ಬಂದುದರ ಅರಿವಾಯಿತವನಿಗೆ. ಕದಡಿದ ಮನಸ್ಸಿಗೆ ತಿರುಗಿ ಮುಂಬಯಿಯ ಆ ಫೋನು, ಕಾರು, ಜನ, ಹಸ್ತಲಾಘವ, ತೋರಿಕೆಯ ಮರ್ಯಾದೆ ಯಾವದೂ ಬೇಡ ಎಂದೆನಿಸಹತ್ತಿತು. ರಮೇಶ ಗಾಡಿಯಿಂದಿಳಿದು ದಾದರ ಚೌಪಾಟಿಯ ರಸ್ತೆ ಹಿಡಿದನು.

ತುಂಡಿಲ್ಲದ ಜನಸಮೂಹ ಜಾತ್ರೆಯಂತೆ ಅಂಗಡಿ ಬೀದಿಗಳಲ್ಲಿ ನೆರೆದಿದ್ದಿತು. ತಾಸು ಎರಡು ತಾಸಿನ ಹೇರ್ ಪಿನ್ನು ರಿಬನ್‌ಗಳಿಂದ ಹಿಡಿದು ಸಾವಿರಾರು ರೂಪಾಯಿಯ ಬೆಳ್ಳಿ ಬಂಗಾರ, ಪಾತ್ರೆ ಪಗಡೆಗಳವರೆಗೆ ವ್ಯಾಪಾರ ಮಾಡುತ್ತ ಜನ ಅತ್ತಿಂದಿತ್ತ ಓಡಾಡುತ್ತಿದ್ದರು. ಅವರೆಲ್ಲ ತನ್ನಂತೆಯೇ ಮಧ್ಯಮ ವರ್ಗದವರು ಎಂದುಕೊಂಡನು ರಮೇಶ. ನೂರೋ ಇನ್ನೂರೋ ಮುನ್ನೂರೋ ಪಗಾರು ದೊರಕಿಸಲಿಕ್ಕಾಗಿ ದಿನದ ಎಂಟು ತಾಸು ದುಡಿದು ಹಣ್ಣಾಗಿ ಮನೆಗೆ ಬಂದವರು. ಪಗಾರು ಬಂದ ಮೊದಲನೆಯ ರವಿವಾರವೋ, ರಜೆಯ ದಿನವೋ ಹೆಂಡತಿ ಹುಡುಗರೊಡನೆ ಒಮ್ಮೆ ಪೇಟಿ ಸುತ್ತಾಡಿ ಸಾಬೂನು, ಆಟದ ಬೊಂಬೆಯಿಂದ ಹಿಡಿದು, ಸಿಲ್ಕ್ ಪೀಸು, ಸ್ಟೇನ್‌ಲೆಸ್ ಸ್ಟೀಲ್ ಪಾತ್ರೆಗಳವರೆಗೆ ಏನು ಬೇಕಾದುದನ್ನೆಲ್ಲ ಕೊಂಡು ಜೇಬು ಬರಿದುಮಾಡಿ ಹೋದರೆಂದರೆ, ಮುಂದಿನ ಒಂದನೆಯ ತಾರೀಖಿನವರೆಗೆ ಮನೆ – ಆಫೀಸು, ಆಫೀಸು – ಮನೆಯ ಯಂತ್ರಜೀವನ ಮಾತ್ರ ಪಾಲಿಗೆ ಇರುತ್ತಿತ್ತು.

ಆದರೆ ಯಾರಿಗೂ ಜೀವನದ ಈ ವ್ಯಂಗ್ಯ ಅರಿವಾಗಿದ್ದಂತಿರಲಿಲ್ಲ. ಅರ್ಧ ಅರ್ಧ ತಾಸು ಏನೂ ಕಾರಣವಿಲ್ಲದೆ ನಿಂತುಬಿಡುವ ಲೋಕಲ್ ಗಾಡಿಗಳಷ್ಟೇ ತಮ್ಮ ಈ ತರದ ಜೀವನವೂ ಅನಿವಾರ್ಯ, ಎಂದು ಪರಿಸ್ಥಿತಿಯನ್ನು ಒಪ್ಪಿಕೊಂಡು ಎಲ್ಲರೂ ಅದಕ್ಕೆ ಹೊಂದಿಕೊಂಡಂತಿದ್ದರು !

೨೪

" ಎಂಥ ಜೀವನ ! ಎಂಥ ವ್ಯಂಗ್ಯ !"

ಎಂದುಕೊಳ್ಳುತ್ತ ರಮೇಶ ಜನಸಮೂಹದಲ್ಲಿ ದಾರಿಮಾಡಿಕೊಂಡು ಸಾಗುತ್ತಿದ್ದಂತೆ ಹಿಂದಿನಿಂದ ಒಂದೇ ಸವನೆ ಪೋಂ ಪೋಂ ಎಂದು ಕಾರಿನ ಹಾರ್ನು ಕೇಳಿಸಿತು.

" ಏಕೆ ಕಿರಚುತ್ತಿ ಭೂತ ಬಡಿದವರ ಹಾಗೆ "

ಎಂದು ತನ್ನಷ್ಟಕ್ಕೆ ಕಾರನ್ನು ಬೈಯುತ್ತ ರಮೇಶ ತಿರುಗಿ ನೋಡಿದನು.

" ಕಿವಿಯಲ್ಲಿ ಅರಗು ಹುಯ್ದುಕೊಂಡಿದ್ದೀರೇನು ?"

ಎನ್ನುತ್ತ ಕಿರಣ ಕಾರು ನಿಲ್ಲಿಸಿದಳು,

" ಬೇಗ ಹತ್ತಿ. ಹಿಂದಿನ ಕಾರಿನವನು ಬೊಬ್ಬೆ ಹೊಡೆಯುತ್ತಿದ್ದಾನೆ !"

" ನನಗೆ ಇಲ್ಲಿಯೇ ಕೆಲಸವಿದೆ. ಮುಂಬಯಿಗೆ ಬರಲಾಗುವದಿಲ್ಲ."

" ನಾನೂ ಹೋಗುವದಿಲ್ಲ. ಕಾರನ್ನಂತೂ ಹತ್ತಿರಲ್ಲ. ಆಚೆ ಹೋಗಿ ಮಾತಾಡೋಣ."

ರಮೇಶ ಕಾರು ಹತ್ತಿದನು. ಜನರ ಸಮೂಹದಿಂದ ಕಾರನ್ನು ಹೊರಗೆ ತಂದು ಬದಿಗೆ ನಿಲ್ಲಿಸುತ್ತ ಕಿರಣ ಹೇಳಿದಳು,

" ಈಗ ಹೇಳಿ, ನಿಮ್ಮ ಕೆಲಸವನ್ನೆಲ್ಲ. ಕುರ್ಲಾಕ್ಕೆ ಹೋಗಿದ್ದಿರಲ್ಲ ?"

" ಇಲ್ಲಿ ಕೆಲಸವಿತ್ತೆಂದು ಇಳಿದೆ. ಹಾಗೆಲ್ಲ ಎಲ್ಲರಿಗೂ ಹೇಳುವ ಕೆಲಸವಲ್ಲ."

"ಹೇಳಬೇಡಿರಿ. ಕೆಲಸ ಎಲ್ಲಿದೆ ಎಂದು ಹೇಳಿದರೆ ಅಲ್ಲಿಗೊಯ್ದು ಮುಟ್ಟಿಸುತ್ತೇನೆ."

"ಥ್ಯಾಂಕ್ಸ್. ಆದರೆ ನೀವೆಲ್ಲ ಹೋಗುವಂಥ ಜಾಗವಲ್ಲ."

"ಬೇಕಂತ ನನ್ನನ್ನು ರೇಗಿಗೆಬ್ಬಿಸಬೇಡಿರಿ. ಸ್ವರ್ಗವೊಂದನ್ನು ಬಿಟ್ಟರೆ ನಾನು ಹೋಗದಿರುವ ಜಾಗವೇ ಇಲ್ಲ. ಅಷ್ಟು ನೀವು ಒಬ್ಬರೇ ಇರಬೇಕಾಗಿದ್ದರೆ ಹಾಗೆಂದು ಸ್ಪಷ್ಟ ಹೇಳಿಬಿಡಿರಿ. ನನಗೆ ಬೇಸರವಾಗುವುದಿಲ್ಲ."

"ಹಾಂ, ಸ್ವಲ್ಪ ಶಾಂತರಾಗಿರಿ. ಒಪ್ಪಂದಕ್ಕೆ ಸಿದ್ಧನಾಗಿದ್ದೇನೆ. ಆದರೆ ಒಂದು ಶರತ್ತು. ಈವತ್ತು ತಿರುಗಿ ಮನೆಗೆ ಹೋಗುವವರೆಗೆ ಅಕ್ಷರಶಃ ನಾನು ಹೇಳಿದ ಹಾಗೆ ಕೇಳಬೇಕು. ಏಕೆ ಏನು ಕೇಳುವಂತಿಲ್ಲ."

"ಒಪ್ಪಿದೆ. ಹೀಗೆಲ್ಲ ಅಂಜಿಸಿದರೆ ನಾನು ಅಂಜುವ ಮಗಳಲ್ಲ."

"ಹಾಗಾದರೆ ಮೊದಲನೆಯದಾಗಿ ನಿಮ್ಮ ಕಾರನ್ನು ಎಲ್ಲಿಯಾದರೂ ಪಾರ್ಕ್‌ಮಾಡಿ ಬನ್ನಿ. ನಡೆಯುತ್ತ ಬೀಚಿನವರೆಗೆ ಹೋಗೋಣ. ಕಾರಿನಲ್ಲಿ ವಾಕಿಂಗ್ ಮಾಡುವ ಶ್ರೀಮಂತರ ಈ ಷೋಕು ನನಗೆ ಸೇರುವದಿಲ್ಲ."

ಕಿರಣ ಮರುಮಾತಾಡದೆ ರಸ್ತೆಯ ಮೂಲೆಯ ಅಂಗಡಿಯೆದುರು ಕಾರನ್ನೊಯ್ದು ನಿಲ್ಲಿಸಿ ಅಂಗಡಿಯವನಿಗೆ ಹೇಳಿ ಬಂದಳು. ಇಬ್ಬರೂ ಬೀಚಿನತ್ತ ಸರಿಯುತ್ತಿದ್ದ ಜನಜಂಗುಳಿಯೊಡನೆ ತಾವೂ ಸೇರಿಕೊಂಡರು.

"ಏನೇನೋ ಕೆಲಸ ಇದೆ ಎಂದಿರಲ್ಲ ?"

"ಒಂದುದಿನ ನಾನೂ ಸುಳ್ಳು ಹೇಳುವ ಎಂದುಕೊಂಡೆ. ಸಮುದ್ರದಂಡೆಗೆ ಹೋಗಿ ಅರ್ಧ ಮುಕ್ಕಾಲು ತಾಸು ಹಾಯಾಗಿ ಕುಳಿತು ಬರುವವನಿದ್ದೆ. ಕಾರಿನಲ್ಲಿ ವಾಕಿಂಗ್ ಹೋಗುವ ಲೇಡಿ ಜನರಿಗೆ ಬಡವರ ಈ ಮನರಂಜನೆಯ ಸಾಧನಗಳು ಸೇರುವದಿಲ್ಲವೆಂದು ಹಿಂದೊಮ್ಮೆ ಕೇಳಿದಂತಿತ್ತು. ಅದಕ್ಕೆ ತಪ್ಪಿಸುವ ಪ್ರಯತ್ನಮಾಡಿದೆ."

"ತಿರುಗಾಡಲೆಂದು ಬಂದು ಭೈಯ್ಯಾಜನರ ಭೇಲ, ಮಿಸಳ ತಿಂದು ತೃಪ್ತಿಪಡುವ ಆ ಜನರೊಡನೆ ಸೇರಲು ಯಾರಿಗೆ ಮನಸ್ಸಾಗುತ್ತದೆ? ಶಾಂತವಾಗಿ ಎಲ್ಲಿಯಾದರೂ ಕುಳಿತು ಹಾಳು ಮುಂಬಯಿಯ ಗಲಿಬಿಲಿಯನ್ನು ಮರೆಯೋಣವೆಂದರೆ ಅಲ್ಲಿಯೂ ಸೇಂಗಾ-ಚನಾದವರ ಗದ್ದಲ, ಉಳ್ಳಾಗಡ್ಡೆ-ಬೆಳ್ಳುಳ್ಳಿಯ ವಾಸನೆ."

“ಅದೇ ಜೀವನ ತಾವಡೇಕರ್. ಇಸ್ತ್ರಿಯ ಅರಿವೆ ಧರಿಸಿ ಕ್ರೀಮ್, ಬಿಸ್ಕೀಟು, ಕೋಕೋ ಕುಡಿದು ಕಾರಿನಲ್ಲಿ ಅಡ್ಡಾಡುವ ಒಬ್ಬ ಮಹಾನು ಭಾವನಿಗೆ ಸರಿಯಾಗಿ ೧೦,೦೦೦ ಜನರ ಪ್ರಮಾಣದಲ್ಲಿ ಮುಂಬಯಿಯ ನಗರ ವಾಗಿದೆ. ಅವರಿಂದಲೇ ಈ ಮಹಾನಗರದ ಭವ್ಯಜೀವನ ಸಾಗಿದೆ. ಈ ಹೊತ್ತು ನನ್ನೊಡನೆ ಬಂದ ತಪ್ಪಿಗಾದರೂ ಅದನ್ನು ನೋಡಿರಿ.”

ಇಬ್ಬರೂ ದಂಡೆಗೆ ಬಂದು ತಲ್ಪಿದರು. ರಮೇಶ ಕಿರಣಳ ಕೈಯನ್ನು ತನ್ನ ಕೈಯಲ್ಲಿಟ್ಟುಕೊಳ್ಳುತ್ತ ಹೇಳಿದನು :

“ಆಗಲೇ ಹೇಳಿದ್ದೇನೆ ಹ್ಞೂ ಹ್ಞಾ ಅನ್ನಬಾರದು. ಗಂಡು ಹೆಣ್ಣು ಕೈಯಲ್ಲಿ ಕೈಹಾಕಿ ನಡೆಯದಿದ್ದರೆ ಇಲ್ಲಿ ಪ್ರವೇಶವೇ ಇಲ್ಲವಂತೆ. ಮೊನ್ನೆ ಒಂದು ಮುನ್ಸಿಪಲ್ ಬಯ್‌ಲಾ ಪಾಸಾಯಿತು.”

“ಆ ಬದಿಯಲ್ಲಿ ಬಹಳ ಗಲಾಟೆ. ಇತ್ತ ಸ್ಮಶಾನದ ಬದಿಯತ್ತ ಹೋದರೆ ಸ್ವಲ್ಪ ಸುತ್ತಾಡಿಕೊಂಡು ಎಲ್ಲಿಯಾದರೂ ಕುಳಿತುಕೊಳ್ಳಬಹುದು.”

“ಅದು ನಂತರ. ಮೊದಲೊಮ್ಮೆ ಇತ್ತ ಮಾಹಿಮ್ ಗಡಿಯವರೆಗೂ ಹೋಗಿ ಬರುವ. ಜನಸಾಮಾನ್ಯ ಎಂದರೇನು ಎಂಬುದನ್ನಾದರೂ ಸ್ವಲ್ಪ ನೋಡಿರಿ.”

ಕಿರಣ ಮಾತಾಡಲಿಲ್ಲ. ‘ಹುಚ್ಚರೊಡನೆ ಸೇರಿದ ಮೇಲೆ ನಾನೂ ಹುಚ್ಚನಾಗಬೇಕಲ್ಲ’ ಎನ್ನುವ ನಿರುಪಾಯ ಭಾವನೆಯಿಂದ ತಲೆದೂಗಿ ನಕ್ಕಳು.

ಮುಂಬಯಿಯ ಜನರ ಜೀವನದಲ್ಲಿ ಒಂದು ವಿಶೇಷವಿದೆ. ಅಲ್ಲಿಯಷ್ಟು ಚಟುವಟಿಕೆಯ ಜನ ಹಿಂದುಸ್ಥಾನದಲ್ಲಿ ಮತ್ತೆಲ್ಲಿಯೂ ಸಿಗಲಾರರು. ಬೆಳಿಗ್ಗೆ ಹಾಲಿನ ಭೈಯ್ಯ ಬಂದು ಎಬ್ಬಿಸಿದಂದಿನಿಂದ ಹಿಡಿದು, ಹೆಂಡತಿಯಿಂದ ೯|| ಘಂಟೆಯೊಳಗೆ ಅಡಿಗೆ ಮಾಡಿಸಿ, ಹೇಗೆ ಹೇಗೆಯೋ ಊಟ ಎಂಬುದನ್ನು ಮುಗಿಸಿ, ಓಡುತ್ತ ಸ್ಟೇಶನ್ನಿಗೆ ಬಂದು, ಆಗಲೇ ಸರಿಯತೊಡಗಿದ್ದ ಗಾಡಿಯನ್ನು ಹಿಡಿಯುವಲ್ಲಿಂದ ಗಾಡಿ ಇಳಿದನಂತರ ಮತ್ತೆ ಬಸ್ಸು, ಟ್ರಾಮುಗಳನ್ನು ದೊರಕಿಸುವ ಬಗೀರಥ ಪ್ರಯತ್ನಮಾಡಿ, ಅಂತೂ ಇಂದ್ರಜಾಲ ವಿದ್ಯೆಯಿಂದ ಎಂಬಂತೆ ೧೦|| ಗೆ ಆಫೀಸು ಸೇರಿ ೫|| ವರೆಗೆ ದುಡಿದು ಮತ್ತೆ ಟ್ರಾಮು, ಬಸ್ಸು, ಗಾಡಿ ಇವೆಲ್ಲವುಗಳನ್ನೂ ಹೊಕ್ಕು ಹೊರಬಿದ್ದು ೭|| ಘಂಟೆಗೆ ಮನೆಗೆ

ಬಂದು, ಕಡೆಗೂ ಕೋತಂಬರಿಸಪ್ಪನ್ನು ತರಲು ಮರೆತುದಕ್ಕೆ 'ಆಕೆ'ಯಿಂದ ಬೈಸಿಕೊಂಡು, ಆಕೆ ಹೇಳುವ ಆ ದಿನದ ನೆರೆಹೊರೆ, ಮನೆಯ ಮಕ್ಕಳು, ಶೌರುಮನೆಯ ಪತ್ರದ ವಿಷಯ ಇವೆಲ್ಲವನ್ನೂ ಕೇಳುತ್ತ ಊಟಮಾಡಿ ಮಲಗುವವರೆಗಿನ ಒಂದೆ ಸಮನಾದ ಚಲಿಸುವ ಜೀವನ ಮುಂಬಯಿಯ ಜನರಲ್ಲಿ ಎಲ್ಲಿಲ್ಲದ ಚಟುವಟಿಕೆ ತಂದಿರುತ್ತದೆ.

ವಾರಕ್ಕೊಮ್ಮೆ ರಜ ದೊರಕಿದಾಗಲೂ 'ಈ ದಿನ ಕೆಲಸವಿಲ್ಲ. ಸಾವಕಾಶವಾದರೆ ನಡೆಯುತ್ತದೆ' ಎನ್ನುವ ಭಾವನೆಯೂ ಮರೆತುಬಿಡುತ್ತದೆ. ವಾರದೊಳಗಿನ ಆರು ದಿನಗಳ ಸಿಟ್ಟಿನ ಸೇಡನ್ನು ತೀರಿಸಿಕೊಳ್ಳಲೆಂದು ಹೆಂಡತಿ ಹನ್ನೆರಡುವರೆಯ ಬದಲು ಒಂದು ಘಂಟೆಗೆ ತಾಟು ಹಾಕುವಷ್ಟು ಸಾವಕಾಶ ಮಾಡಿಬಿಟ್ಟರೆ ಗಂಡನಿಗೆ ಎಲ್ಲಿಲ್ಲದ ಸಿಟ್ಟು ಬರುತ್ತದೆ. ಆದರೆ ಹೊರಗೆ ತೋರಿಸುವದಿಲ್ಲ. ತೋರಿಸ ಹೋದರೆ 'ಒಂದು ದಿನವಾದರೂ ಹಾಯಾಗಿ ಕುಳಿತು ಊಟ ಮಾಡಿದರಾಗದೆ? ನಾಳಿನಿಂದ ಜೀವ ತಿನ್ನುವದಂತೂ ಇದ್ದೇ ಇದೆ' ಎಂದು 'ಕಡಕ್' ಉತ್ತರ ಬರುತ್ತದೆ.

ಬೀಚಿನ ಮೇಲೆ ಓಡಾಡುತ್ತಿದ್ದ ಅಷ್ಟು ಜನರೂ ಯಾವದೋ ಒಂದು ಅವಶ್ಯ ಕೆಲಸಕ್ಕೆ ಗಾಡಿಹಿಡಿಯ ಹೊರಟವರಂತೆ ಒಂದೇಸನನೆ ನಡೆಯುತ್ತಿದ್ದರು. ಕಾಲಿನಷ್ಟೇ ವೇಗವಾಗಿ ನಾಲಿಗೆಯೂ ಓಡಾಡುತ್ತಿತ್ತು. ಶಾಂತಿ, ಸಮಾಧಾನ ಪಡೆಯಲಿಕ್ಕೆ ಇಲ್ಲಿಯವರೆಗೆ ತಿರುಗಾಡ ಬಂದಿದ್ದೇವೆ ಎನ್ನುವ ಭಾವನೆ ಒಬ್ಬರಿಗೂ ಇದ್ದಂತಿರಲಿಲ್ಲ.

ಭೈಯ್ಯ ಜನರ ಹಲಿಗೆ ಸುತ್ತಿಕೊಂಡು ಗಬಗಬನೆ ತಿನ್ನುತ್ತಿದ್ದ ಸಿಂಧಿ, ಗುಜರಾಥಿ ಮಹಿಳೆಯರು, ಹುಡುಗರನ್ನಷ್ಟು ಬಿಟ್ಟರೆ ಉಳಿದೆಲ್ಲ ಕಡೆಗೂ ಉತ್ಸಾಹ, ಚಿನ್ನಾಟ, ಚೀರಾಟ ನಡೆದಿತ್ತು.

ಹುಡುಗಿಯರ ಬೆನ್ನು ಹತ್ತಿ ನಾಲ್ಕು ಉದ್ಧಟ ಹುಡುಗರು ಚೇಷ್ಟೆ ಮಾಡುತ್ತ ನಡೆದಿದ್ದರೆ 'ಪರವಾಗಿಲ್ಲ, ಓ ಅಲ್ಲಿಯವರೆಗೆ ನಮ್ಮ ಬೆಂಗಾವಲಾಗಿ ಬಂದುಬಿಡಿ' ಎನ್ನುವಂತೆ ನಿರ್ಭಿಡೆಯಿಂದ ಅವರನ್ನು ನೋಡಿ ಹುಡುಗಿಯರೂ ನಗುತ್ತ ನಡೆದಿದ್ದರು. ಆದರೆ ಆ ನಗೆಯ ಅಪಾರ್ಥ ಮಾಡಿಕೊಂಡು 'ಏನಾದರೂ' ಕಿಲಾಡಿತನ ಮಾಡಹೋದರೆ ಹುಡುಗಿಯರ ಪಾದರಕ್ಷೆಗಳು ಸಡಿಲಾಗುವವೆಂದು ಎಲ್ಲರಿಗೂ ತಿಳಿದಿದ್ದ ವಿಷಯವಾಗಿತ್ತು.

ಇಷ್ಟೆಲ್ಲ ಗೊಂದಲಗಳ ನಡುವೆ ತಮ್ಮ ಮನೆಯ ಅಂಗಳದಲ್ಲಿ ಆಡುತ್ತಿರುವಷ್ಟೇ ಸ್ವತಂತ್ರವಾಗಿ ಹುಡುಗರ ಓಡಾಟ, ಚೀರಾಟ ಒಂದೇ ಸವನೆ ಸಾಗಿತ್ತು. ಒಂದು ಗುಂಪು ಮಳಲನ್ನು ಅಗೆದು ನೀರು ತರಿಸಿ ಮುಂಬಯಿ ಸರಕಾರ ಟ್ಯೂಬ್‌ವೆಲ್ ಯೋಜನೆ ಕೈಕೊಂಡುದಕ್ಕಿಂತಲೂ ಹೆಚ್ಚಿನ ಅಭಿಮಾನದಿಂದ ನೀರಿನ ಕಾಲುವೆಯನ್ನಗೆಯ ತೊಡಗಿದ್ದರೆ, ಇನ್ನೊಂದು ಗುಂಪು ನೀರಿನಂಚಿನವರೆಗೆ ಹೋಗಿ ಮೊಳಕಾಲವರೆಗೆ ಬರುತ್ತಿರುವ ತೆರೆಗಳೊಡನಾಡಿ ತಂದೆತಾಯಿಗಳಿಂದ ಬೈಸಿಕೊಳ್ಳುವದರಲ್ಲಿ ನಿರತವಾಗಿತ್ತು.

ಕಿರಣ – ರಮೇಶ ನಡೆಯುತ್ತಿದ್ದಂತೆಯೇ ಇಬ್ಬರು ಹುಡುಗರು ಒಬ್ಬರನ್ನೊಬ್ಬರು ಅಟ್ಟಿಕೊಂಡು ಬಂದು ಇವರ ಸುತ್ತ ತಿರುಗುತ್ತ ಮುಟ್ಟಾಟ ಆಡ ತೊಡಗಿದರು. ಆದರೆ ಎಷ್ಟು ಸುತ್ತು ಹಾಕಿದರೂ ತಮ್ಮನಿಗೆ ಅಣ್ಣನನ್ನು ಮುಟ್ಟಲು ಶಕ್ಯವಾಗದ್ದನ್ನು ಕಂಡು ರಮೇಶ ಸಮಯ ನೋಡಿ ತನ್ನ – ಕಿರಣಳ ನಡುವೆ ಅಂತರ ಬಿಟ್ಟು ತಮ್ಮನು ಇಬ್ಬರ ಮಧ್ಯೆ ಹೋಗಿ ಅಣ್ಣನನ್ನು ಹಿಡಿಯುವಂತೆ ಮಾಡಿದನು. ಇಬ್ಬರೂ ಹುಡುಗರು ಕೇಕೆ ಹಾಕಿ ದೂರದಲ್ಲಿ ಇವರನ್ನೇ ನೋಡುತ್ತ ನಗುತ್ತ ಕುಳಿತಿದ್ದ ಅಪ್ಪ ಅವ್ವನನ್ನು 'ಯಾರು ಲಗು ಮುಟ್ಟುತ್ತಾರೆ ನೋಡುವ' ಎಂದು ಜಿದ್ದು ಹಾಕಿಕೊಂಡು ಮಾತು ಮುಗಿಯುವ ಮೊದಲೇ ಓಡಿದರು.

ನೀರಿನ ಪ್ಯಾಪ್‌ವರೆಗೆ ಹೋಗಿ ಇಬ್ಬರೂ ತಿರುಗಿದರು. ಸುತ್ತಲೂ ನೋಡುತ್ತ ರಮೇಶ ಹೇಳಿದನು,

"ಇದೂ ಜೀವನ, ತಾವಡೇಕರ್. ಇಷ್ಟೇ ಅಲ್ಲ, ಜೀವನದ ನಿಜವಾದ ಚಿತ್ರ. ನಿಮ್ಮ ಪಾರ್ಟಿ, ಬಂಗ್ಲೆ, ಕಾರು, ಬ್ಯಾಡ್‌ಮಿಂಟನ್ ಇವುಗಳ ಹೊರಗಿನ ಚಿತ್ರ. ಇದರ ಇನ್ನೊಂದು ಮಗ್ಗಲು ನಿಮಗೆ ನಮ್ಮ ಹಳ್ಳಿಯಲ್ಲಿ, ಪ್ರತಿಯೊಂದು ಹಳ್ಳಿಯಲ್ಲಿ ಕಂಡುಬರುತ್ತದೆ. 'ಹಳ್ಳಿಗೆ ಹೋಗಿರಿ' ಎನ್ನುವ ನಮ್ಮ ಮುಂದಾಳುಗಳ ಘೋಷಣೆ ಹೊಟ್ಟೆಯಪಾಡಿಗಾಗಿ ನಗರಕ್ಕೆ ಬಂದ ನಮ್ಮಂಥವರಿಗೆ ಅನ್ವಯಿಸುವದಿಲ್ಲ. ನಗರದ ಜೀವನವೇ ಜೀವನ ಎಂದು ಬೆಳಗಿನಿಂದ ಸಂಜೆಯವರೆಗೆ ಕೃತ್ರಿಮದಲ್ಲಿರುವ ನಿಮ್ಮಂಥವರಿಗೆ."

"ಆಯಿತು, ಒಮ್ಮೆ ನಿಮ್ಮೂರಿಗೆ ಕರೆದೊಯ್ಯಿರಿ."

"ಊಹುಂ, ಈ ಉಗುರುಕೆಂಪು, ಹೆರಳಿಲ್ಲದ ತಲೆ, ಪಾರದರ್ಶಕ ಸೀರೆ,

ಲಿಪ್‌ಸ್ಟಿಕ್, ಆರಿಂಚು ಎತ್ತರದ ಚಪ್ಪಲು ಇಂಥವರಿಗೆಲ್ಲ ಅಲ್ಲಿ ಒಂದು ಮನೆಯಲ್ಲಿಯೂ ಒಂದು ಊಟವೂ ಸಿಗಲಾರದು."

"ಆ ದಿನ ನೀವು ಹೀಗೇನೇ ಚೇಷ್ಟೆ ಮಾಡಿದಂದಿನಿಂದ ಲಿಪ್‌ಸ್ಟಿಕ್ ಹಚ್ಚುವದನ್ನು ಬಿಟ್ಟಿದ್ದೆ. ಆದರೆ ಈವತ್ತು ನನ್ನ ಸಿಂಧಿ ಫ್ರೆಂಡ್ ಒಬ್ಬಳ ಮನೆಗೆ ಹೋಗಿದ್ದಾಗ ಒತ್ತಾಯಮಾಡಿ ಹಚ್ಚಿಕೊಳ್ಳುವಂತೆ ಮಾಡಿದಳು. ತಪ್ಪು ನನ್ನದಲ್ಲ. ಆದರೆ ಹಳ್ಳಿಗೆ ಹೋದ ಮಾತ್ರಕ್ಕೆ ಹಳ್ಳಿಯ ಗಂಗಿಯ ಹಾಗೆ ನಡೆದುಕೊಳ್ಳಬೇಕಾಗಿದ್ದರೆ ನನಗೆ ನಿಮ್ಮ ಹಳ್ಳಿನೂ ಬೇಡ, ಅಲ್ಲಿಯ ಸರಳ ಸುಂದರ ಜೀವನವೂ ಬೇಡ."

ರಮೇಶನ ಹೆಗಲ ಮೇಲೆ ಕೈಯಿಟ್ಟು ವ್ಯಂಗ್ಯವಾಗಿ ಅವನನ್ನು ದೂಡುತ್ತ ಕಿರಣ ನುಡಿದಳು.

ಇಬ್ಬರೂ ಹಿಂದೂ ಸ್ಮಶಾನದ ಆ ಬದಿಗೆ ನಡೆಯತೊಡಗಿದ್ದರು. ಜನರೂ ವಿರಳವಾಗುತ್ತ ನಡೆದಿದ್ದರು.

"ಅದನ್ನು ನಾನು ಆದರ್ಶ ಎನ್ನಲಿಲ್ಲ, ತಾವಡೇಕರ್. ಅದು ಜೀವನದ ಸತ್ಯ ಚಿತ್ರ ಎಂದೆ ಅಷ್ಟೆ. ಆದರೆ ಆದರ್ಶಗಳು ಹುಟ್ಟುವದು ಇಂಥ ಜೀವನದಲ್ಲಿಯೇ. ಇಲ್ಲಿಯೇ ಕುಳಿತುಕೊಳ್ಳೋಣ ಅಲ್ಲವೆ? ನಿಮಗೆ ಮತ್ತೇನು ಎಂಗೇಜ್‌ಮೆಂಟ್ಸ್ ಇಲ್ಲವಲ್ಲ?"

"ಇದ್ದರೇನು? ಈವತ್ತು ನೀವು ಹೇಳಿದ ಹಾಗೆ ಕೇಳಬೇಕೆಂದು ಮೊದಲೇ ಕರಾರು ಹಾಕಿದ್ದೀರಿ."

ಮಳಲ ಮೇಲೆ ಕೂಡ್ರುತ್ತ ಕಿರಣ ಹೇಳಿದಳು,

"ನಾನು ಬರದಿದ್ದರೆ ಈವತ್ತು ನೀವೊಬ್ಬರೇ ಇಲ್ಲಿ ಬಂದು ಕುಳಿತಿರುತ್ತಿದ್ದಿರೇನು?"

"ಅದಕ್ಕಾಗಿಯೇ ದಾದರದಲ್ಲಿ ಇಳಿದಿದ್ದೆ. ಸಣ್ಣವನಿರುವಾಗಿನಿಂದಲೂ ಹೀಗೆ ಏಕಾಂತವಾಗಿ ಎಲ್ಲಿಯಾದರೂ ತಿರುಗಾಡುವದು, ಕೂಡ್ರುವದು ನನಗೆ ಸ್ವಭಾವವಾಗಿದೆ. ಕಾಲೇಜಿನಲ್ಲಿದ್ದಾಗಲೂ ಹಾಗೆಯೇ. ಮುಂಬಯಿಗೆ ಬಂದು ಕೆಲಸಕ್ಕೆ ತೊಡಗುವ ಮೊದಲು ಬಹುಶಃ ದಿನಾಲೂ ಬರುತ್ತಿದ್ದೆ. ಈಗ ಲಾಲಾನ ಕೆಲಸಕ್ಕೆ ತೊಡಗಿದಾಗಿನಿಂದ ಏಕಾಂತ ಅನ್ನೋದು ತುಟ್ಟಿಯಾಗಿದೆ."

"ಹಾಗಾದರೆ ನಾನು ಬಂದು ಬಹಳ ತಪ್ಪು ಮಾಡಿದೆ ಅಲ್ಲವೆ?"

" ಮಾಡುವದೇನು ? ಕೊರಳಿಗೆ ಬಿದ್ದವರನ್ನು ಬೇಡ ಅನ್ನಲಿಕ್ಕೆ...ಹಾಯ್, ಕೋಮಲ ಜನರ ಹಲ್ಲುಗಳೂ ಕೋಮಲ ಇರುತ್ತವೆ ಎನ್ನುವದು ತೀರ ಸುಳ್ಳು "

ಎನ್ನುತ್ತ ರಮೇಶ ಕಿರಣಳ ಕೈಯಿಂದ ತನ್ನ ಕೈಬಿಡಿಸಿಕೊಂಡು ಆಕೆಯ ಹಲ್ಲಿನ ಗುರುತಾದಲ್ಲಿ ನೋಡಿಕೊಂಡನು. ಅವನ ಕೈಯನ್ನು ಮತ್ತೆ ಎಳೆದು ಕೊಂಡು ಬೆರಳುಗಳೊಡನೆ ಆಡುತ್ತ ಕಿರಣ ಕೇಳಿದಳು,

" ಹಾಗೆ ಏಕಾಂತವಾಗಿದ್ದುಕೊಂಡು ಏನು ಗಳಿಸಿದಿರಿ ಇಲ್ಲಿಯ ತನಕ ?"

" ಮಾತಾಡಿದರೆ ಆಯುಷ್ಯ ಕಡಿಮೆಯಾಗುತ್ತದಂತಲ್ಲ. ಅದನ್ನಾದರೂ ಉಳಿಸಿಕೊಂಡಂತಾಯಿತು."

" ತನ್ನನ್ನು ಹೊಗಳಿಕೊಳ್ಳುವದು, ಇಲ್ಲವೆ ಬಿಂಕಪಡುವದು ಮನುಷ್ಯನಲ್ಲಿ ಇರಬಾರದ ಗುಣಗಳಾಗಿದ್ದಂತೆ ತನ್ನ ಯೋಗ್ಯತೆ, ವ್ಯಕ್ತಿತ್ವವನ್ನು ವ್ಯಕ್ತಪಡಿಸ ದಿರುವದೂ ಗುಹ್ನೆ ಎಂದರೆ ನೀವು ನಂಬುತ್ತೀರೋ ಇಲ್ಲವೋ. 'ವ್ಯಕ್ತಪಡಿಸ ಲಾಗದ ಬುದ್ಧಿ ಮತ್ತೆ - ತನ್ನನ್ನೇ ತಾನು ತಿನ್ನುತ್ತದೆ' ಎನ್ನುವದನ್ನು ಕೇಳಿದ್ದೀರೇನು ? ನಿಮ್ಮ ಯೋಗ್ಯತೆ ನಿಮಗೇ ತಿಳಿದಿಲ್ಲವೆಂದು ಹೇಳಿದರೆ ನೀವು ಮುಖಸ್ತುತಿ ಎಂದುಕೊಳ್ಳಬಹುದು."

" ನೀವು ದೊಡ್ಡ ತಪ್ಪು ಮಾಡಿದ್ದೀರಿ, ಮಾಹುಲಿ. ಜಗತ್ತಿನಲ್ಲಿ ನಿಮ್ಮ ಹಕ್ಕಿನಿಂದ ಸಿಗಬಹುದಾದ ಸ್ಥಳವನ್ನು ನೀವು ಅಲ್ಲಗಳೆದಿದ್ದೀರಿ. ಕಾಲೇಜಿನಲ್ಲಿ ಸ್ಕಾಲರ್‌ರಾಗಿ, ಉತ್ತಮ ಆಟಗಾರರಾಗಿ, ಬಿ.ಎ. ಎಲ್.ಎಲ್.ಬಿ. ಪಾಸಾಗಿ ಏನು ಗಳಿಸಿದಿರಿ. ಯಾವದೋ ವಕೀಲರ ಫರ್ಮಿನಲ್ಲಿ ಕಾರಕೂನನ ಜಾಗ ! ಯೋಗಾ ಯೋಗದಿಂದ ಲಾಲಾ ಭೆಟ್ಟಿಯಾಗಿ ನಿಮ್ಮ ಯೋಗ್ಯತೆಯ ಸ್ವಲ್ಪ ಭಾಗವನ್ನಾದರೂ ಅರಿತು ನಿಮ್ಮನ್ನು ಪಡೆಮುಕೊಳ್ಳದಿದ್ದರೆ ಬಹುಶಃ ಇಂದಿಗೂ ಅದೇ, ಇಲ್ಲವೇ ಅಂಥದೇ ಏನಾದರೂ ಕೆಲಸದಲ್ಲಿರುತ್ತಿದ್ದಿರಿ.

" ನಿಮ್ಮ ಬುದ್ಧಿಯ ಯಾವ ಉಪಯೋಗವಾಗುತ್ತಿತ್ತು ?

" ಅವಿಶ್ರಾಂತ ಶ್ರಮುವಹಿಸುವ ನಿಮ್ಮ ಈ ಉತ್ಸಾಹ, ಈ ಹಾರ್ದಿಕತೆ, ಪ್ರೇಮ, ದಯೆ ಇವೆಲ್ಲವುಗಳು ಎಲ್ಲಿ ಹೋಗುತ್ತಿದ್ದವು ? ದ್ವಾಪರಯುಗದಲ್ಲಾ ಗಿದ್ದರೆ ಯಾವನೊಬ್ಬ ಅರಸನ ಕನಸಿನಲ್ಲಿ ದೇವದೂತನು ಬಂದು, ಇಂಥ ಮಹಾ ವ್ಯಕ್ತಿಯೊಬ್ಬನಿದ್ದಾನೆ, ಅವನನ್ನು ಮಂತ್ರಿಯಾಗುವಂತೆ ಕೇಳಿಕೋ ಎಂದು ಹೇಳಿ ನಿಮ್ಮ ಯೋಗ್ಯತೆಯ ಬೆಲೆ ಬರುವಂತೆ ಮಾಡಬಹುದಾಗಿತ್ತು."

"ಆದರೆ ಇದು ಇಪ್ಪತ್ತನೆಯ ಶತಮಾನ. ದೇವದೂತರ ಬದಲು ರಾಕ್ಷಸರು ತುಂಬಿದ್ದ ಕಾಲ. ನಿಮ್ಮಷ್ಟಕ್ಕೆ ದೊಡ್ಡ ಮನುಷ್ಯರಾಗಿ ಮೂಲೆ ಹಿಡಿದು ಕುಳಿತುಬಿಟ್ಟರೆ ಕಡೆಯವರೆಗೆ ಅಲ್ಲಿಯೇ ಕೊಳೆಯುತ್ತೀರಿ. ಜಗತ್ತು ಮುಂದೆ ಹೋಗುತ್ತಲೇ ಇರುತ್ತದೆ. ನಿಮಗಿಂತ ತೀರ ಕೆಳಗಿನವನು, ತೀರ ಅಯೋಗ್ಯನು ತನ್ನಲ್ಲಿರಬಹುದಾದ ಅತಿ ಚಿಕ್ಕ ಸಂಗತಿಯನ್ನೇ ಗುಡ್ಡವಾಗಿಸಿ ಗಂಟಲು ಹರಿಯುವಂತೆ ಒದರಿ ನಿಮ್ಮ ಸ್ಥಳವನ್ನಾಕ್ರಮಿಸುತ್ತಾನೆ, ನಿಮ್ಮ ತಲೆಯ ಮೇಲೂ ಏರಿ ಕುಳಿತಿರುತ್ತಾನೆ. ಏಕಾಂತ ವಾಸ ಒಂದು ಸದ್ಗುಣ ವಾಗುವದಿಲ್ಲ, ಮಾಹುಲಿ. 'ಮೌನಂ ಪಂಡಿತ ಲಕ್ಷಣಂ' ಅನ್ನುವದು ಇಂದಿನ ಜಗತ್ತಿನಲ್ಲಿ ಒಂದು ವಂಗ್ಯ ಅಷ್ಟೆ."

ಕಿರಣ ಮಾತು ನಿಲ್ಲಿಸಿ ರಮೇಶನತ್ತ ನೋಡಿದಳು. ಆತ ಮಸುಕಾಗ ತೊಡಗಿದ್ದ ಸಾಗರದ ಅಲೆಗಳನ್ನೇ ಎಣಿಸುವ ಪ್ರಯತ್ನ ನಡೆಸಿದಂತಿತ್ತು.

"ಏಕೆ ಬೇಸರವಾಯಿತೆ?"

ಕಿರಣ ಒಂದು ಕೈಯಿಂದ ಅವನ ಬೆನ್ನನ್ನು ಬಳಸಿ ಇನ್ನೊಂದು ಕೈಯಿಂದ ಅವನ ಗದ್ದ ಹಿಡಿದು ಮೋರೆಯನ್ನು ತನ್ನೆಡೆ ಮಾಡಿಕೊಂಡು ಮೃದುವಾಗಿ ಕೇಳಿದಳು.

"ಇಲ್ಲ, ನಿಮ್ಮಂತೆಯೇ ನಾನೂ ಬಹಳಸಾರೆ ವಿಚಾರ ಮಾಡಿದ್ದೆ. ಆದರೆ ಮನುಷ್ಯ ಸ್ವಭಾವವನ್ನಾದರೂ ಬದಲಿಸಬಹುದು, ಪ್ರವೃತ್ತಿಯನ್ನು ಬದಲಿಸ ಲಾಗುವದಿಲ್ಲ. ನನ್ನ ತಂದೆ – ನ್ಯಾಯವಾಗಿ ಬರಬೇಕಾಗಿದ್ದ ತಮ್ಮ ಪಾಲಿಗಾಗಿ ತಮ್ಮನೊಡನೆ ನ್ಯಾಯಕ್ಕೆ ಹೋಗದೆ ತಮ್ಮಷ್ಟಕ್ಕೆ ಇದ್ದುಬಿಟ್ಟಿದ್ದರು. ಜೀವನ ಎಂದರೆ ಕರ್ತವ್ಯ ಮತ್ತು ಸಹನೆ ಎಂದು ಮಾತ್ರ ತಿಳಿದಿದ್ದ ಆ ತಂದೆಗೆ ಮಗನಾಗಿ ಅವರ ಅದೃಶ್ಯ ಆದರ್ಶದಲ್ಲಿಯೇ ಬೆಳೆದವನು ನಾನು. ಅವನ ಈ ಕರ್ತವ್ಯ ಬುದ್ಧಿ ನನ್ನ ಜೀವನದಲ್ಲಿಯೂ ಪ್ರವೃತ್ತಿಯಾಗಿ ಬಂದಿತು. ಆದರೆ ಆ ಸಹನೆ ಬರಲಿಲ್ಲ, ಆ ಸಂತುಷ್ಟಿ ಬರಲಿಲ್ಲ. ಮುಂಬಯಿಯ ಈ ಬ್ಯಾಂಕುಗಳು, ಈ ಅರಮನೆಗಳು, ಈ ಮಿಲ್ಲುಗಳು ಇವುಗಳಿಗೆಲ್ಲ ಬೆಂಕಿಯಿಟ್ಟು ನೀರೋನಹಾಗೆ ಗಹಗಹಿಸಿ ನಗುತ್ತ ನಿಂತಿರುವ ಭಾವನೆ ಅದೆಷ್ಟೋ ಸಾರೆ ನನ್ನಲ್ಲಿ ಬಂದು ಹೋಗಿದೆ. ಲಾಲಾನ ಎಕೌಂಟ್ ಮಾಡುತ್ತಿರುವಾಗ ಪೆಟ್ಟಿಗೆಯ ಆ ನೋಟಿನ ಕಟ್ಟುಗಳನ್ನೆಲ್ಲ ಒಂದು ಟ್ರಂಕಿನಲ್ಲಿ ತುಂಬಿಕೊಂಡು ಓಡಿಬಿಡೋಣ ಎಂದೂ

ಅನ್ನಿಸುತ್ತಿದ್ದಿತು. ಆದರೆ ಈ ಕರ್ತವ್ಯ ಪ್ರವೃತ್ತಿ ಯಾವುದನ್ನೂ ಮಾಡದಂತೆ ಕಾಪಿಟ್ಟಿದೆ. ನಾನು ಏಕಾಂತ ಪ್ರಿಯನಾಗಿದ್ದರೆ ಅದೊಂದು ಸದ್ಗುಣ ಎಂದು ಆಗಿಲ್ಲ. ಸಂಗಡಿಗರ ತೀರ ಭಿನ್ನ ವಿಚಾರ ಅಭಿರುಚಿಗಳಿಗೆ ಒಪ್ಪಲಾರದೆ ಅವರನ್ನು ದ್ವೇಷಿಸಿಬಿಡುವ ಅಂಜಿಕೆಯಿಂದ ಅವರಿಂದ ದೂರವಿರಲು ಯತ್ನಿಸುತ್ತೇನೆ.

ಆಗಬೇಕೆಂದು ಸನ್ಯಾಸಿಯಾಗಿಲ್ಲ. ಮತ್ತೇನೂ ಆಗಲಾರದ್ದಕ್ಕೆ ಆಗಿದ್ದೇನೆ."

"ಹಂ, ಬರಡು ಸನ್ಯಾಸ. ಏನು ಸಾಧಿಸಿದಂತಾಯಿತು?"

ಎಂದು ಉದ್ಗಾರ ತೆಗೆದಳು ಕಿರಣ.

"ಹಾಗೆ ಏನಾದರೂ ಸಾಧಿಸುವಂತೆ ಅನುವು ಮಾಡಿಕೊಟ್ಟವರು ಲಾಲಾ. ಅವರ ಉಪಕಾರವನ್ನು ಎಂದೂ ಮರೆಯುವಂತಿಲ್ಲ. ಅವರ ಪರಿಚಯವಾಗಿರದಿದ್ದರೆ ಸಿರಿವಂತರೂ, ಅದರಲ್ಲಿಯೂ ಮಿಲ್ ಒಡೆಯರು ಇಷ್ಟು ಸಹೃದಯರಾಗಿರುತ್ತಾರೆ ಎಂದು ನನಗೆಂದೂ ನಂಬಿಕೆಯಾಗುತ್ತಿರಲಿಲ್ಲ. ಇಂಥ ವ್ಯವಹಾರವೊಂದನ್ನು ಇಷ್ಟು ಪೂರ್ಣವಾಗಿ ನೀಗಿಸಿಕೊಂಡುಹೋಗಬಲ್ಲೆ ಎಂದು ತೋರಿಸಿಕೊಟ್ಟವರು ಅವರು. ನನ್ನ ಜೀವನವನ್ನೇ ರೂಪಿಸಿದ್ದಾರೆ. ಇಂದು ಗಿರಿಜಾತಾಯಿಗೆ ನಾನು ಮಗ, ಲಾಲಾಗೆ ತಮ್ಮ."

"ಅದರಲ್ಲಿ ಒಳ್ಳೆಯತನ ಏನು ಬಂತು. ಯಾರನ್ನಾದರೂ ನೀವು ನಿಮ್ಮವರಾಗಿಸಿಕೊಳ್ಳಬಲ್ಲಿರಿ. ನಿಮ್ಮಿಂದ ಲಾಲಾಗೆ ಈಗ ಒಂದಕ್ಕೆರಡು ಪಟ್ಟು ಲಾಭವಾಗುತ್ತಿದೆ ಎನ್ನುವದನ್ನು ನೀವು ಮರೆಯುತ್ತೀರಿ. ಮೊದಲಾದರೆ ಫ್ಯಾಕ್ಟರಿಯ ಚಪರಾಸಿಯಿಂದ ಹಿಡಿದು ಫೋರ್‌ಮನ್‌ವರೆಗೆ ತಿಂದುಬಿಟ್ಟುದು ಲಾಲಾನ ಪಾಲಿಗಾಗುತ್ತಿತ್ತು. ತನ್ನ ಕೈಲಿ ಆಗದ್ದಕ್ಕೆ ಲಾಲಾನಾದರೂ ಸಿಕ್ಕಿದುದರಲ್ಲಿಯೇ ಸಮಾಧಾನಗೊಳ್ಳುತ್ತಿದ್ದನು. ಒಮ್ಮೆ ಏನೋ ಜಗಳ ಬಂದು ಫ್ಯಾಕ್ಟರಿಯ ಟೆಕ್ನಿಕಲ್ ಸ್ಟಾಫ್ ಜನರೆಲ್ಲ ತಾವು ಕೆಲಸ ಬಿಟ್ಟು ಹೋಗುವದಾಗಿ ಅಂಜಿಸಿದ್ದರು. ಲಾಲಾ ಗಾಬರಿಯಾಗಿ ಅವರು ಹೇಳಿದ ಟರ್ಮಿಗೆ ಒಪ್ಪಿಕೊಳ್ಳಲು ಸಿದ್ಧನಾಗಿ ಕುಳಿತಿದ್ದನು. ಅಣ್ಣ ಅದನ್ನೆಲ್ಲ ತಿಳಿದು ಮಧ್ಯ ಕೈಹಾಕಿ 'ಬಿಟ್ಟು ಹೋದರೆ ಹೋಗಿರಿ. ಒಂದೆರಡು ತಿಂಗಳು ಫ್ಯಾಕ್ಟರಿ ಮುಚ್ಚಿ ಹೊಸ ಜನರೊಡನೆ ಹೊಸದಾಗಿ ಆರಂಭಿಸುತ್ತೇವೆ' ಎಂದು ಜಬರಿಸ

ದಿದ್ದರೆ ಬಹುಶಃ ಆ ದಿನವೇ ಚಿತಳೆ ಕಂಪನಿ ಕೊನೆಗೊಳ್ಳುತ್ತಿತ್ತು. ಅಂಥದನ್ನು ನೀವು ಮುಂಬಯಿಯಲ್ಲಿಯೇ ಹೆಸರಾದ ವ್ಯವಹಾರವನ್ನಾಗಿ ಮಾಡಿದ್ದೀರಿ."

ಕಿರಣ ಸಹಾನುಭೂತಿಯುತವಾಗಿ ನುಡಿದಳು.

"ಹೋಗಲಿ ಏನೋ ಕೇಳಬೇಕೆಂದು ಬಹಳ ದಿನಗಳಿಂದ ಯೋಚಿಸುತ್ತಿದ್ದೆ. ಕೇಳಲೆ?"

"ಏನು?"

"ಲಾಲಾನೊಡನೆ ಮೊದಲಿನಿಂದ ಇಷ್ಟು ಹತ್ತಿರದ ಸ್ನೇಹವಿಟ್ಟುಕೊಂಡವರು ಇನ್ನೂ ಇಷ್ಟು ದೂರವಾಗಿ ಏಕೆ ವರ್ತಿಸುತ್ತೀರಿ? ಲಾಲಾ ಮಾತ್ರ ನೀವೆಂದರೆ ಪ್ರಾಣಬಿಡುತ್ತಾರೆ."

ಕಿರಣ ಮಾತಾಡಲಿಲ್ಲ. ರಮೇಶನ ಬೆರಳನ್ನು ಹಿಡಿದು ಮಳಲ ಮೇಲೆ ಗೆರೆಕೊರೆಯುತ್ತ ಹಾಗೆಯೇ ಕುಳಿತಿದ್ದಳು. ರಮೇಶ ತಾನು ಆ ಪ್ರಶ್ನೆಯನ್ನು ಕೇಳಬಾರದಾಗಿತ್ತು ಎಂದುಕೊಂಡನು.

ಸ್ವಲ್ಪ ತಡೆದು ಕಿರಣ ಮಾತಾಡಿದಳು.

"ಸ್ನೇಹಕ್ಕೆ ಒಂದು ಕಾರಣ ಇರುತ್ತದೆಯೆ? ಆದರೂ ನಿಮ್ಮ ಪ್ರಶ್ನೆಗೆ ಮತ್ತೊಂದಾದರೂ ಉತ್ತರ ಹೇಳುತ್ತೇನೆ. ಈಗ ಕ್ಷಮಿಸಿ. ನಾನು ಮಾತ್ರ ನಿಮ್ಮಿಂದ ಬೇರೆಯೇ ಪ್ರಶ್ನೆಯನ್ನು ನಿರೀಕ್ಷಿಸಿದ್ದೆ. ನಿಮ್ಮೊಡನೇಕೆ ಇಷ್ಟು ಸಲಿಗೆಯಿಂದ ವರ್ತಿಸುತ್ತಿದ್ದೇನೆಂದು ಕೇಳುವಿರಾಗಿ ಕಲ್ಪಿಸಿದ್ದೆ. ಹೇಳಲೆ?"

"ಬೇಡ. ತುರ್ತ ನಿಮ್ಮ ಕೈ ಗಡಿಯಾರ ನೋಡಿಕೊಳ್ಳಿ. ಆಗಲೇ ಎಂಟಾಗಿದೆ. ನನಗೇನೂ ಇಲ್ಲಿಯೇ ಮಲಗಿಬಿಡಲು ಅಭ್ಯಂತರವಿಲ್ಲ. ಅಕ್ಕನ ಮನೆಯಲ್ಲಿ ಗಡದ್ದಿನ ಊಟವಾಗಿದೆ."

"ನನಗೂ ಬಹುಶಃ ನಿದ್ದೆ ಬರಹುದು. ಒಂದುಹೊತ್ತು ಊಟ ಮಾಡದಿರುವ ನವಾನುಭವವನ್ನು ಪಡೆಯುವ ಕುತೂಹಲವೂ ಇದೆ. ಬಿ.ಎ. ಪರೀಕ್ಷೆಗೆ ನಿಬಂಧಬಿದ್ದರೂ ಬೀಳಬಹುದು."

ಇಬ್ಬರೂ ಎದ್ದು ನಗರದತ್ತ ತಿರುಗಿದಾಗ ಒಂಬತ್ತರ ಹತ್ತಿರವಾಗುತ್ತ ಬಂದಿತ್ತು. ಮತ್ತೆ ಕಾರು ನಿಲ್ಲಿಸಿದಲ್ಲಿ ಹೋಗುವದು ಬೇಸರವೆನಿಸಿ ಕಿರಣ ಸೀದಾ ಮನೆಗೇ ಹೋಗಿ ಯಾರಿಂದಲಾದರೂ ಕಾರು ತರಿಸಿದರಾಯಿತು ಎಂದಿದ್ದರಿಂದ

ಇಬ್ಬರೂ ಕಿರಣಳ ಮನೆಯತ್ತ ನಡೆಯುತ್ತಲೇ ಹೋದರು. ಬೀಚಿನಿಂದ ಹತ್ತು ನಿಮಿಷಗಳ ಹಾದಿಯಾಗಿತ್ತದು.

ಮನೆಯ ಅಂಗಳಕ್ಕೆ ಬಂದಾಗ ಎದುರು ನಿಂತಿದ್ದ ಲಾಲಾನ ಕಾರು ನೋಡಿ

"೬॥ ಯ ಚಿತ್ರಕ್ಕಾಗಿ ಟಿಕೆಟ್ ರಿಝರ್ವ್ ಮಾಡಿಸಿ ಬ್ರಾಡ್‌ವೇದಲ್ಲಿ ಕಾಯುತ್ತಿರುತ್ತೇನೆ"

ಎಂದು ಲಾಲಾ ಮುಂಜಾನೆ ಹೇಳಿದುದು ಕಿರಣಳಿಗೆ ನೆನಪಾಯಿತು-!

"ಆದರೂ ನೀವು ಇಲ್ಲಿಯ ತನಕ ಈ ವಿಷಯವಾಗಿ ತುಟಿಯೆರಡು ಮಾಡಲಿಲ್ಲ!"

ರಮೇಶನ ದನಿ ಸಿಟ್ಟಿನಿಂದ ಕರ್ಕಶವಾಗಿತ್ತು.

ಆದರೆ ಕಿರಣ ಅತ್ತ ಲಕ್ಷವೀಯದೆ ನಗುತ್ತ 'ಟಾ ಟಾ' ಮಾಡಿ ಒಳಗೆ ನಡೆದುಬಿಟ್ಟಳು.

# ೨೫

ಲಾಲಾ ಮನೆಗೆ ಬಂದಾಗ ಹನ್ನೊಂದರ ಹತ್ತಿರವಾಗುತ್ತಿದ್ದರೂ ರಮೇಶ ಇನ್ನೂ ಮಲಗಿರಲಿಲ್ಲ.

ಕಿರಣಳ ಮನೆಯಲ್ಲಿಯೇ ಊಟಮಾಡಿ ಬರುತ್ತೇನೆ ಎಂದು ಲಾಲಾ ಫೋನ್ ಮಾಡಿದ್ದರಿಂದ, ರಮೇಶ ತಾನೂ ಊಟಮಾಡುವದಿಲ್ಲ ಎಂದಿದ್ದರಿಂದ, ಗಿರಿಜಾತಾಯಿ ನಾನಾಗೆ 'ಆಹಾರ ಖಾತೆ' ಯನ್ನು ಮುಚ್ಚಿಬಿಡ ಹೇಳಿ ತಾನು ಉಪವಾಸದ ಅವಲಕ್ಕಿ ತಿಂದು ತನ್ನ ಮಲಗುವ ಕೋಣೆಗೆ ಹೋಗಿಬಿಟ್ಟಿದ್ದಳು.

ಲಾಲಾ ನೆಟ್ಟಗೆ ರಮೇಶನ ಖೋಲಿಗೆ ಬಂದು ಎದುರಿನ ಕುರ್ಚಿಯಲ್ಲಿ ಕೂಡ್ರುತ್ತ ಹೇಳಿದನು,

"ನೀನು ಇನ್ನೂ ಮಲಗಿರುವದಿಲ್ಲವೆಂದೇ ಲೆಕ್ಕ ಹಾಕಿದ್ದೆ. ನಿನ್ನೊಡನೆ ಸ್ವಲ್ಪ ಮಾತಾಡುವದಿದೆ."

ರಮೇಶ ಪ್ರಶ್ನಾರ್ಥಕವಾಗಿ ಲಾಲಾನನ್ನು ನೋಡಿದನು.

"ಕಿರಣ, ನೀನು ಇಬ್ಬರೂ ದಾದರ ಬೀಚಿಗೆ, ತಿರುಗಾಡಲು ಹೋಗಿದ್ದಿರಂತೆ."

"ಹೌದು, ನಾನೂ ಅಕ್ಕನ ಮನೆಯಿಂದ ಬರುತ್ತ ಸಹಜವಾಗಿ ದಾದರದಲ್ಲಿ ಇಳಿದಿದ್ದೆ. ಅಕಸ್ಮಾತ್ ಭೆಟ್ಟಿಯಾದರು. ಇಬ್ಬರೂ ಸುತ್ತಾಡುತ್ತ ಹೋಗಿದ್ದೆವು."

"ಕಿರಣ ಹಿಂದೆಂದೂ ಹಾಗೆ ಬೀಚಿಗೆ, ಅಲ್ಲಿ ಇಲ್ಲಿ ಅಂತ ತಿರುಗಿದವಳಲ್ಲ. ಮೇಲಾಗಿ ಈ ಹೊತ್ತು ನನ್ನೊಡನೆ ಬ್ರಾಡ್‌ವೇಗೆ ಬರುತ್ತೇನಾಗಿ ಹೇಳಿದ್ದಳು."

"ನನಗೆ ತಿಳಿದಿರಲಿಲ್ಲ. ಅವರಿಗೂ ನಿಮ್ಮ ಕಾರು ನೋಡಿದಾಗಲೇ ಆ ವಿಷಯ ನೆನಪಾಗಿರಬೇಕು. ಮರೆತು ಹೋದದ್ದಕ್ಕೆ ಆತಂಕಪಟ್ಟುಕೊಂಡರು."

"ಅವಳ ವಿಷಯದಲ್ಲಿಯ ನನ್ನ ಭಾವನೆಯುನ್ನು ಹೇಳಿದ್ದುದು ನಿನಗೆ ನೆನಪಿರಬೇಕಲ್ಲ?"

"ಬರೀ ನೆನಪಲ್ಲ, ಲಾಲಾ. ಇಂದಿಗೂ ಅವರನ್ನು ನನ್ನ ಅತ್ತಿಗೆಯೆಂದೇ ಕಾಣುತ್ತ ಬಂದಿದ್ದೇನೆ."

"ಮತ್ತೆ ಯಾರಾದರೂ ಹಾಗೆ ಅಂದಿದ್ದರೆ ನಂಬುತ್ತಿರಲಿಲ್ಲ. ಆದರೆ ನಿನ್ನ ವಿಷಯದಲ್ಲಿ ಮಾತ್ರ ಮೊದಲಿನಿಂದಲೂ ನಾನು ಅದೇ ವಿಶ್ವಾಸದಿಂದ ಸುಮ್ಮನಿದ್ದೆ. ನೀನು ಉಂಡ ಮನೆಯ ಗಳ ಎಣಿಸುವವನಲ್ಲವೆಂದೇ ನನ್ನದೂ ನಂಬಿಕೆಯಿತ್ತು."

ರಮೇಶ ಮಾತಾಡಲಿಲ್ಲ. ತನ್ನಿಂದ ಆ ನಂಬಿಗೆಗೆ ಭಂಗಬರುವಂಥ ಯಾವ ಅಪರಾಧವಾಗಿದೆ ಎಂದು ಯೋಚಿಸುತ್ತ ಕುಳಿತಿದ್ದನು. ಲಾಲಾ ಮುಂದರಿಸಿದನು,

"ಆದರೆ ಕಿರಣನ ರೀತಿ, ನಡತೆ ನೋಡಿದರೆ ಬೇರೆಯೇ ಅರ್ಥವಾಗುತ್ತಿದೆ. ಆಕೆ ನನಗಿಂತಲೂ, ಎಲ್ಲರಿಗಿಂತಲೂ ನಿನ್ನೊಡನೆ ಹೆಚ್ಚು ಸಲಿಗೆಯಿಂದ, ಸ್ವಚ್ಛಂದವಾಗಿ ವರ್ತಿಸುತ್ತಾಳೆಂಬುದನ್ನು ಕಂಡುಕೊಂಡಿಲ್ಲವೆ?"

ರಮೇಶ ಇನ್ನೂ ಮೌನ.

"ತಾಯಿ, ನಾನು, ಕಿರಣಳ ಅಣ್ಣನೂ ಸಹ ನಮ್ಮೆರಡು ಮನೆತನಗಳು ಒಂದಾಗಬೇಕೆಂದು ವ್ಯಕ್ತವಾಗಿ ಅಲ್ಲದಿದ್ದರೂ ಒಂದು ತರದಿಂದ ಸ್ವತಃ ಸಿದ್ಧ ಮಾತೆಂಬಂತೆ ತಿಳಿದುಕೊಂಡು ಬಂದಿದ್ದೆವು. ಇಲ್ಲಿಯವರೆಗಿನ ಕಿರಣಳ ನಡತೆ ಈ ತಿಳುವಳಿಕೆಗೆ ಉತ್ತೇಜನ ಕೊಡುವಂಥದಲ್ಲದಿದ್ದರೂ ನಿರಾಶೆ ಹುಟ್ಟು ವಂತೇನೂ ಇರಲಿಲ್ಲ. ವೇಳೆ ಕೂಡಿಬಂದಾಗ ಎಲ್ಲ ಸರಿಯಾಗಬಹುದೆಂದು ನಾನೂ ತಾಳಿಕೊಂಡಿದ್ದೆ. ನಿನ್ನ ಸ್ನೇಹವಾದಂದಿನಿಂದ ಕಿರಣ ಪೂರ್ಣ ಬದ ಲಾಗಿದ್ದಾಳೆ."

"................"

"ಮಾತಾಡುವದಿಲ್ಲವೇಕೆ ರಮೇಶ? ನಿಜ ಹೇಳು. ಕಿರಣ ನಿನ್ನನ್ನು ಪ್ರೀತಿಸುತ್ತಿರುವ ಬಗ್ಗೆ ನಿನಗೆ ಒಮ್ಮೆಯೂ ಸಂಶಯ ಬರಲಿಲ್ಲವೆ?"

ರಮೇಶನಿಗೆ ಸಂಶಯ ಬಂದಿರಲಿಲ್ಲವೆ! ರಮೇಶನ ಪೂರ್ಣ ಸ್ವಭಾವ ಪರಿಚಯವಾದ ಯಾರಿಗಾದರೂ ರಮೇಶನನ್ನು ಪ್ರೀತಿಸದಿರಲಿಕ್ಕೆ ಶಕ್ಯವಿರಲಿಲ್ಲ. ಕಿರಣಳ ಪರಿಚಯವಾದ ಕೆಲ ದಿನಗಳಲ್ಲಿಯೇ ಇಂಥದೊಂದು ಪ್ರಸಂಗ ಬರ ಬಹುದೆನ್ನುವ ವಿಚಾರವನ್ನು ಆತ ಬಹಳ ಪ್ರಯತ್ನಮಾಡಿ ತನ್ನ ಮನಸ್ಸಿನಿಂದ ಹೊರದೂಡಲಿಕ್ಕೆ ಯತ್ನಿಸಿದ್ದನು! ಆದರೆ ವೆಸ್ಟ್‌ಎಂಡ್‌ದ ಆ ಮನನೀಯ ದಿನ, ಕಿರಣಳ ಬಿಸಿ ಮಾತುಗಳನ್ನು ಶಾಂತವಾಗಿ ಕೇಳುತ್ತಿರುವಾಗಲೇ ರಮೇಶ ಅಂದುಕೊಂಡಿದ್ದನು. 'ಈ ಹುಡುಗಿ ತನ್ನನ್ನು ಪ್ರೀತಿಸುತ್ತಾಳೆ! ಆದರೆ ಇದರ ಲೇಶಮಾತ್ರ ಅರಿವೂ ಆಕೆಗೆ ಆಗದಿರುವಂತೆ ಆಕೆಯ ಸಿರಿವಂತಿಕೆಯ ಅಭಿಮಾನ, ಮರ್ಯಾದೆ, ಸಂಸ್ಕೃತಿ ಆಕೆಯನ್ನು ಕಾಯುತ್ತಿವೆ!'

ಎಂಟು ದಿನಗಳ ನಂತರ ತನ್ನನ್ನು ಮಾತಾಡಿಸಲು ಹೂಡಿದ ನೆವವನ್ನೂ ಬಚ್ಚಿಡುವ ಪ್ರಯತ್ನಮಾಡದೆ ತೀರ ಸಹಜವಾಗಿ ಎಂಬಂತೆ ಆಕೆ ಹೇಳುತ್ತಿರು ವಾಗ ರಮೇಶನಿಗೆ ಯಾವ ಸಂಶಯವೂ ಇರಲಿಲ್ಲ. ಆಕೆಯ ಆ ಎಲ್ಲ ನಡತೆಗೆ ಒಂದೇ ಅರ್ಥ ಶಕ್ಯವಿತ್ತು.

ಕಿರಣ ರಮೇಶನನ್ನು ಪ್ರೀತಿಸುತ್ತಿದ್ದಳು, ಕನಿಷ್ಟ ಆ ಹಾದಿಯಲ್ಲಂತೂ ಇದ್ದಳು. ಆದರೆ ಅದು ಆಕೆಗೇ ತಿಳಿದಿರಲಿಲ್ಲ! ತಾನು ರಮೇಶನಂಥ ವ್ಯಕ್ತಿ ಯನ್ನು ಪ್ರೀತಿಸಬಹುದು ಎಂಬ ಶಕ್ಯತೆಯನ್ನೇ ಆಕೆ ತನ್ನ ಅಂತರ್ಯದಲ್ಲಿ ಬರ ಗೊಟ್ಟದ್ದಿಲ್ಲ. ದಿನ ಹೋದಂತೆಲ್ಲ ರಮೇಶ ಈ ವಿಷಯವಾಗಿ ಬಹಳ ಯೋಚಿಸ ತೊಡಗಿದ್ದನು. ಇದು ಎಲ್ಲಿ ಕೊನೆಗೊಳ್ಳಬಹುದು ಎಂದೂ ತರ್ಕಿಸುವ ಪ್ರಯತ್ನ ಮಾಡಿದ್ದನು. ಅದನ್ನು ನಿಶ್ಚಯಿಸುವ ಕಾಲ ಈಗ ಬಂದಿದೆ ಎಂದು ಕೊಂಡನು.

"ನಿಮ್ಮಲ್ಲಿಯೂ ಮುಚ್ಚಿಡುವಂಥ ವಿಷಯ ನನ್ನಲ್ಲಿ ಏನೂ ಇಲ್ಲ, ಲಾಲಾ. ತಾವಡೇಕರ್‌ರ ಮನಸ್ಥಿತಿಯ ಬಗ್ಗೆ ಈ ಕೆಲವು ದಿನಗಳಿಂದಲೂ ನನಗೆ ಅಂಜಿಕೆ ಯಾಗಿತ್ತು. ಆದರೆ ಈ ಸಂಬಂಧದಲ್ಲಿ ನಾನು ಯಾವ ಹಾದಿ ಹಿಡಿಯಬೇ ಕೆಂಬುದೇ ನನಗೆ ತಿಳಿಯದಾಗಿತ್ತು. ಯಾಕಂದರೆ ಸ್ವತಃ ತಾವಡೇಕರ್‌ರಿಗೆ ತಮ್ಮ ಮನಸ್ಥಿತಿಯ ಅರಿವಿಲ್ಲ. ನಿಮಗೆ ನಂಬಿಕೆಯಾಗುವದೋ ಇಲ್ಲವೊ –

ಇಷ್ಟೆಲ್ಲ ದಿನಗಳಲ್ಲಿ ನಮ್ಮಿಬ್ಬರ ನಡುವಿನ ಸಂಬಂಧ ಹತ್ತಿರದ ಸ್ನೇಹಿತರಂತಲ್ಲದೆ ಇನ್ನೊಂದು ರೂಪ ತಾಳಲಿಲ್ಲ. ನಮ್ಮಿಬ್ಬರಲ್ಲಿ ಒಬ್ಬರಾದರೂ ತಮ್ಮ ತಮ್ಮ ಭಾವನೆಗಳನ್ನು ಕುರಿತು ಮಾತಾಡಿಕೊಂಡಿಲ್ಲ. ನನ್ನಿಂದ ಶಕ್ಯವಿದ್ದಷ್ಟೂ ದೂರ ವಿರಲು ಯತ್ನಿಸುತ್ತಿದ್ದೆ ಮತ್ತು ಪ್ರಯತ್ನಮಾಡಿ ನಿಮ್ಮ ವಿಷಯವಾಗಿ ಏನಾದರೂ ಹೇಳ ಯತ್ನಿಸುತ್ತಿದ್ದೆ ಎಂದರೆ ಅದೂ ನಿಮಗೆ ನಂಬಿಕೆಯಾಗಲಿಕ್ಕಿಲ್ಲ. ಆ ವಿಷಯವಾಗಿ ನಾನು ಬಹಳ ಮಾತಾಡಲಿಚ್ಛಿಸುವದಿಲ್ಲ. ನೀವು ಹೇಳಿದಂತೆ ನನ್ನ ವಿಷಯವಾಗಿ ಅವರು ನಿರ್ಮಲ ಸ್ನೇಹದ ಗಡಿಯನ್ನು ದಾಟುವದರಲ್ಲಿ ದ್ದಾರೆ ಎನ್ನುವ ಸಂಶಯ ನನಗೂ ಬಂದಿದೆ ಎಂದು ಒಪ್ಪಿಕೊಳ್ಳುತ್ತೇನೆ. ಆದರೆ ನಾನೇನು ಮಾಡಬಹುದಾಗಿತ್ತು ?"

"ಆಕೆಯ ವಿಷಯವಾಗಿ ನಿನ್ನ ಭಾವನೆಯನ್ನು ಹೇಳಲಿಲ್ಲವಲ್ಲ ?"

"ನಾನೂ ಅವರನ್ನು ಪ್ರೀತಿಸುತ್ತಿದ್ದೇನೆಯೇ ಎಂದು ನಿಮ್ಮ ಪ್ರಶ್ನೆಯ ಅರ್ಥವಾಗಿದ್ದರೆ ನಾನದಕ್ಕೆ ಉತ್ತರವೀಯುವದಿಲ್ಲ. ಆದರೆ, ಆಗಲೇ ಹೇಳಿದೆನಲ್ಲ. ಅವರೊಡನೆ ನಾನಿದ್ದಾಗಲೆಲ್ಲ ನಿಮ್ಮ ಮನೋಗತವನ್ನು ಯಾವಾಗಲೂ ಮನಸ್ಸಿ ನಲ್ಲಿಟ್ಟುಕೊಳ್ಳುತ್ತಿದ್ದೆ. ನನ್ನ ಕರ್ತವ್ಯವನ್ನೂ ನೆನಪಿಸಿಕೊಳ್ಳುತ್ತಿದ್ದೆ. ಈ ಪ್ರೇಮ ಶಬ್ದಕ್ಕೆ ನನ್ನ ಶಬ್ದಕೋಶದಲ್ಲಿ ತೀರ ಭಿನ್ನವಾದ ಅರ್ಥವಿದೆ ಎಂದರೆ ನಿಮಗೆ ಒಗಟಾಗಿ ತೋರಬಹುದು. ಒಬ್ಬ ಲಕ್ಷಾಧೀಶರ ಮಗಳನ್ನು, ನಾಳೆ ನನ್ನ ಒಡೆಯರ ಧರ್ಮಪತ್ನಿಯಾಗಲಿರುವರೆಂದು ತಿಳಿದವರನ್ನು ಪ್ರೀತಿಸುವಷ್ಟು ಮೂರ್ಖತನವನ್ನಾಗಲಿ, ಅವಿಶ್ವಾಸವನ್ನಾಗಲಿ ನಾನು ಮಾಡಬಲ್ಲೆನೆಂದು ನೀವು ತಿಳಿಯಬಾರದಾಗಿತ್ತು, ಲಾಲಾ. ನನ್ನ ವಿಷಯಕ್ಕೆ ಸಂಶಯ ತಾಳಬಾರ ದಾಗಿತ್ತು."

"ಮನಸ್ಸಿನ ದುಗುಡ ಇಷ್ಟೆಲ್ಲ ವಿಚಾರ ಮಾಡಹಚ್ಚಿದೆ, ರಮೇಶ. ನಿನ್ನಲ್ಲಿ ಅಷ್ಟು ವಿಶ್ವಾಸವಿರದಿರುತ್ತಿದ್ದರೆ ಇಷ್ಟು ಶಾಂತವಾಗಿ ನಿನ್ನೊಡನೆ ಮಾತಾಡುತ್ತಲೇ ಇರಲಿಲ್ಲ. ಮೊದಲಿನಿಂದಲೂ ಕಿರಣ ಒಂದು ಗೂಢವಾಗಿಯೇ ಇದ್ದಾಳೆ. ಇಷ್ಟು ಸ್ನೇಹವಲ್ಲಿಯೂ ಬಹಳ ದೂರವಾದವರಂತೆ ತೋರ ತೊಡಗುತ್ತಾಳೆ. ಈ ಅಂತರ ನಿನ್ನಿಂದಾಗಿ ಉಂಟಾಗಬಾರದಲ್ಲ ಎನ್ನುವ ದೊಂದೇ ಆಶೆಯಿತ್ತು. ನಿನ್ನಲ್ಲಿ ನನಗೆ ಮೊದಲಿನಿಂದಲೂ ಅಭಿಮಾನ, ವಿಶ್ವಾಸ ಇತ್ತು. ಈಗಲೂ ಇದೆ. ಅದು ಭಂಗವಾಗಬಾರದೆಂದೇ ನನ್ನ ಇಚ್ಛೆ."

"ಅವರ ಮನೋಗತ ಅವರಿಗೇ ಅರಿವಾಗಿಲ್ಲವೆಂಬುದಂತೂ ನಿಶ್ಚಿತವಾದದ್ದು. ಆದ್ದರಿಂದ ಇನ್ನಾದರೂ ವೇಳೆ ವ್ಯರ್ಥವಾಗಿಲ್ಲ, ಲಾಲಾ. ನೀವಿಬ್ಬರೂ ಕೂಡಿ ಸುಖವಾಗಿರುವದಾದರೆ ನನಗೆ ಅದಕ್ಕೂ ಹೆಚ್ಚಿನ ಜೀವನ ಸಾರ್ಥಕ್ಯಬೇಕಾಗಿಲ್ಲ."

"ಅದು ಕೈಗೂಡುವಂತೆ ಏನು ಮಾಡಬೇಕೆಂಬುದೇ ತಿಳಿಯುವದಿಲ್ಲ. ನಿನ್ನೊಬ್ಬನನ್ನು ಬಿಟ್ಟರೆ ಆಕೆ ನನ್ನೊಡನಾಗಲಿ, ನಮ್ಮ ಮನೆಯಲ್ಲಾಗಲಿ ಇರುವಷ್ಟು ಸಲಿಗೆಯಿಂದ ಮತ್ತೆಲ್ಲಿಯೂ ಇರುವದಿಲ್ಲ. ಈವತ್ತು ಅವಳಣ್ಣನೊಡನೆಯೂ ಇದೇ ಮಾತು ನಡೆದಿತ್ತು. ಲಗ್ನದ ವಿಷಯ ಎತ್ತಿದಾಗಲೆಲ್ಲ 'ನಿಮಗೆ ನಾನು ಭಾರವಾದೆನೆ ?" ಎಂದುಬಿಡುತ್ತಾಳಂತೆ. ತನ್ನ ತಂಗಿ ಮೊದಲಿಗಿಂತ ಈಗ ಬಹಳ ಬದಲಿಸಿದ್ದಾಳೆ ಅನ್ನುತ್ತಿದ್ದನು. ಮೊದಲಾದರೆ ನೀರಿನಂತೆ ಹಣ ಚೆಲ್ಲಿ ಬೇಕು ಬೇಡಾದುದನ್ನೆಲ್ಲ ಕೊಳ್ಳುತ್ತಿದ್ದಳಂತೆ. ಕಪಾಟಿನ ತುಂಬ ಅರಿವೆಗಳಿದ್ದರೂ ತಿಂಗಳಿಗೊಮ್ಮೆ ಹೊಸದಾಗಿ ಕಂಡುದನ್ನೆಲ್ಲ ಕೊಂಡು ಒಂದು ದಿನ ಉಟ್ಟು ಒಗೆದು ಬಿಡುತ್ತಿದ್ದಳು. ಈಗಲಾದರೆ ಇಂಥದಕ್ಕೆಲ್ಲ ತೀರ ನಿರ್ಲಕ್ಷ್ಯ ಮಾಡತೊಡಗಿದ್ದಾಳೆ – ಎಂದನು. ನನಗೆನಿಸಿತು ಇದೆಲ್ಲ ನಿನ್ನ ಫಿಲಾಸಫಿಯ ಪರಿಣಾಮ ಎಂದು. ಅಂತೆಯೇ ನನ್ನ ಸಂಶಯ ಇನ್ನೂ ಗಟ್ಟಿಯಾಯಿತು. ನೋಡು ರಮೇಶ, ನಿನ್ನಿಂದಾಗಿ ನನ್ನ ಕಿರಣ ದೂರವಾಗುವಂತೆ ಮಾಡಬೇಡ."

ಲಾಲಾನ ಆಗಿನ ದೈನ್ಯವಾಣಿಯಲ್ಲಿ ತಾನು ಲಕ್ಷಾಧೀಶ, ರಮೇಶನನ್ನು ಕೆಲಸಕ್ಕಿಟ್ಟುಕೊಂಡವ, ಎನ್ನುವ ಯಾವ ಭಾವನೆಯೂ ಇರಲಿಲ್ಲ. ಆ ಕ್ಷಣ ರಮೇಶನಿಗೆ ಅವನ ವಿಷಯಕ್ಕೆ ಇನ್ನಿಲ್ಲದ ಅನುಕಂಪ ಉಂಟಾಯಿತು. ಒಂದು ದೀರ್ಘ ನಿಶ್ವಾಸ ಬಿಟ್ಟು ಹೇಳಿದನು,

"ಇದಕ್ಕೊಂದೇ ದಾರಿಯಿದೆ, ಲಾಲಾ. ನಾನು ತಾವಡೇಕರ್‌ರಿಂದ ದೂರವಾಗಬೇಕು. ದೃಷ್ಟಿಯಿಂದ ಮಾತ್ರವಲ್ಲ. ಅವರಿಗೆ ತಮ್ಮ ಹೃದಯದ ಪರಿಚಯವಾಗುವದರೊಳಗೆ ಪ್ರೀತಿಸಲು ನಾನು ಎಷ್ಟು ಅಯೋಗ್ಯನು ಎಂಬುದು ಅವರಿಗೆ ಮನವರಿಕೆಯಾಗಬೇಕು."

"ಅಂದರೆ ಏನು ಮಾಡಬೇಕಾಗುವದು ?"

"ಅದನ್ನು ವಿಚಾರಿಸಬೇಕು. ಆದರೆ ಒಂದು ಮಾತ್ರ ನಿಜ. ನಾನು ನಿಮ್ಮ ಕೆಲಸವನ್ನೂ ಮುಂಬಯಿಯನ್ನೂ ಬಿಟ್ಟು ಹೋಗಬೇಕಾಗುವದು."

"ಎಂಥ ಮಾತು, ರಮೇಶ !"

"ಅದೊಂದೇ ಮಾರ್ಗವಿದೆ, ಸರ್. ತಾವಡೇಕರ್‌ರ ಮನಸ್ಥಿತಿಯ ಪರಿಚಯ ನನಗಿದ್ದಷ್ಟು ನಿಮಗಿರಲಿಕ್ಕಿಲ್ಲ. ನಿಮ್ಮ ಮನಸ್ಸಿನಂತಾಗಬೇಕಾದರೆ ಇದೊಂದೇ ದಾರಿ. ಹಾಗೆ ನಾನು ಮುಂಬಯಿ ಬಿಟ್ಟುಹೋಗಲು ಪ್ರಬಲವಾದ, ಅನಿವಾರ್ಯವಾದ ಕಾರಣವೂ ಒಂದಿರಬೇಕು. ಆ ಕಾರಣದಿಂದಾಗಿ 'ತಾನು ಎಂಥ ಮನುಷ್ಯನ ಸ್ನೇಹಿತಳಾಗಿದ್ದೆ !' ಎಂದು ಅವರಿಗೆ ಮನಗಾಣಬೇಕು."

"ಸಾಕು ಬಿಡು, ರಮೇಶ. ಏನೆಲ್ಲ ಹರಟಬೇಡ. ಮತ್ತೇನಾದರೂ ಹೇಳು. ಕೆಲಸ ಬಿಡುವ ಮಾತೆತ್ತಬೇಡ. ತಾಯಿ ಏನೆಂದುಕೊಳ್ಳಬಹುದು ?"

"ಮನುಷ್ಯನಿಗೆ ಶಕ್ಯವಾಗಬಹುದಾದ ಒಂದೇ ಒಂದು ದಾರಿ ಹೇಳುತ್ತಿದ್ದೇನೆ, ಲಾಲಾ. ಕಾಕಿಗೂ ನಿಜವಾದ ಸಂಗತಿ ತಿಳಿಯಬೇಕಾಗಿಲ್ಲ. 'ಮ್ಯಾನೇಜರರು ಕೆಲಸಬಿಡುವಂಥದೇನೋ ಆಗಿರಬೇಕು' ಎಂದು ಎಲ್ಲರಿಗೂ ಅನಿಸಿರಬೇಕು. ನೀವೇನೂ ಬಹಳ ಮನಸ್ಸಿಗೆ ಹಚ್ಚಿಕೊಳ್ಳಬೇಕಾಗಿಲ್ಲ. ಮತ್ತೆಲ್ಲಿಯಾದರೂ ಇಂಥದೇ ಏನಾದರೂ ಕೆಲಸ ದೊರಕಿಸಿಕೊಳ್ಳುವ ಭರವಸೆ ನನಗಿದೆ. ನನಗಾಗಿ ಚಿಂತಿಸಬೇಡಿ, ಲಾಲಾ. ಏನೂ ಅಲ್ಲದವನನ್ನು ಇಷ್ಟು ವಿಶ್ವಾಸದಿಂದ ನಡೆಸಿಕೊಂಡು ಬಂದಿರಿ. ಅದಕ್ಕಾಗಿ ಕಡೆಯವರೆಗೂ ನಿಮಗೆ ಆಭಾರಿಯಾಗಿರುತ್ತೇನೆ. ನಿಮಗಾಗಿ ಇಷ್ಟನ್ನಾದರೂ ಮಾಡಲಾಗದಿದ್ದರೆ ನಿಮ್ಮ ವಿಶ್ವಾಸದಿಂದ ಏನಾದ ಹಾಗಾಯಿತು ? ನೀವು ಇನ್ನಾದರೂ ತಾವಡೇಕರ್‌ರನ್ನು ಹೆಚ್ಚು ಚನ್ನಾಗಿ ತಿಳಿಯಲೆತ್ನಿಸಬೇಕು. ನಿಮ್ಮ ಪ್ರೇಮವನ್ನು ಸಹಜವಾಗುವಂತೆ, ಸ್ವಚ್ಛವಾಗುವಂತೆ ಪ್ರಯತ್ನಿಸಿರಿ. ನೀವಿಬ್ಬರೂ ಒಂದೇ ವರ್ಗ, ದೃಷ್ಟಿ, ರೀತಿಯವರು. ನೀವಿಬ್ಬರೂ ಒಬ್ಬರಿಗೊಬ್ಬರಾಗಿಯೇ ಇದ್ದೀರಿ. ಹೋಗಿ ಮಲಗಿಕೊಳ್ಳಿ. ಇನ್ನು ಒಂದೆರಡು ದಿನಗಳೊಳಗಾಗಿ ಮುಂಬಯಿ ಬಿಡಬೇಕಾಗುವಂತೆ ನಾನೇನಾದರೂ ಕಾರಣ ಹುಡುಕಿರುತ್ತೇನೆ. ನೀವು ಮಾತ್ರ ಏನೂ ಸಂಕೋಚಪಟ್ಟುಕೊಳ್ಳಬಾರದು."

ಲಾಲಾ ಇನ್ನೂ ಅಸಮಂಜಸ ಮನಸ್ಸಿನಿಂದಲೇ ಎದ್ದು ಸಾವಕಾಶವಾಗಿ ತನ್ನ ಮಲಗುವ ಕೋಣೆಗೆ ಹೋದನು.

ರಮೇಶನೂ ದೀಪ ಆರಿಸಿ ಮಲಗಿಕೊಂಡನು. ಆತನಿಗೆ ಬಹಳ ದಿನಗಳಿಂದ ತನ್ನ ತಲೆಯ ಮೇಲಿದ್ದ ಒಂದು ದೊಡ್ಡ ಹೊರೆ ಇಳಿದಂತಾಗಿತ್ತು.

ಬಹಳ ದಿನಗಳಿಂದ ಇಂಥದೊಂದು ದಿನ ಬರುವ ಅಂಜಿಕೆ ಅವನನ್ನು ಬಾಧಿಸುತ್ತಿತ್ತು. ಅದು ಇಷ್ಟು ಸುಖವಾಗಿ ಕೊನೆಗೊಂಡುದಕ್ಕೆ ಅವನಿಗೆ ತುಂಬ ಸಮಾಧಾನವಾಗಿತ್ತು. ಆದರೂ ನಿದ್ದೆ ಬರುವ ವರೆಗೆ ಕಿರಣಳ ತುಂಬಿದ ತೇಜಸ್ವೀ ಮೋರೆ ಕಣ್ಣೆದುರು ತಟ್ಟನೆ ಬಂದು 'ಹುಚ್ಚ' ಎಂದು ಅಣಕಿಸುತ್ತಿರುವಂತೆ ತೋರುತ್ತಿತ್ತು. ಅವಳೊಡನೆ ಕಳೆದ ಈ ಕೆಲ ತಿಂಗಳು ಕಡೆಯ ದಿನಗಳವರೆಗೆ ಒಂದು ಮಧುರ ಸ್ವಪ್ನವಾಗಿ ಇರುವದು ಎಂದುಕೊಂಡನು. 'ಹೀಗೆ ಆಗಲೇ ಬೇಕಾಗಿತ್ತಲ್ಲ' ಎಂದು ಸಮಾಧಾನ ಹಚ್ಚಿಕೊಂಡು ರಮೇಶ ನಿದ್ದೆಗೊಳಗಾದನು.

ಆ ರಾತ್ರಿ ತಾನು – ಕಿರಣ ಇಬ್ಬರೂ ಮುಂಬಯಿಯಿಂದ ಓಡಿಬಿಟ್ಟು ಹಿಂದೂಮಹಾಸಾಗರದ ಅನಂತ ಜಲರಾಶಿಯ ಮೇಲೆ ಸಣ್ಣದೊಂದು ನಾವೆಯಲ್ಲಿ ಕುಳಿತು 'ಸಮಾಜ ಜೀವನಕ್ಕೆ ಧರ್ಮದ ಕಟ್ಟು ಅವಶ್ಯವೋ ಅನವಶ್ಯವೋ' ಎಂದು ವಾದಿಸುತ್ತಿರುವಂತೆ ರಮೇಶ ಕನಸು ಕಾಣತೊಡಗಿದ್ದನು !

## ೨೬

ತನಗೆ ಬೇಕಾದ 'ಕಾರಣ'ವನ್ನು ಹುಡುಕಲು ರಮೇಶನಿಗೆ ಬಹಳ ದಿನ ಹಿಡಿಯಲಿಲ್ಲ.

ಮೇಲಿನ ಸಂಗತಿಯಾಗಿ ಹದಿನೈದು ದಿನಗಳಾಗಿದ್ದವು. ಒಂದು ರಾತ್ರಿ ರಮೇಶ – ಲಾಲಾ ಇಬ್ಬರೂ ಅದೆಲ್ಲಿಗೋ ಹೋಗಿದ್ದವರು ಮನೆಯ ಮೆಟ್ಟಲು ಹತ್ತುತ್ತಿರುವಾಗ ಇವರಿಗಾಗಿಯೇ ದಾರಿ ಕಾಯುತ್ತಿರುವಂತೆ ಬಾಗಿಲಲ್ಲಿ ನಿಂತಿದ್ದ ಗಿರಿಜಾ ತಾಯಿ ಕೇಳಿದಳು.

"ನಾನಾ ಏನೇನೋ ಹೇಳುತ್ತಿದ್ದನಲ್ಲ, ಶೇಖರ?"

"ಏನವ್ವ?"

"ರಮೇಶ ಕೆಲಸ ಬಿಡುವದಾಗಿ ನೋಟೀಸು ಕೊಟ್ಟು ಆಗಲೇ ಎಂಟ್ಹತ್ತು ದಿನಗಳಾದವಂತೆ. ಇದೇನು ಕಿಡಿಗೇಡಿತನ ನಡೆಸಿದ್ದೀರಪ್ಪ?"

"ಕಿಡಿಗೇಡಿತನವಲ್ಲ, ಆಯಿ. ನಾಳೆಯ ಗುರುವಾರ ರಮೇಶ ಕೆಲಸ ಬಿಡುತ್ತಾನೆ."

ದನಿಯನ್ನು ಸ್ಥಿರವಾಗಿಸಲೆತ್ನಿಸುತ್ತ ಲಾಲಾ ನುಡಿದನು.

"ಏನಂತೀಯೋ? ಯಾರಾದರೂ ಸುಳ್ಳು ಅಪವಾದ ಹಾಕಿದರಂತ ಕೆಲಸ ಬಿಡುತ್ತಾನೆಯೇ?"

ಗಿರಿಜಾ ತಾಯಿ ಅಪರೂಪವಾಗಿ ಕೋಪಗೊಂಡಿದ್ದರು.

"ಸುಳ್ಳು ಅಪವಾದವಲ್ಲ, ಕಾಕಿ. ಮುಖ್ಯ ನನ್ನ ಹಣೆಯ ಬರೆಹ."

ಲಾಲಾನಿಂದ ಇನ್ನು ಮಾತಾಡಲಾಗುವದಿಲ್ಲವೆಂಬುದನ್ನು ಕಂಡು ಕೊಂಡು ರಮೇಶನೇ ಹೇಳಿದನು,

"ದುರಾಶೆಗೆ ಬಿದ್ದು ಕೆಟ್ಟ ಗಳಿಗೆಯಲ್ಲಿ ಏನೋ ಮಾಡಿಬಿಟ್ಟೆ."

"ಏನಾಯಿತು ಹೇಳಾದರೂ ಹೇಳಿರಲ್ಲ. ಫ್ಯಾಕ್ಟರೀಲಿ ಎಲ್ಲಾ ಸುದ್ದಿ ಯಾಗಿದೆಯಂತೆ. ಆ ರತನ ಮಲಿಕ್ಕನ ಡಿವ್ಹಿಡೆಂಡ್ಸ್ ಲೆಕ್ಕ ಮಾಡುವಾಗ ೫,೦೦೦ ರೂಪಾಯಿ ಕಡಿಮೆ ಹಚ್ಚಿ ನೀನು ಎತ್ತಿಹಾಕಿದೆಯಂತೆ! ಹೀಗೆಲ್ಲ ಸುಮ್ಮನೇ ಇದ್ದರೆ ಈ ಕೇಡಿ ಜನ ಬೇಕಾದ್ದು ಹೇಳುತ್ತಾರೆ ರಮೇಶ. ಅವನಿಗೆ ತನ್ನದಾರಿ ನೋಡ ಹೇಳು. ನಮ್ಮ ಕಂಪನೀಲಿ ಅವನ ಪಾಲುದಾರಿಕೇನೂ ಬೇಕಾಗಿಲ್ಲ. ಹತ್ತು ಸಾವಿರ ರೂಪಾಯಿ ಲುಕ್ಸಾನಾದರೂ ಚಿಂತಿಲ್ಲ. ಅವನನ್ನು ಬಿಡಿಸಿಬಿಡಿರಿ. ಎಷ್ಟು ನಾಚಿಕೆಗೇಡು!"

"ಬಹಳ ಪ್ರಯತ್ನ ಮಾಡಿದೆ, ಆಯಿ."

ರಮೇಶನ ಮೋರೆ ನೋಡುತ್ತ ಲಾಲಾ ನುಡಿದನು.

"ಆದರೆ ಮಲಿಕ್ ಈಗಾಗಲೇ ತನ್ನ ವಕೀಲರಿಂದ ನೋಟೀಸನ್ನೂ ಕೊಡಿಸಿಬಿಟ್ಟದಾನೆ. ಕೋರ್ಟಿಗೆ ಹೋಗದೆ ಬಿಡುವದಿಲ್ಲಂತೆ. ತನ್ನ ಶೇರು ಗಳಿದ್ದ ಕಂಪನೀಲಿ ರಮೇಶನಂತ ಅಪ್ರಾಮಾಣಿಕ ಮನುಷ್ಯನಿರುವದೇ ಬೇಡ ಅನ್ನುತ್ತ ಹಠ ಹಿಡಿದಿದ್ದಾನೆ."

"ಅಪ್ರಾಮಾಣಿಕ! ರಮೇಶ ೫,೦೦೦ ರೂಪಾಯಿ ತಿಂದ ಎಂದು ನೀನೇನೂ ಹೇಳುವದಿಲ್ಲವಲ್ಲ?"

"ಏನೋ ಕೆಟ್ಟ ಬುದ್ಧಿ ಬಂತು, ಕಾಕೀ. ನನಗೂ ಹಣದ ಅವಶ್ಯಕತೆ ಯಿತ್ತು...."

"ಏನನ್ನುತ್ತಿ ರಮೇಶ? ನಿಜವಾಗಿಯೂ ಐದು ಸಾವಿರಾನ ತಿಂದುಬಿಟ್ಟೆ ಅನ್ನುತ್ತೀಯೇನು!"

ರಮೇಶ ಮಾತಾಡಲಿಲ್ಲ. ತಲೆ ಕೆಳಗೆ ಹಾಕಿದನು ಮಾತ್ರ.

"ಇದೇನು ಮಾಡಿದೆ, ರಮೇಶ? ನಿನಗೇನು ಕಡಿಮೆಯಾಗಿತ್ತು? ಕೇಳಿದ್ದರೆ ಲಾಲಾ ಕೊಡುತ್ತಿರಲಿಲ್ಲವೆ. ನಿನ್ನ ಸಂಬಳ ಸಾಲದೆಂದಿದ್ದರೂ

ಹೆಚ್ಚಿಸುತ್ತಿರಲಿಲ್ಲವೆ? ಮೇಲಾಗಿ ಪೆಟ್ಟಿಗೆಯ ಕೀಲಿಯೂ, ಚೆಕ್ ಪುಸ್ತಕವೂ ನಿನ್ನಲ್ಲಿಯೇ ಇರುತ್ತಿತ್ತಲ್ಲ? ನಮ್ಮ ಮುಂದೆ ಒಳ್ಳೇ ಪ್ರಾಮಾಣಿಕನಾಗುವದಕ್ಕಾಗಿ ಇನ್ನೊಬ್ಬರ ಲೆಕ್ಕ ತಪ್ಪಿಸಿ ಕಂಪನಿಗೇ ಮಸಿ ಹಚ್ಚುವಂತೆ ಮಾಡಿದೆ. ನೀನು ಮಾಡುವದಲ್ಲ ರಮೇಶ ಇದು."

ಕೋಪ, ತಿರಸ್ಕಾರ ತುಂಬಿದ ದೃಷ್ಟಿಯಿಂದ ಒಮ್ಮೆ ರಮೇಶನನ್ನು ನೋಡಿ ಗಿರಿಜಾ ತಾಯಿ ಅಲ್ಲಿ ನಿಲ್ಲದೆ ಒಳಗೆ ನಡೆದುಬಿಟ್ಟಳು. ಏನನ್ನೋ ನುಡಿಯಲಿದ್ದ ಲಾಲಾನನ್ನು ನಿರ್ಲಕ್ಷಿಸಿ ರಮೇಶನೂ ತನ್ನ ಖೋಲಿಗೆ ಹೋಗಿ ಬಾಗಿಲಿಕ್ಕಿಕೊಂಡುಬಿಟ್ಟನು.

ಮತ್ತೆರಡು ದಿನಗಳ ನಂತರ ಬುಧವಾರ ಮಧ್ಯಾಹ್ನ ರಮೇಶ ತನ್ನ ಖೋಲಿಯಲ್ಲಿ ಕಂಪನಿಯ ಕಾಗದ ಪತ್ರಗಳನ್ನೆಲ್ಲ ಹರಡಿಕೊಂಡು ಆಯವ್ಯಯಗಳ ಲೆಕ್ಕ ಬರೆಯುವದರಲ್ಲಿ ತಲೆ ಚಿಟ್ಟುಹಿಡಿದು ಕುಳಿತಿದ್ದನು. ಹೋಗುವ ಮೊದಲು ಕಂಪನಿಯ ವ್ಯವಹಾರಗಳ ರೂಪರೇಷೆ ಸಿದ್ಧಮಾಡಿ ಲಾಲಾನಿಗೆ ಒಪ್ಪಿಸಬೇಕಾಗಿತ್ತು. ಬೆಳಗಿನಿಂದ ಲೆಕ್ಕ ಪತ್ರಗಳನ್ನೆಲ್ಲ ಒಂದಕ್ಕೊಂದು ಸರಿಪಡಿಸುತ್ತ ಊಟದ ವೇಳೆಯಲ್ಲಷ್ಟೆ ಕುಳಿತಲ್ಲಿಂದ ಎದ್ದು ಒಳಗೆ ಹೋಗಿ ಬಂದಿದ್ದನು. ಅದೂ ಮೌನವಾಗಿಯೇ ಮುಗಿದಿತ್ತು.

ಆ ದಿನದ ನಂತರ ಗಿರಿಜಾ ತಾಯಿ ರಮೇಶನೊಡನೆ ಒಂದು ಶಬ್ದವನ್ನೂ ನುಡಿದಿರಲಿಲ್ಲ. ಆಕೆಯ ಹೃದಯಕ್ಕೆ ಒಂದು ದೊಡ್ಡ ಆಘಾತವಾಗಿತ್ತು.

ಹಿಂದಿನ ನಾಲ್ಕಾರು ದಿನ ಅಹಮ್ಮದಾಬಾದಕ್ಕೆ ಹೋಗಿದ್ದ ಕಿರಣ ಆ ದಿನವೇ ಮುಂಬಯಿಗೆ ಬಂದಿದ್ದಳು. ರಮೇಶನ ಭವಿಷ್ಯದ ಈ ಯಾವ ಬದಲಾವಣೆಯೂ ಆಕೆಗೆ ತಿಳಿದಿರಲಿಲ್ಲ. ಆಫೀಸಿಗೆ ಫೋನುಮಾಡಿ ರಮೇಶ ಈ ದಿನವೆಲ್ಲ ಮನೆಯಲ್ಲಿಯೇ ಇದ್ದಾನೆಂದು ತಿಳಿದುಕೊಂಡು ಮೈಯಲ್ಲಿ ನೆಟ್ಟಗಿರಲಿಕ್ಕಿಲ್ಲವೆಂದು ಊಹಿಸಿ ಕಾಲೇಜು ತಪ್ಪಿಸಿ ಆ ಮಧ್ಯಾಹ್ನವೇ ಲಾಲಾನ ಮನೆಗೆ ಬಂದಳು.

ರಮೇಶನ ಖೋಲಿಯ ಬಾಗಿಲು ತೆರೆದೇ ಇತ್ತು. ಕಿರಣ ಬಾಗಿಲಲ್ಲಿಯೇ ನಿಂತು ಒಂದೆರಡು ನಿಮಿಷ ಆತನು ಅತ್ತ ನೋಡಬಹುದೆಂದು ನಿರೀಕ್ಷಿಸಿದಳು. ನಿರೀಕ್ಷೆ ಫಲಿಸಲಿಲ್ಲ.

" ಎಂಟೊಂಬತ್ತಲೆ ಎಪ್ಪತ್ತುಮೂರು "

ಕಿರಣ ಒಳಗೆ ಬಂದು ಮೇಜಿನ ಮೇಲೆ ಮೊಳಕೈ ಊರಿ ಲೆಕ್ಕದ ಪುಸ್ತಕ ನೋಡುತ್ತ ನಗುತ್ತ ನುಡಿದಳು.

" ಹಂ, ಹಾಗೆಯೇ ಏನೋ ಆಗಿದೆ. ಈಗ ಮಾತಾಡಿ ತಪ್ಪಿಸಬೇಡಿರಿ. ಏಕೋ ಲೆಕ್ಕ ಕೂಡದಾಗಿದೆ."

" ಇಷ್ಟೇ ತಾನೆ? ಏನೋ ಅಂತಿದ್ದೆ. ಅದಕ್ಕೆ ಒಂದೇ ಉಪಾಯ. ಹಾಯಾಗಿ ಲಿಬರ್ಟಿಗೆ ಹೋಗಿ ಬರೋಣ. ಏಅರ್ ಕನ್ಡಿಶನ್ಡ್ ಬಾಲ್ಕನೀಲಿ ತಲೆ ತಂಪಾಗುತ್ತದೆ. ಈಗ ಸರಿಯಾಗಿ ಮೂರಾಯಿತು."

" ಕ್ಷಮಿಸಿ, ಒಳಗೆ ಲಾಲಾ ಇರಬೇಕು. ಕೇಳಿದರೆ ಸಂತೋಷದಿಂದ ಬರುತ್ತಾರೆ "

" ಅವರನ್ನು ಕೇಳ ಬೇಕಾಗಿದ್ದರೆ ನೀವು ಹೇಳಬೇಕಾಗಿಲ್ಲ. ಯಾವಾಗ ನೋಡಿದರೂ ಲಾಲಾ, ಲಾಲಾ."

" ನಿಮಗೇಕೆ ಲಾಲಾನ ಮೇಲೆ ಇಷ್ಟು ದ್ವೇಷ? ಅವರೂ ನಿಮ್ಮ ಮಿತ್ರರಲ್ಲವೆ? ಅವರೂ ಸಭ್ಯ ಗೃಹಸ್ಥರಲ್ಲವೆ? ನಿಮ್ಮ ಮಿತ್ರನಂತಲ್ಲವಾದರೆ ನನಗೆ ತೀರ ಬೇಕಾದವರು ಎಂದಾದರೂ ಕಾಣಬಹುದಲ್ಲ? ನಿಮ್ಮ ಸಾಧಾರಣ ಸ್ನೇಹಕ್ಕೂ ಅವರು ಅಯೋಗ್ಯರೆ? ಹಗಲೆಲ್ಲ ನನ್ನ ಸುತ್ತೇಕೆ ಗಂಟು ಬೀಳುತ್ತೀರಿ?"

ಲೆಕ್ಕದಲ್ಲಿ ತಲೆಕೆಡಿಸಿಕೊಂಡಿದ್ದ ರಮೇಶ ಅಷ್ಟನ್ನೂ ಒಂದೇ ಉಸಿರಿನಲ್ಲಿ ಹೇಳಿಬಿಟ್ಟನು. ಬಹಳ ದಿನಗಳಿಂದ ಹೊತ್ತತೊಡಗಿದ್ದ ಕಿಡಿ ಒಮ್ಮೆಲೆ ಉರಿದಂತಾಗಿತ್ತು.

ಕಿರಣ ಅರ್ಥವಾಗದವರಂತೆ, ತನ್ನ ಕಿವಿಯನ್ನು ತಾನೇ ನಂಬಲಾರದವರಂತೆ ಒಂದುಕ್ಷಣ ರಮೇಶನನ್ನೇ ನೋಡಿದಳು.

" ನಾನು ತೀರ ಅವೇಳೆಯಲ್ಲಿ ಪ್ರವೇಶಿಸಿದಂತಿದೆ"

ಎಂದು ಇಂಗ್ಲೀಷಿನಲ್ಲಿ ಹೇಳಿ ತಿರುಗುವದರಲ್ಲಿದ್ದಳು. ಅಷ್ಟರಲ್ಲಿ,

" ಓಹೋ, ಯಾವಾಗ ಬಂದಿರಿ?"

ಎನ್ನುತ್ತ ಲಾಲಾ ಒಳಗೆ ಬಂದನು.

" ಇದೇ ಈಗ ಬಂದೆ. ನಿಮ್ಮ ಮ್ಯಾನೇಜರರು ಎಂಟೊಂಬತ್ತರ ಎಪ್ಪತ್ತು ಮೂರು ಎಂದು ಸಾಧಿಸಿಸುತ್ತಿದ್ದರು. ಎಪ್ಪತ್ತೆರಡು ಅಂದರೆ ಕೇಳುತ್ತಿರಲಿಲ್ಲ. ಏಳಿ ನಾವಂತೂ ಲಿಬರ್ಟಿಗೆ ಹೋಗಿ ಬರೋಣ."

ಹೋಗುತ್ತಿದ್ದ ಕಾರಿನ ವೇಗಕ್ಕೆ ಮೇಲಕ್ಕೆ ಹಾರಿದ್ದ ಒಂದು ಕಾಗದದ ಚೂರನ್ನೇ ನಿಟ್ಟಿಸುತ್ತ ರಮೇಶ ಕುಳಿತಿದ್ದನು.

## ೨೭

ಚಿತ್ರ ಮುಗಿಸಿಕೊಂಡು ಅಂದಿನ ಬ್ಯಾಡ್‌ಮಿಂಟನ್ ಆಟ ರದ್ದುಮಾಡಿ ಕಿರಣ ತಿರುಗಿ ಲಾಲಾನ ಮನೆಗೆ ಬಂದು ರಮೇಶನ ಖೋಲಿಯತ್ತ ಹೊರಳಿದಾಗ ಕಟ್ಟಿಟ್ಟಿದ್ದ ಒಂದು ಟ್ರಂಕು, ಒಂದು ಸ್ಯೂಟ್‌ಕೇಸ್, ಒಂದು ಬೆಡಿಂಗ್ ಬಿಟ್ಟು ಖೋಲಿ ಬರಿದಾಗಿತ್ತು.

"ನಿಮ್ಮ ಮ್ಯಾನೇಜರರದು ಎಲ್ಲೀದೋ ಪ್ರಯಾಣ ನಡೆದಂತೆ ಕಾಣುತ್ತಿದೆಯಲ್ಲ, ವೈನಿ ?"

ಎದುರು ಬರುತ್ತಿದ್ದ ಗಿರಿಜಾತಾಯಿಯನ್ನು ಕಿರಣ ಕೇಳಿದಳು.

"ನಿನಗಿನ್ನೂ ಹೇಳಲಿಲ್ಲವೆ? ರಮೇಶ ಹೋಗುತ್ತಾನಂತೆ, ಕಿರಣ. ನಮ್ಮ ಕೆಲಸ ಬಿಟ್ಟುಬಿಟ್ಟ."

"ಏಕೆ? ಏನಾಯಿತು ?"

"ಯಾವ ಹುತ್ತದಲ್ಲಿ ಹಾಲಾಹಲವಿರುತ್ತದೆ ಹೇಳಲಿಕ್ಕೆ ಬರುವದಿಲ್ಲವ್ವ ಈ ಕಾಲದಲ್ಲಿ. ಎಷ್ಟು ವಿಶ್ವಾಸದಿಂದ ಅವನನ್ನು ನಡೆಸಿಕೊಳ್ಳುತ್ತಿದ್ದೆವು! ನನಗಂತೂ ಶೇಖರನ ತಮ್ಮನಂತೆಯೇ ಆಗಿಬಿಟ್ಟಿದ್ದ. ಆದರೆ ದುರಾಶೆ ಎಲ್ಲೆಲ್ಲಿಗೆ ಒಯ್ಯುತ್ತದೆ ಮನುಷ್ಯನನ್ನು!"

ಎನ್ನುತ್ತ ಗಿರಿಜಾತಾಯಿ ತನಗೆ ಗೊತ್ತಿದ್ದ ಸಂಗತಿಯನ್ನೆಲ್ಲ ಹೇಳಿದಳು.

"ನನಗೆ ಗೊತ್ತು, ಕಿರಣ. ನೀನೇನು ಹೇಳುತ್ತೀ ಅಂತ. ನನಗೂ ನಂಬಲಾಗಲಿಲ್ಲ. ಆದರೆ, ಆ ದಿನ ರಮೇಶ ತಾನಾಗಿಯೇ ತಪ್ಪು ಒಪ್ಪಿಕೊಳ್ಳು

ವಾಗ ಇಷ್ಟಾಗಿದ್ದ ಅವನ ಮೋರೆ ನೋಡಿ ಮುಖ್ಯ ಅವನ ದುರದೃಷ್ಟ ಎಂದು ಕೊಂಡೆ. ಹಾಳು ದುಡ್ಡು ಎಂಥೆಂಥವರಿಂದಲೂ ಏನು ಮಾಡಿಸುತ್ತದೆ ನೋಡು, ಕಿರಣ. ಬಡವ ತನ್ನ ಬಾಳನ್ನಂತೂ ಮೂರು ಕಾಸು ಮಾಡಿಕೊಂಡ, ಸಂಗಡ ನಮ್ಮ ಮರ್ಯಾದೆಯೂ ಮೂರು ಕಾಸಾಗುವಂತೆ ಮಾಡಿದ. ಅವನನ್ನು ಕೆಲಸದಿಂದ ಬಿಡಿಸಿದರೇ ತನ್ನ ಕೇಸನ್ನು ಹಿಂದೆ ತಗೊಳ್ಳುತ್ತೇನೆ ಎಂದು ಆ ಮಲಿಕ್ ಒಪ್ಪಿದ್ದಾನಂತೆ. ಎಂಥ ನಾಚಿಕೆಗೇಡು!"

"ಈಗ ರಮೇಶ ಎಲ್ಲಿ, ವೈನಿ?"

"ಅಕ್ಕನ ಮನೆಗೆ ಹೋಗಿ ಮುಂಜಾನೆ ಬರುತ್ತೇನೆ ಎಂದು ನಾನಾನ ಹತ್ತರ ಹೇಳಿ ಹೋಗಿದ್ದಾನೆ. ಮಧ್ಯಾಹ್ನ ಹೋಗುತ್ತಾನಂತೆ"

"ಎಲ್ಲಿಗೆ?"

"ಅದನ್ನ ಲಾಲಾನಲ್ಲಿಯೂ ಹೇಳಲಿಲ್ಲಂತೆ. ಈ ನಾಚಿಕೆಗೇಡಿಯ ಸಂಗತಿ ತಗೊಂಡು ಇನ್ನೇನು ಮಾಡುತ್ತೀರಿ ಎಂದುಬಿಟ್ಟನಂತೆ. ಈಗ ಎಷ್ಟು ಹಳಹಳಿಸಿದರೆ ಏನು ಬಂತು? ಒಡೆದ ಹಾಲು ಏತಕ್ಕೆ ಬರುತ್ತದೆ? ಒಮ್ಮೊಮ್ಮೆ ನನಗೂ ಇನ್ನಿಲ್ಲದ ಕಳವಳವಾಗುತ್ತದೆ. ಮನುಷ್ಯನಿಗೆ ಹೃದಯ ಇರಬಾರದು, ಕಿರಣ."

ಕಿರಣ ಮಾತಾಡಲಿಲ್ಲ. ಕಿಟಕಿಯ ಹೊರಗೆ ಮಸುಕಾಗತೊಡಗಿದ್ದ ರಸ್ತೆಯನ್ನೇ ನೋಡುತ್ತ ನಿಂತಿದ್ದಳು.

ಆದರೆ ರಮೇಶ ಎಲ್ಲಿಗೆ ಹೋಗುವದು ಎನ್ನುವ ವಿಷಯ ಲಾಲಾ-ರಮೇಶರಲ್ಲಿ ಮೊದಲೇ ನಿಶ್ಚಿತವಾಗಿತ್ತು. ರಮೇಶನ ವಿಷಯದಲ್ಲಿ ತಾನೆಸಗುತ್ತಿದ್ದ ಅನ್ಯಾಯಕ್ಕೆ ದಂಡವೆಂದು ಲಾಲಾ, ಅಹಮದಾಬಾದಿನ ತನ್ನ ಗುರುತಿನ ಒಬ್ಬ ಮಿಲ್ ಒಡೆಯರಿಗೆ ಪತ್ರ ಬರೆದು ರಮೇಶ ಅಲ್ಲಿ ಮಿಲ್ ಅಸಿಸ್ಟಂಟ್‌ನೆಂದು ಸೇರುವಂತೆ ವ್ಯವಸ್ಥೆ ಮಾಡಿದ್ದನು. ಆದರೆ ಈ ವಿಷಯ ಅವರಿಬ್ಬರಲ್ಲಿಯೇ ಉಳಿದಿರಬೇಕೆಂದು ನಿಶ್ಚಯವಾಗಿತ್ತು.

ಮರುದಿನ ಬೆಳಿಗ್ಗೆ ರಮೇಶ ಕುರ್ಲಾದಿಂದ ಬಂದವನೇ ಮಧ್ಯಾಹ್ನ ಹೋಗದೆ ಆಗಲೇ ಹೋಗುತ್ತೇನೆ ಎಂದು ತನ್ನ ಬದಲಾದ ನಿಶ್ಚಯವನ್ನು ತಿಳಿಸಿದನು.

ತಾನು ಮುಂಬಯಿ ಬಿಡಲಿದ್ದ ಸಂಗತಿಯನ್ನು ಇಷ್ಟರೊಳಗಾಗಿ ಕೇಳಿರ ಬಹುದಾದ ಕಿರಣಳೊಡನಾಗಬಹುದಾದ ಭೆಟ್ಟಿಯನ್ನಾತ ತಪ್ಪಿಸಬೇಕಾಗಿತ್ತು.

ಕಣ್ಣಲ್ಲಿ ತುಂಬ ತೊಡಗಿದ್ದ ನೀರನ್ನು ತಡೆಯಲು ಪ್ರಯತ್ನಿಸುತ್ತಿರುವ ಗಿರಿಜಾ ತಾಯಿಗೆ ನಮಸ್ಕರಿಸಿ ರಮೇಶ ಹೊರಟುಬಿಟ್ಟನು. ಅವನನ್ನು ಟ್ಯಾಕ್ಸಿಯಲ್ಲಿ ಕೂಡ್ರಿಸುತ್ತ ಲಾಲಾ ಹೇಳಿದನು.

"ಇನ್ನೂ ವೇಳೆಯಿದೆ, ರಮೇಶ. ನನ್ನ ಮನಸ್ಸಾಗುವದಿಲ್ಲ. ನಿನ್ನ ವಿಚಾರ ಬದಲಿಸಿ ಬಿಡು."

ಉತ್ತರವಾಗಿ ರಮೇಶ ನಕ್ಕುಬಿಟ್ಟು, ಕೃತಜ್ಞತೆಯಿಂದ ಲಾಲಾನ ಕೈಯನ್ನು ಒತ್ತಿ ನಮಸ್ಕಾರಮಾಡಿ ಬಾಗಿಲು ಹಾಕಿಕೊಂಡನು.

ಟ್ಯಾಕ್ಸಿ ಸ್ಟೇಶನದತ್ತ ಹೋಯಿತು.

## ೨೮

ಕಿರಣ ಲಾಲಾನ ಮನೆಯಿಂದ ಮನೆಗೆ ಬಂದವಳು ಕಾಟಿನ ಮೇಲೆ ಬಿದ್ದುಕೊಂಡು ಮನಸ್ಸಿನಲ್ಲಿಯೇ ತಾನು ಕೇಳಿದ ಸಂಗತಿಯ ಚರ್ವಿತಚರ್ವಣ ಮಾಡತೊಡಗಿದಳು. ಅಲ್ಲಿಯ ತನಕ ಆಕೆ ಘಟನೆಯ ಅನಿಕ್ಷತೆಯ ಅಚ್ಚರಿಯಿಂದ ವಿಚಾರಿಸುವ ಸ್ಥಿತಿಗೆ ಬಂದಿದ್ದಿಲ್ಲ.

"ರಮೇಶ ಹೋಗುತ್ತಾನೆ. ಮುಂಬಯಿ ಬಿಟ್ಟು ಹೋಗುತ್ತಾನೆ. ಕಲಂಕ ಹಚ್ಚಿಕೊಂಡು ಮುಂಬಯಿ ಬಿಟ್ಟು ಎಲ್ಲಿಗೋ ಹೋಗುತ್ತಾನೆ. ರಮೇಶ! ರಮೇಶ! ಹೋಗುತ್ತಾನೆ?"

"ಹಂ, ನನಗೇಕೆ ಇಷ್ಟು ಯೋಚನೆಯಾಗಬೇಕು. ಹೋದರೆ ಹೋಗುತ್ತಾನೆ. ಲಾಲಾನ ಮ್ಯಾನೇಜರ್ ರಮೇಶ....ರಮೇಶ!"

ತನ್ನ ಮೋರೆಯೆಲ್ಲ ಬೆಂಕಿಯಿಂದ ಧಗಧಗನೆ ಉರಿಯುತ್ತಿರುವಂತೆ ಕಿರಣಳಿಗನಿಸಿತು. ಮೈತುಂಬ ನೂರು ಪಟ್ಟು ವೇಗದಿಂದ ರಕ್ತಹರಿಯುತ್ತಿರುವಂತೆನಿಸಿತು. ಎದೆ ಹೊಡೆದುಕೊಳ್ಳತೊಡಗಿತು.

"ರಮೇಶ ಹೋಗುತ್ತಾನೆ! ಕಡೆಯವರೆಗೆ ಹೋಗುತ್ತಾನೆ! ರಮೇಶ! ರಮೇಶ!....ಉಫ್, ಎಷ್ಟು ನಾಚಿಕೆಗೇಡು!"

ತನ್ನ ಮೋರೆಯನ್ನು ತಾನೇ ನೋಡಲಾರೆನೆಂಬಂತೆ ಕಿರಣ ಮೆತ್ತನೆಯ ತಲೆದಿಂಬಿನಲ್ಲಿ ಮೋರೆ ಮುಚ್ಚಿಕೊಂಡು ಬೋರಲು ಮಲಗಿಬಿಟ್ಟಳು.

ಆದರೆ ಹಾಳು ವಿಚಾರ ಮಲಗಬೇಕಲ್ಲ !

'ರಮೇಶ ! ರಮೇಶ !'

ಆ ಹೆಸರು ತನ್ನ ಅಂಗಾಂಗಗಳಿಂದ ಪ್ರತಿಧ್ವನಿಸುತ್ತಿರುವಂತೆನಿಸಿತಾಕೆಗೆ.

'ರಮೇಶ ! ನನ್ನ ರಮೇಶ ! ಹೌದು, ರಮೇಶನನ್ನು ಪ್ರೀತಿಸುತ್ತೇನೆ.'

ಏನಾಯಿತು ? ಇಶ್ಶ್ಯ, ನಾಚಿಕೆಗೇಡು.

ನಾಚಿಕೆಯೇನು ಬಂತು ಅದರಲ್ಲಿ ? ರಮೇಶನ ಕೈಹಿಡಿಯುವ ಭಾಗ್ಯ ನನ್ನದಾಗುವದಾದರೆ ನಾಚಿಕೆ ಏಕಾಗಬೇಕು ?

ರಮೇಶ ನನ್ನವ, ನನ್ನವ, ಸಾವಿರ ಸಾರೆ ನನ್ನವ.

'ಆದರೆ – ರಮೇಶ ?'

ಕಿರಣಳ ವಿಚಾರವಷ್ಟೇ ಅಲ್ಲ, ಹೃದಯವೂ ತಟ್ಟನೆ ನಿಂತಂತಾಯಿತು. ರಮೇಶ ಮಧ್ಯಾಹ್ನ ಹೇಳಿದ ಮಾತು ನೆನಪಾಯಿತು.

"ಲಾಲಾನನ್ನೇಕೆ ದ್ವೇಷಿಸುತ್ತೀರಿ ? ನನ್ನ ಸುತ್ತೇಕೆ ಗಂಟು ಬೀಳುತ್ತೀರಿ ?"

'ಎಂಥ ಮಾತು ! ಅಷ್ಟನ್ನು ಕೇಳಿಯೂ ನನಗೆ ಸಿಟ್ಟು ಬಂದಿರಲಿಲ್ಲ ! ರಮೇಶನ ಮೇಲೆ ನನಗೆ ಯಾವಾಗಲೂ ಸಿಟ್ಟು ಬರುತ್ತಿರಲಿಲ್ಲ. ಉಫ್, ಅವನಿಂದ ಏನೇನು ಹೇಳಿಸಿಕೊಂಡಿಲ್ಲ ! ಹೇಳಲಿಲ್ಲ ! ಆದರೂ ಅವನಿಗಾಗಿ ಯಾವಾಗಲೂ ಹಾರೈಸುತ್ತಿದ್ದೆ ! ನಾಚಿಕೆಗೇಡಿಯಂತೆ ನನಗೆ ಬೇಕಾದಲ್ಲಿ ಬೇಕಾದಾಗ ಕರೆಯುತ್ತಿದ್ದೆ ! ಅವನಿಗೆ ಏನೆನಿಸುತ್ತಿತ್ತೊ.'

"ನನ್ನ ಸುತ್ತೇಕೆ ಗಂಟುಬೀಳುತ್ತೀರಿ !"

ಕಿರಣಳಿಗೆ ತನ್ನ ಹೃದಯವನ್ನು ಯಾರೋ ಹಿಂಡಿ ಬಿಟ್ಟಂತಾಯಿತು.

'ಆ ದನಿಯಲ್ಲಿ ಎಷ್ಟು ತಿರಸ್ಕಾರ ತುಂಬಿತ್ತು ! ಹಾಗಾದರೆ.... ? ಹಾಗಾದರೆ.... ? ರಮೇಶನಿಗೆ ನಾನು ಬೇಕಾಗಿಲ್ಲ !'

ಕಿರಣ ತಟ್ಟನೆ ಹಾಸಿಗೆಯಿಂದ ಹಾರಿ ಫೋನಿನತ್ತ ಓಡಿ ರಿಸಿವ್ಹರ್ ಎತ್ತಿ ಕೊಂಡಳು. ಆದರೆ ಆತ ಅಕ್ಕನ ಮನೆಗೆ ಹೋದುದು ನೆನಪಾಯಿತು. ರಿಸೀವ್ಹರನ್ನು ಅಲ್ಲಿಯೇ ಚೆಲ್ಲಿ ಮತ್ತೆ ಕಾಟನ ಮೇಲೆ ಬಂದು ಬಿದ್ದುಕೊಂಡಳು.

ಆಕೆಗೆ ಅಳುವಂತಾಗಿತ್ತು, ಆದರೆ ಅಳು ಬರುತ್ತಿರಲಿಲ್ಲ. ತಲೆಯಲ್ಲಿ ಹಿಡಿಸಲಾರದಷ್ಟು ವಿಚಾರ ರಾಶಿಗಳು ಬಂದು ಕಾಡತೊಡಗಿದ್ದವು.

'ರಮೇಶನಿಗೆ ನಾನು ಬೇಡವಾಗಿತ್ತೆ? ಅದಕ್ಕಾಗಿಯೇ ಮುಂಬಯಿ ಬಿಟ್ಟು ಹೋಗುತ್ತಿರಬಹುದೆ? ಹಣವಂತರು ಎಂದಕೂಡಲೆ ಎಷ್ಟು ದ್ವೇಷಿಸು ತ್ತಿದ್ದನು!

ತಾನು ಲಕ್ಷಾಧೀಶರ ಮಗಳು, ಅವನು ಒಂದು ಕಂಪನೀಲಿ ಮುನ್ನೂರೈವತ್ತು ರೂಪಾಯಿ ಪಗಾರಿನ ಮ್ಯಾನೇಜರ! ಹುಚ್ಚು ರಮೇಶ. ಇಷ್ಟು ದಿನ ನನ್ನೊಡನಿದ್ದರೂ ನನ್ನ ಸ್ವಭಾವವನ್ನರಿಯದೆ ಹೋದನು.

ತೀರ ಹುಚ್ಚು.

ಅವನ ಮುಂದೆ ನಾನು ಲಕ್ಷಾಧೀಶರ ಮಗಳು ಎಂದು ಒಂದು ದಿನವೂ ತೋರಿಸಿಕೊಂಡಿರಲಿಲ್ಲವಲ್ಲ? ಆದರೂ ತಿಳಿದುಕೊಳ್ಳಲಿಲ್ಲ. ಸಿರಿವಂತರ ಮೇಲಿನ ತನ್ನ ದ್ವೇಷವನ್ನು ಮಾತ್ರ ಹಾಗೆಯೇ ಉಳಿಸಿಕೊಂಡುಬಿಟ್ಟನು.

"ನನ್ನ ಸುತ್ತೇಕೆ ಗಂಟುಬೀಳುತ್ತೀರಿ!"

ಹುಚ್ಚ, ತೀರ ಹುಚ್ಚ.

ನಾಳೆ ಹೀಗೆಯೇ ಹೇಳುತ್ತೇನೆ.

ಅವನ ಕೊರಳು ಸುತ್ತಿ, ಕಣ್ಣಲ್ಲಿ ಕಣ್ಣಿಡುತ್ತ 'ನೀನು ಹುಚ್ಚ' ಎಂದು ಬಿಡುತ್ತೇನೆ.

ಅವನು ಎಲ್ಲಾ ತಿಳಿದುಕೊಳ್ಳಬೇಕು....

ಥುತ್, ಎಷ್ಟು ನಾಚಿಕೆಗೇಡು!

ಆದರಾಯಿತು. ಅವನಲ್ಲಿಯೂ ನಾಚಿಕೆಪಟ್ಟುಕೊಳ್ಳುತ್ತಾರೆಯೆ? ಅವನನ್ನು ಪೂರ್ಣ ನನ್ನವನಾಗಿಸುತ್ತೇನೆ. ಅವನ ಯೋಗ್ಯತೆ ಮುಂಬಯಿ ಯಲ್ಲಿಯೇ ಜನಜನಿತವಾಗುವಂತೆ ಮಾಡುತ್ತೇನೆ.

ಸಂಧಿ ಸಿಕ್ಕರೆ ಆತನೇನು ಮಾಡಲಿಕ್ಕಿಲ್ಲ! ನನ್ನ ರಮೇಶ....

ಆದರೆ....ರಮೇಶ ಹೋಗುತ್ತಾನೆ!

ಕ್ಷುಲ್ಲಕ ಐದು ಸಾವಿರ ರೂಪಾಯಿ ತಿಂದ ಎನ್ನಿಸಿಕೊಂಡು ರಮೇಶ ನಾಳೆ ಮುಂಬಯಿ ಬಿಡುತ್ತಾನೆ!

ರಮೇಶ ಮೋಸದಿಂದ ಹಣ ತಿಂದುಬಿಟ್ಟ!

ಹಣವಂತರನ್ನು ದ್ವೇಷಿಸುತ್ತಿದ್ದವನು ಹಣ ತಿಂದುಬಿಟ್ಟ!

ಊರಲ್ಲಿ ಒಂದು ಮನೆ ಕಟ್ಟಿಸಬೇಕು ಎಂದು ಮೊನ್ನೆ ಮೊನ್ನೆ ಹೇಳುತ್ತಿದ್ದನಲ್ಲ. ಹಾಗಾದರೆ....? ಹಾಗಾದರೆ....?'

ಕಿರಣ ಮುಂದೆ ಯೋಚಿಸಲಾರದೆ ಮೆತ್ತಗಿನ ಉಣ್ಣೆಯ ಚಾದರದಲ್ಲಿ ಮೋರೆ ಮುಚ್ಚಿಕೊಂಡು ವಿಚಾರರಾಶಿಯನ್ನೆಲ್ಲ ಅದರಲ್ಲಿ ಹುದುಗಿ ಬಿಡುವಂತೆ ಮಲಗಿಬಿಟ್ಟಳು.

ಅದೆಷ್ಟರಮಟ್ಟಿಗೆ ಶಕ್ಯವಾಯಿತೋ. ಆದರೆ ಆಕೆಗೆ ನಿದ್ದೆ ಬಂದಾಗ ಮಾತ್ರ ಮುಂಗೈಯಲ್ಲಿ ಇನ್ನೂ ಹಾಗೆಯೇ ಉಳಿದಿದ್ದ ರೋಲೆಕ್ಸ್ ವಾಚಿನಲ್ಲಿ ನಾಲ್ಕು ಹೊಡೆದಿದ್ದಿತೆಂಬುದು ಕಪಾಟಿನ ಸಂದಿನಿಂದ ಇಣಕಿ ನೋಡುತ್ತಿದ್ದ ಒಂದು ಪುಟ್ಟಲಿಗೆ ಮಾತ್ರ ತಿಳಿದಿತ್ತು.

## ೨೯

ಕಿರಣ ಎದ್ದಾಗ ಎಂಟೂವರೆ ಘಂಟೆಯಾಗಿತ್ತು.

ಬೆಳಿಗ್ಗೆ ರಮೇಶನೊಡನೆ ಮಾತಾಡಬೇಕು ಎನ್ನುವದನ್ನು ಬಿಟ್ಟು ಮತ್ತಾವ ನಿಶ್ಚಯಕ್ಕೂ ಆಕೆ ಬಂದಿರಲಿಲ್ಲ. ಮಲಗಿದಲ್ಲಿಂದಲೇ ಚಹ ತರಿಸಿ ಕೊಂಡು ಕುಡಿದು ಆಚೆಯ ಕೋಣೆಗೆ ಹೋಗಿ ಟೆಲಿಫೋನ್ ರಿಸೀವ್ಹರ್ ಎತ್ತಿ ಕೊಂಡು ಲಾಲಾನ ನಂಬರು ಹೇಳಿದಳು. ಆಚೆಯ ತುದಿಯಿಂದ ನಾನಾನ ಮಾತು ಕೇಳಿಸಿತು.

"ರಮೇಶ ಮುಂಬಯಿ ಬಿಟ್ಟು ಆಗಲೇ ಒಂದು ತಾಸಾಯಿತು. ಲಾಲಾ ಅವರನ್ನು ಕಳಿಸಿದವರು ಎಲ್ಲಿಯೋ ಹೋಗಿಬಿಟ್ಟಿದ್ದಾರೆ. ಗಿರಿಜಾತಾಯಿ ಇದ್ದಾರೆ. ಬರಹೇಳಲೆ ?....

"ಇಲ್ಲ, ಎಲ್ಲಿಗೆ ಹೋಗುತ್ತೇನೆಂದು ಯಾರೊಡನೆಯೂ ಹೇಳಲಿಲ್ಲ. ಹೋಗಿ ಪತ್ರ ಬರೆಯುತ್ತೇನೆ ಎಂದಿದಾರೆ."

ಕಿರಣ ರಿಸೀವ್ಹರ್ ಕೆಳಗಿಟ್ಟುಬಿಟ್ಟು ಅದನ್ನೇ ನಿಟ್ಟಿಸಿ ನೋಡುತ್ತ ಗೋಡೆ ಗೊರಗಿ ನಿಂತುಬಿಟ್ಟಳು. ಆಕೆಯ ಬುದ್ಧಿ ವಿಚಾರ ಮಾಡಲೂ ಒಲ್ಲೆ ಎನ್ನುವಷ್ಟು ಶೂನ್ಯವಾಗಿತ್ತು.

ಅದೆಷ್ಟು ಹೊತ್ತು ಹಾಗೆಯೇ ನಿಂತಿದ್ದಳೋ.

"ಹೀಗೇಕೆ ನಿಂತಿದ್ದಿ, ಕಿರಣ ? ಈವತ್ತು ಕಲ್ಯಾಣಕ್ಕೆ ಹೋಗುವ ಎಂದಿದ್ದೆಯಲ್ಲ. ಈಗ ಮಾತ್ರ ಎದ್ದೆಯಂತೆ"

ಎನ್ನುತ್ತ ಒಳಗೆ ಬರುತ್ತಿದ್ದ ಕಿರಣಳ ಅಣ್ಣ ಆಕೆಯನ್ನು ನೋಡಿ ಗಾಬರಿಯಾಗಿ ಕೇಳಿದರು,

"ಏನಾಯಿತು ಕಿರಣ. ಮೋರೆ ಏಕೆ ಹೀಗೆ ಬಿಳಚಿಕೊಂಡಿದೆ ?"

"ಏನಿಲ್ಲಣ್ಣ. ರಾತ್ರಿ ಬಹಳ ಹೊತ್ತು ನಿದ್ದೆ ಬಂದಿರಲಿಲ್ಲ. ಈವತ್ತು ಎಲ್ಲಿಗೂ ಬರೋದಿಲ್ಲ. ಮತ್ತೆಂದಾದರೂ ಹೋಗುವ"

ಎಂದು ನುಡಿದು ಕಿರಣ ಮತ್ತೆ ತನ್ನ ಕೋಣೆಗೆ ನಡೆದುಬಿಟ್ಟಳು.

ಸಂಜೆಗೆ ಲಾಲಾ ಕಿರಣನ ಮನೆಗೆ ಬರುವಷ್ಟರಲ್ಲಿ ಆಕೆ ಪೂರ್ಣ ಮೊದಲಿನ ಕಿರಣಳಾಗಿದ್ದಳು.

ಹುಟ್ಟಿದಂದಿನಿಂದ ಸೋಲು ಎಂಬುದನ್ನಾಕೆ ಕಂಡಿರಲಿಲ್ಲ. ಜೀವನಕ್ಕೆ ಒಂದು ಕಪ್ಪು ಬದಿ ಇರುತ್ತದೆ ಎಂಬುದನ್ನು ಕಲಿತಿರಲಿಲ್ಲ. ತನ್ನಿಚ್ಛೆಗೆ ವಿರುದ್ಧವಾಗಿ ತನ್ನ ವಿಷಯದ ಯಾವಸಂಗತಿಯೂ ಆದುದನ್ನು ಸಹಿಸಿರಲಿಲ್ಲ. ಅಷ್ಟು ಸ್ವತಂತ್ರವಾಗಿ ಸುಖವಾಗಿ ತಂದೆ ತಾಯಿಗಳ ತಲೆಯ ಹೂವಾಗಿ ಆಕೆ ಬೆಳೆದಿದ್ದಳು. ಅಂತೆಯೇ ಜಗತ್ತಿನಲ್ಲಿ ದುಃಖವೊಂದಿದೆ ಅನ್ನುವದು ಆಕೆಯ ವಿಷಯಕ್ಕಂತೂ ಅರ್ಥವಿಲ್ಲದ ಮಾತಾಗಿತ್ತು.

ಈ ಹೊತ್ತೂ ಆಕೆಗೆ ದುಃಖವಾಗಿರಲಿಲ್ಲ, ನಿರಾಶೆಯಾಗಿರಲಿಲ್ಲ.

ಇಲ್ಲಿಯವರೆಗೆ ಗೊತ್ತುಗುರಿಯಿಲ್ಲದೆ ಅಸ್ಥಿರವಾಗಿದ್ದ ಮನಸ್ಸು ನಿನ್ನೆಯಿಂದ ಒಂದು ಮಟ್ಟಕ್ಕೆ ಮುಟ್ಟಿದಂತೆನಿಸಿ ಆಕೆಗೆ ವಿಲಕ್ಷಣ ಶಾಂತಿ ಉಂಟಾಗಿತ್ತು. ಆಕೆಯ ಜೀವನಕ್ಕೂ ಒಂದು ಗುರಿ ಸಿಕ್ಕಂತಾಗಿತ್ತು.

ಆಕೆ ರಮೇಶನನ್ನು ಪಡೆದಿದ್ದಳು.

ಅವನು ಆಕೆಯನ್ನು ಬಿಟ್ಟು ಹೋಗಿದ್ದನು, ನಿಜ. ಆದರೆ ಅಷ್ಟರಿಂದಾಗಿ ಅಲುಗಾಡುವಷ್ಟು ಕಿರಣಳ ಆತ್ಮವಿಶ್ವಾಸ ಅಸ್ಥಿರವಾಗಿರಲಿಲ್ಲ. ರಮೇಶ ಕಡೆಯವರೆಗೂ ತನಗೆ ಭೆಟ್ಟಿಯಾಗದೆ ಹೋದನಲ್ಲ ಎನ್ನುವದರ ಮೊದಲ ಪೆಟ್ಟು ಕಳೆದ ಮೇಲೆ ಲಾಲಾ ಬರುವಷ್ಟರಲ್ಲಿ ಆಕೆ ಪೂರ್ಣ ಮೊದಲಿನ ವ್ಯಕ್ತಿತ್ವವನ್ನೇ ಪಡೆದಿದ್ದಳು.

ಕಿರಣಳ ಆ ಶಾಂತಿಯನ್ನು ಕಂಡು ಲಾಲಾಗೂ ಬಹಳ ಸಮಾಧಾನವಾಯಿತು. ಅವನು ಅಂಜಿಕೊಂಡಿದ್ದಂತೆ ರಮೇಶನ ವಿಷಯಕ್ಕೆ ಅವಳಲ್ಲಿ

ಅಂಥ ಯಾವ ಭಾವನೆಯೂ ಇರಲಿಲ್ಲ! ಇದ್ದರೂ ರಮೇಶ ಹೇಳಿದಂತೆ ಆಕೆಗೆ ಅರಿವಿರಲಿಲ್ಲ! ನನ್ನ ತಪಸ್ಸು ಇನ್ನೂ ಫಲಿಸ ಬಹುದಲ್ಲ ಎಂದುಕೊಂಡನು.

"ನಿಮ್ಮ ಅಮೂಲ್ಯ ಮ್ಯಾನೇಜರರು ಹೇಳದೆ ಕೇಳದೆ ಓಡಿಬಿಟ್ಟರಂತೆ. ಬೆಳಿಗ್ಗೆ ಫೋನಿನಲ್ಲಿ ನಾನಾ ಹೇಳಿದನು"

ಎನ್ನುತ್ತ ಕಿರಣನೇ ಮಾತಿಗಾರಂಭಿಸಿದಳು.

ಹಗುರಾದ ಮನಸ್ಸಿನಿಂದ ಲಾಲಾನೂ ರಮೇಶನನ್ನು ಹೊಗಳುತ್ತ

"ಮುಖ್ಯ ಅವನ ಹಣೆಯ ಬರಹ"

ಎಂದು ಗೆರೆ ಹಾಕಿದನು.

ಆದಿನ ಬ್ಯಾಡ್‌ಮಿಂಟನ್ ಆಡಲು ಹೋದಾಗ ಕಿರಣನ ಕೈಯಲ್ಲಿ ದಿನದ ಅರ್ಧ ಸ್ಥಿರತೆಯೂ ಇರಲಿಲ್ಲ.

# ೩೦

ಎರಡು ತಿಂಗಳು ಸಂದಿದ್ದವು.

ಕಿರಣ ತನ್ನ ಹೃದಯದ ಗುಪಿತವನ್ನು ಯಾರೊಡನೆಯೂ ಪ್ರಕಟಿಸದೆ ಎಂದಿನಂತೆ ಕಾಲೇಜಿಗೆ ಹೋಗಿ ಬರುತ್ತಲೇ ಇದ್ದಳು.

ಆದರೆ ಒಮ್ಮೊಮ್ಮೆ ನಿರರ್ಥಕವಾಗಿ ಶೂನ್ಯವಾಗುತ್ತಿರುವ ಅವಳ ದೃಷ್ಟಿ, ಮಾತಿನ ಮಧ್ಯೆ ತಟ್ಟನೆ ಮಾತುನಿಲ್ಲಿಸಿ ಏನೋ ವಿಚಾರಿಸುತ್ತ ಕುಳಿತು ಬಿಡುವ ವಿಲಕ್ಷಣ ಸ್ವಭಾವ. ಇದೆಲ್ಲ ಆಕೆಯ ಅಣ್ಣನಿಗೆ ಚಿಂತೆಯನ್ನುಂಟು ಮಾಡಿತ್ತು.

" ಹೀಗೇಕೆ ಕಿರಣ ?"

ಶ್ರೀಪತರಾಯರು ಒಂದು ದಿನ ಕೇಳಿದರು,

" ನಿನ್ನ ಮುಖ ನೋಡಿಕೊಂಡಿದ್ದೀಯೇನು ? ಕಾಲು ಪಾಲು ಇಳಿದು ಬಿಟ್ಟದ್ದೀಯೆ. ಯಾತರ ಬಯಕೆ ಹೇಳಿಬಿಡು "

" ಹಿಮಾಲಯಕ್ಕೆ ಹೋಗಬೇಕು ಅನ್ನುವ ಆಶೆ, ಅಣ್ಣ."

ಕಿರಣ ನಗೆಯಲ್ಲಿಯೇ ಉತ್ತರವನ್ನು ತಪ್ಪಿಸುವ ಪ್ರಯತ್ನ ಮಾಡಿದ್ದಳು.

" ಆಕೆಯ ಅರಿವೆಯ ಕಪಾಟು ನೋಡಿದೀರೇನ್ರಿ ? ಎಲ್ಲ ಬುರುಸು ಹತ್ತಿ ಬಿಟ್ಟದೆ. ಏನೋ ಲವ್ ಬಿಸಿನೆಸ್ ಕಾಣುತ್ತದೆ "

ಎಂದು ಅತ್ತಿಗೆಯೂ ಚೇಷ್ಟೆ ಮಾಡಿದ್ದಳು.

" ಹೌದವ್ವ, ಹಾಗೆಯೇ ತಿಳಿದುಕೋ "

ಎಂದು ಹೇಳಿ ಕಿರಣ ತನ್ನ ಕೋಣೆಗೆ ನಡೆದುಬಿಟ್ಟದ್ದಳು.

ಲಾಲಾ ರಮೇಶನನ್ನು ಬಹಳಷ್ಟು ಮರೆಯುತ್ತ ಬಂದಿದ್ದನು. ಅವನ ಸ್ಥಳದಲ್ಲಿ ತುರ್ತ ಘೋರ್ಪಡೆಯೇ ವ್ಯವಹಾರ ನೋಡಿಕೊಳ್ಳುತ್ತಿದ್ದನು. ಆದರೆ ಲಾಲಾಗೆ ಈಗ ಮೊದಲಿನ ಉತ್ಸಾಹ ಮರೆತುಹೋಗಿತ್ತು.

ಕಿರಣ ಇದ್ದದರಲ್ಲಿ ಲಾಲಾನೊಡನೆಯೇ ಹೆಚ್ಚಿನ ಸಲಿಗೆಯಿಂದಿರುತ್ತಿದ್ದಳು. ಕಾಲೇಜಿನ ಮಿತ್ರರು ಆಕೆಗೀಗ ತೀರ ಬೇಡವಾಗಿಬಿಟ್ಟಿದ್ದರಿಂದ ಸ್ನೇಹಲತೆಯೊಡನಾಗಲಿ, ಲಾಲಾನೊಡನಾಗಲಿ ಹರಟೆ ಹೊಡೆಯುತ್ತ, ಅಡ್ಡಾಡುತ್ತ ಇರುತ್ತಿದ್ದಳು.

ಬಹಳಷ್ಟು ಸಾರೆ ಲಾಲಾ ಕಿರಣಳೊಡನಿರುವಾಗಲೆಲ್ಲ ಸ್ನೇಹಲತೆಯೂ ಸಂಗಡ ಇರುತ್ತಿದ್ದುದರ ಗುಟ್ಟು ಕಿರಣ–ಸ್ನೇಹಲತೆಯರಿಗೆ ಮಾತ್ರ ತಿಳಿದಂತಿತ್ತು.

ಲಾಲಾನಿಗೆ ಇನ್ನೂ ದಿನಕಳೆಯುವದರಲ್ಲಿ ಅರ್ಥವಿಲ್ಲ ಅನ್ನಿಸಿತು. ತನ್ನ ಭವಿಷ್ಯವನ್ನು ನಿರ್ಧರಿಸಿಬಿಡಬೇಕೆಂದು ನಿಶ್ಚಯಿಸಿಕೊಂಡನು.

ಒಂದು ದಿನ ಇಬ್ಬರೇ ಮ್ಯಾಟನಿಗೆ ಹೋಗಿ ಬಂದು ಲಾಲಾನ ಮನೆಯಲ್ಲಿ ಚಹ ಕುಡಿಯುತ್ತ ಕುಳಿತಿದ್ದರು. ಗಿರಿಜಾತಾಯಿ ಮನೆಯಲ್ಲಿರಲಿಲ್ಲ. ಚಿತ್ರದ ಕತೆಯ ಸಂಬಂಧವಾಗಿ ಸಮಾಜ, ಜನತೆ ಎಂದು ಏನೇನೋ ಮಾತು ನಡೆದಿತ್ತು.

" ಸಮಾಜಕ್ಕೂ ವ್ಯಕ್ತಿಗೂ ವೈಷಮ್ಯ ಬರಬಹುದು. ಆದರೆ ಸಮಾಜವನ್ನು ಕಟ್ಟಬೇಕು ಅನ್ನುವದೂ ವ್ಯಕ್ತಿಯಲ್ಲಿರುವ ಸಹಜ ಪ್ರವೃತ್ತಿ "

ಕಿರಣ ನುಡಿದಳು.

" ಅದಕ್ಕಿಂತಲೂ ತನ್ನ ಮನೆ, ಸಂಸಾರ, ವಂಶವನ್ನು ಕಟ್ಟಿಕೊಳ್ಳುವ ಪ್ರವೃತ್ತಿ ಮೊದಲು ಹುಟ್ಟುತ್ತದೆ. ಅದರ ನಂತರ ಸಮಾಜ ಅಲ್ಲವೆ ?"

ಕಿರಣ ಅವನ ಪ್ರಶ್ನೆಗೆ ಉತ್ತರವೀಯದೆ ತಟ್ಟನೆ ಕೇಳಿದಳು,

" ನೀವೇಕೆ ಇನ್ನೂ ಲಗ್ನವಾಗಿಲ್ಲ, ಲಾಲಾ ?"

ಲಾಲಾನ ಹೃದಯ ಕ್ಷಣಮಾತ್ರ ನಿಂತಂತಾಗಿ ಕಡೆಗೆ ಡವಡವನೆ ಹೊಡೆದುಕೊಳ್ಳತೊಡಗಿತು. ಕುಳಿತಲ್ಲಿಂದ ಎದ್ದು ಕಿರಣನ ಎದುರಿಗೆ ಬಂದು ಹೇಳಿದನು,

" ಆ ಸೌಭಾಗ್ಯವನ್ನು ನೀವು ಒದಗಿಸಿಕೊಡುತ್ತೀರಿ ಎಂದು ಆಶೆ ಕಟ್ಟಿ

ಕೊಂಡಿದ್ದೇನೆ, ಕಿರಣ. ಈ ಮನೆ ತುಂಬಿ, ನನ್ನ ಜೀವನವನ್ನು ಬೆಳಗಿಸುತ್ತೀರಿ ತಾನೆ ?"

ಕಿರಣ ತಾನೂ ಎದ್ದುನಿಂತು ಮೃದುವಾಗಿ ಲಾಲಾನ ಕೈಹಿಡಿದು ಹೇಳಿದಳು,

"ಆ ಪುಣ್ಯ ನನ್ನದಾಗಲಾರದು ಎಂದು ನಾನು ಹೇಳಿದರೆ ನೀವು ಮನಸ್ಸಿಗೆ ನೋವುಂಟು ಮಾಡಿಕೊಳ್ಳಬಾರದು, ಲಾಲಾ. ನಾವಿಬ್ಬರೂ ಒಬ್ಬರಿಗೊಬ್ಬರು ಆದವರಲ್ಲ ಎಂದು ನಾನು ಬಹಳ ಹಿಂದೆಯೇ ಕಂಡು ಕೊಂಡಿದ್ದೆ."

ಕಿರಣ ಮುಂದೆಯೂ ಏನೋ ಹೇಳುವವಳಿದ್ದಳು. ಅವಳ ನಿಟ್ಟುಸಿರು ತಡೆಯನ್ನುಂಟು ಮಾಡಿತು. ಆ ಸಂಧಿಯನ್ನು ಸಾಧಿಸಿ ಲಾಲಾ ಕಿರಣಳ ಕೈಯನ್ನು ತನ್ನೆದೆಯತ್ತ ಸೆಳೆದುಕೊಳ್ಳುತ್ತ ಹೇಳಿದನು,

"ನಿಮಗಾಗಿ ಈ ಹೃದಯ ಎಂದಿನಿಂದಲೂ ಬೇಯುತ್ತಿದೆ, ಕಿರಣ. ನಾವಿಬ್ಬರೂ ಬಹಳ ದಿನಗಳಿಂದ ಒಬ್ಬರನ್ನೊಬ್ಬರು ಅರಿತವರು. ನನ್ನನ್ನು ನಿರಾಶನನ್ನಾಗಿ ಮಾಡಿದರೆ ನನ್ನ ಹೃದಯ ಒಡೆದುಬಿಡುತ್ತದೆ. ನಿಮ್ಮ ಜೀವನವನ್ನು ಹೂವಿನಂತೆ ಸುಖವಾಗಿಸುವ ಹೊಣೆ ನನ್ನದು."

"ನಿಮ್ಮ ಭಾವನೆ ನನಗೆ ಅರ್ಥವಾಗುತ್ತದೆ, ಲಾಲಾ"

ಲಾಲಾನ ಕೈಯಲ್ಲಿ ತನ್ನ ಕೈಯನ್ನು ಹಾಗೆಯೇ ಇರಗೊಟ್ಟು ಕಿರಣ ಹೇಳಿದಳು,

"ನನ್ನ ನಿಮ್ಮ ವಿಚಾರ ದೃಷ್ಟಿಕೋನ ಎಲ್ಲ ತೀರ ಭಿನ್ನವಾಗಿದೆ ಎಂಬುದನ್ನು ಬಹುಶಃ ನೀವು ಕಂಡುಕೊಂಡಿರಲಿಕ್ಕಿಲ್ಲ. ಕುಟುಂಬ ಸುಖ ಪತಿಪತ್ನಿ ಇಬ್ಬರೂ ಸಮಪಾಲಿನಂತೆ ಒಬ್ಬರಿಗೊಬ್ಬರು ಒದಗಿಸಿಕೊಡತಕ್ಕಂಥ ವಸ್ತು. ನಿಮ್ಮನ್ನು ಲಗ್ನವಾಗಿ ಸುಖವಾಗಿಸುವದು ನನ್ನ ಕರ್ತವ್ಯ. ಆದರೆ ಯಾರೊಡನೆ ನಾನೂ ಸುಖವಾಗಿರಲಾರೆನೋ ಅವರನ್ನು ಸುಖವಾಗಿರಿಸಲೂ ಆರೆ. ನೀವು ದೊಡ್ಡ ಮನಸ್ಸು ಮಾಡಬೇಕು, ಲಾಲಾ. ನನ್ನನ್ನು ಕ್ಷಮಿಸಿ. ನಿಮ್ಮ ಸೂಚನೆ ತೀರ ಅಶಕ್ಯವೆಂದು ಮನಗಾಣದಹೊರತು ನಾನು ಇಷ್ಟು ಖಂಡಿತವಾಗಿ ಹೇಳುತ್ತಿರಲಿಲ್ಲ."

ಕಿರಣನ ಮಾತಿನಲ್ಲಿ ಮುಂದಿನ ಯಾವ ವಿನಂತಿ, ಕೇಳಿಕೆಗೂ ಆಸ್ಪದವಿಲ್ಲ ದಂಥ ಧೃಡತೆ ಇತ್ತು.

ತನಗಿಂತ ಬಹಳ ದೂರದಲ್ಲಿರುವಂತೆ, ಬಹಳ ಮೇಲಿರುವಂತೆ ತೋರ ತೊಡಗಿದ್ದ ಕಿರಣನನ್ನು ನೋಡುತ್ತ ಮಾತಾಡಲೂ ಆರದೆ, ಆಡದಿರಲೂ ಆರದೆ ಲಾಲಾ ದೈನ್ಯವಾಗಿ ಹಾಗೆಯೇ ನಿಂತಿದ್ದನು.

"ಆದರೆ ನಿಮ್ಮನ್ನು ಪೂಜಿಸುವ, ನಿಮ್ಮೊಡನೆ ಪೂರ್ಣ ಸುಖವಾಗಿದ್ದು ನಿಮ್ಮನ್ನೂ ಸುಖಿಯಾಗಿಸುವ ಜೀವಿಯೊಂದು ನಿಮಗಾಗಿ ಚಡಪಡಿಸು ತ್ತಿದ್ದಾಳೆ ಎನ್ನುವದು ನಿಮಗೆ ತಿಳಿದಿರಲಿಕ್ಕಿಲ್ಲ ಲಾಲಾ – ಸ್ನೇಹಲತೆ ನಿಮಗಾಗಿ ಕಾಯುತ್ತಿದ್ದಾಳೆ. ನೀವಿಬ್ಬರೂ ಒಂದೇ ವಿಚಾರ ವರ್ಗದವರು. ಆಕೆಯೂ ಗಣ್ಯ ಜಡ್ಜರೊಬ್ಬರ ಮಗಳು. ನೀವು ಅವರೊಡನೆ ಸುಖವಾಗಿರುತ್ತೀರಿ, ಲಾಲಾ. ಹಾಗಾಗಬೇಕೆಂದೇ ನನ್ನ ಹಾರ್ದಿಕ ಮನೀಷೆ."

"ಎಂಥ ಸಮಾಧಾನ ಮಾಡುತ್ತೀರಿ, ಕಿರಣ. ನಿಮಗಾಗಿ ನನ್ನೆದೆಯಲ್ಲಿ ಆಗುತ್ತಿದ್ದ ತಳಮಳದ ಅರಿವಿಲ್ಲ ನಿಮಗೆ."

"ಇದೆ ಎಂತಲೇ ಹೇಳುತ್ತಿದ್ದೇನೆ, ಲಾಲಾ. ಒಂದೆರಡು ದಿನ ನನ್ನನ್ನು ದೊಡ್ಡ ಮನಸ್ಸು ಮಾಡಿ ಕ್ಷಮಿಸಿರಿ. ನಂತರ ನಿಮಗೇ ನನ್ನ ಮಾತಿನ ಸತ್ಯ ತಿಳಿಯುವದು. ಸ್ನೇಹಲತೆಯ ನಿರ್ಮಲ ಸ್ನೇಹದಲ್ಲಿ ಎಲ್ಲವನ್ನೂ ಮರೆಯುತ್ತೀರಿ."

"ನಿಮ್ಮ ವಿಷಯ ಹೇಳಿ, ಕಿರಣ. ನೀವಾದರೂ ಏನು ಮಾಡ ಬೇಕೆಂದಿದ್ದೀರಿ ? ಮತ್ತಾವ ಅದೃಷ್ಟಶಾಲಿಯಾದರೂ ನಿಮ್ಮ ಜೀವನ ಸಂಗಾತಿ ಯಾಗಲಿರುವ ಸಂಗತಿ ನನಗಂತೂ ತಿಳಿದಿಲ್ಲ."

ಉತ್ತರವಾಗಿ ಕಿರಣ ಲಾಲಾನಿಂದ ಮೃದುವಾಗಿ ತನ್ನ ಕೈಬಿಡಿಸಿಕೊಂಡು ದೀರ್ಘ ನಿಶ್ವಾಸಬಿಟ್ಟಳು.

"ಯಾರು ಕಿರಣ ? ಯಾರೆಂದು ನಾನು ಕೇಳಬಾರದೆ ?"

"ಕೇಳಬಹುದಲ್ಲ. ಆದರೆ ಹೇಳುವದರಿಂದ ಏನೂ ಪ್ರಯೋಜನವಾಗು ವಂತಿಲ್ಲ. ಇಂದಿಗೆ ಅವರು ಎಲ್ಲಿದ್ದಾರೋ !"

"ಯಾರು ? ರಮೇಶ ?"

ಕಿರಣ ಮಾತಾಡಲಿಲ್ಲ. ಮೋರೆ ತಿರುವಿ ಕೋಣೆಯ ಆ ತುದಿಯಲ್ಲಿ ಏನನ್ನೋ ನಿಟ್ಟಿಸುತ್ತ ನಿಂತಿದ್ದಳು.

"ನನಗೂ ಸಂಶಯಬಂದಿತ್ತು. ಆದರೆ ಅದು ನಿಜವಾಗುತ್ತದೆ ಎಂದು ತಿಳಿದಿರಲಿಲ್ಲ. ಉಫ್, ದೈವದ ಎಂಥ ವ್ಯಂಗ್ಯ!"

ಕಿರಣ ಇನ್ನೂ ಮಾತಾಡಲಿಲ್ಲ. ಆಕೆಯ ಗುರಿಹೀನ ದೃಷ್ಟಿಗೆ ಮೂಲೆಯ ಸ್ಟೂಲಿನ ಮೇಲಿನ ಗ್ಲಾಸಿನಲ್ಲಿಟ್ಟಿದ್ದ ಹೂ ಗುಚ್ಛ ಬಿದ್ದಂತಿತ್ತು. ಲಾಲಾನೇ ಮುಂದರಿಸಿದನು.

"ಆದರೆ ರಮೇಶನಿಗೆ ಮಾತ್ರ ನಿಮ್ಮನ್ನು ಈ ಮನೆಯ ಲಕ್ಷ್ಮಿಯಾಗಿಸ ಬೇಕೆಂದು ಬಹಳ ಆಶೆಯಿತ್ತು. ಅವನ ಆಶೆ ಕೈಗೂಡಲಿಲ್ಲ."

"ನನಗೆ ಗೊತ್ತು. ನನ್ನ ಮುಂದೆಯೂ ಯಾವಾಗಲಾದರೂ ಸೂಕ್ಷ್ಮ ವಾಗಿ ಸೂಚಿಸುವ ಪ್ರಯತ್ನ ಮಾಡುತ್ತಿದ್ದರು."

"ನಿಮ್ಮನ್ನು ತನ್ನ ಅತ್ತಿಗೆಯಾಗಿಸಲಿಕ್ಕೆ ಆತ ಮಾಡಿದುದೆಲ್ಲ ನಿಮಗೆ ಗೊತ್ತಿಲ್ಲ. ಅದಕ್ಕಾಗಿ ಮುಂಬಯಿಯನ್ನೇ ಬಿಟ್ಟುಬಿಟ್ಟನು."

ಲಾಲಾ ತಟ್ಟನೆ ನಾಲಿಗೆ ಕಚ್ಚಿಕೊಂಡನು. ಹೇಳಬಾರದೆಂದುಕೊಂಡುದು ಆತನ ಬಾಯಲ್ಲಿ ಬಂದುಬಿಟ್ಟಿತ್ತು. ಕಿರಣ ಒಮ್ಮೆಲೆ ತಿರುಗಿ ಲಾಲಾನ ಎರಡೂ ಕೈಹಿಡಿದು ಕೇಳಿದಳು,

"ಏನಾಯಿತು? ಹೇಳಿ ಲಾಲಾ. ನನಗೂ ಎಲ್ಲವೂ ಆಕಸ್ಮಿಕವಾಗಿ, ಗೂಢವಾಗಿ ತೋರುತ್ತಿತ್ತು. ಹೇಳಿ, ದಯವಿಟ್ಟು ಹೇಳಿ. ಇಂದಿನಿಂದ ನೀವು ನನ್ನ ತೀರ ಹತ್ತಿರದ ಸ್ನೇಹಿತರು ಲಾಲಾ. ಇಲ್ಲಿಯವರೆಗೂ ನಮ್ಮಿಬ್ಬರಲ್ಲಿ ಒಂದು ತರದ ಬಿಗುವು ಇದ್ದಂತಿತ್ತು. ಇನ್ನು ನೀವು ನನಗೆ ತೀರ ಹತ್ತಿರದ ಆಪ್ತರು. ನೀವೂ ಹೀಗೆಯೇ ನನ್ನನ್ನೂ ಕಾಣುವಿರಾಗಿ ಆಶಿಸುತ್ತೇನೆ. ನಿಮ್ಮದು ದೊಡ್ಡ ಮನಸ್ಸು. ನಾನು ಅನುಭವಿಸುತ್ತಿದ್ದ ನೋವಿಗಾಗಿ ನಿಮ್ಮದನ್ನು ಮರೆಯ ಬಲ್ಲಿರಿ."

ಲಾಲಾನಲ್ಲಿ ವಿಲಕ್ಷಣ ಬದಲಾವಣೆಯಾಗತೊಡಗಿತ್ತು. ರಮೇಶ ಮುಂಬಯಿಯುನ್ನು ಬಿಟ್ಟು ಹೋದುದರ ಕಾರಣವನ್ನು ಪಕ್ಕನೆ ಹೇಳಿ ನಾಲಿಗೆ ಕಚ್ಚಿಕೊಂಡ ಕ್ಷಣದಿಂದ 'ಇನ್ನು ಏನು ಉಳಿದಂತಾಯಿತು? ನಾನೇಕೆ ಮುಚ್ಚಿಡಬೇಕು? ಕಿರಣಳಿಗೆ ಎಲ್ಲ ಸಂಗತಿ ತಿಳಿದಿರುವದೇ ಯೋಗ್ಯ' ಎಂದು ಕಿರಣಳ ಕಟ್ಟುನಿಟ್ಟಿನ ಸ್ವಭಾವ ಪರಿಚಯವಿದ್ದ ಲಾಲಾ, ತನ್ನ ಹೃದಯವನ್ನು ಸಾಂತ್ವನಗೊಳಿಸುತ್ತ ಒಂದು ನಿಶ್ಚಯಕ್ಕೆ ಬಂದಿದ್ದನು.

ಅವಳ ನೋವಿಗಾಗಿ ತನ್ನ ನೋವನ್ನು ಮರೆಯಬೇಕು ಎಂದು ಆಕೆ ಕೇಳಿಕೊಂಡಾಗ ಅವನ ಕಣ್ಣಲ್ಲಿ ನೀರೂರಿತ್ತು. ಆಕೆಯ ಕೈಗಳಿಂದ ತನ್ನ ಮೋರೆ ಮುಚ್ಚಿಕೊಂಡು ಕ್ಷಣಕಾಲ ಹಾಗೆಯೇ ನಿಂತಿದ್ದನು. ನಂತರ ಮಾತಾಡಿದಾಗ ಅವನ ದನಿಯಲ್ಲಿ ಪೂರ್ಣ ಶಾಂತಿ ಬಂದಿತ್ತು.

" ನಿನ್ನ ಮಾತನ್ನು ಯಾವಾಗಲೂ ನಡೆಸಿಕೊಂಡು ಬಂದಿದ್ದೆ, ಕಿರಣ. ಈಗ ಮುರಿಯುತ್ತೇನೆಯೆ ? ಇಲ್ಲಿಯವರೆಗೆ 'ನೀವು' ಅನ್ನುತ್ತಿದ್ದೆ. ಇನ್ನು ಹೇಳುವದಿಲ್ಲ. ನಿನ್ನ ಸ್ನೇಹಕ್ಕಾದರೂ ಯೋಗ್ಯನಾಗಿದ್ದೇನೆ ಎಂದೆಯಲ್ಲ. ಅದೇ ಮಹಾಭಾಗ್ಯ ಎಂದು ತಿಳಿಯುತ್ತೇನೆ"

" ರಮೇಶ ಮುಂಬಯಿ ಏಕೆ ಬಿಟ್ಟ, ಲಾಲಾ ? ಆ ಹಣದ ವಿಷಯ ಎಲ್ಲ ಸುಳ್ಳು ಅಲ್ಲವೆ ?"

ಕಿರಣಳ ಉತ್ಕಂಠೆ ತೀರ ಅಂಚಿಗೆ ಬಂದಿತ್ತು.

" ಹೌದು. ನೂರಕ್ಕೆ ನೂರು ಸುಳ್ಳು. ಮುಂಬಯಿ ಬಿಡಲಿಕ್ಕೆ ಒಂದು ನೆವ ಬೇಕೆಂದು ರತನ ಮಲಿಕ್ಕನೊಡನೆ ಮಾತಾಡಿಕೊಂಡು ಅದನ್ನೆಲ್ಲ ಅವನೇ ಹುಟ್ಟಿಸಿಕೊಂಡಿದ್ದನು. ಎಲ್ಲವೂ ನಮ್ಮಿಬ್ಬರನ್ನು ಕೂಡಿಸುವದಕ್ಕಾಗಿ "

" ಅಂದರೆ ? ಬಿಡುವದಾದರೆ ಹಾಗೆಯೇ ಬಿಡಬಹುದಾಗಿತ್ತಲ್ಲ."

" ನಿನ್ನಲ್ಲಿ ತನ್ನ ವಿಷಯಕ್ಕೆ ತಿರಸ್ಕಾರ ಹುಟ್ಟಿಸಿಕೊಳ್ಳಬೇಕಾಗಿತ್ತು ಅವನಿಗೆ. ನೀನು ಅವನನ್ನು ತೀರ ಅಯೋಗ್ಯನೆಂದು ತಿಳಿಯಬೇಕಾಗಿತ್ತು...."

" ಹಾಗಾದರೆ....!"

" ಹೌದು, ನೀನು ಅವನನ್ನು ಪ್ರೀತಿಸುತ್ತಿರುವದು ನಿನಗೂ ತಿಳಿಯುವ ಮೊದಲು ಅವನಿಗೆ ತಿಳಿದಿತ್ತು. ಜನರ ಮನಸ್ಸನ್ನು ಅರಿಯುವ ಕಲೆ ಅವನಿಗೆ ಬಹಳ ಚನ್ನಾಗಿ ಸಾಧಿಸಿದೆ."

ಕಿರಣಳಿಗೆ ಲಾಲಾನ ಮುಂದಿನ ಮಾತು ಕೇಳಿಸಲಿಲ್ಲ. ಆಕೆಯ ಕಿವಿಯಲ್ಲಿ ಒಂದೇ ಮಾತು ಪ್ರತಿಧ್ವನಿಸುತ್ತಿತ್ತು....ರಮೇಶನಿಗೆ ತನ್ನ ಹೃದಯ ತಿಳಿದಿತ್ತು !

ಆ ದಿನಗಳಲ್ಲಿ ಅವನೊಡನೆ ತಾನು ಮೈಮರೆತು ನಾಚಿಕೆಗೇಡಿಯಂತೆ ವರ್ತಿಸುತ್ತಿರುವಾಗ ರಮೇಶನಿಗೆ ತನ್ನ ಮನಸ್ಥಿತಿಯ ಪೂರ್ಣ ಪರಿಚಯ ವಾಗಿತ್ತು !

ಆದರೂ ಒಂದು ಮಾತಾಡಿರಲಿಲ್ಲ. ತಿರುಗಿ ಲಾಲಾನ ವಿಷಯ ಎತ್ತಿಕೊಂಡು ಮಾತಾಡುತ್ತಿದ್ದನು. ಲಾಲಾನ ಬಗ್ಗೆ ಜಿಗುಪ್ಸೆ ತಾಳಿದುದಕ್ಕೆ ಸಿಟ್ಟಾಗುತ್ತಿದ್ದನು! ಆಕೆಗೆ ರಮೇಶ ಮುಂಬಯಿ ಬಿಟ್ಟ ಹಿಂದಿನ ದಿನದ ನೆನಪಾಯಿತು.

"ಲಾಲಾ ನಿಮ್ಮ ಸ್ನೇಹಕ್ಕೂ ಯೋಗ್ಯನಲ್ಲವೆ? ನನ್ನ ಸುತ್ತೇಕೆ ಗಂಟು ಬೀಳುತ್ತೀರಿ?"

ತನ್ನ ಹೃದಯ ಪರಿಚಯವಿದ್ದವನಿಂದ ಆ ಮಾತು! ಎಂಥ ತಿರಸ್ಕಾರ! ಅವನ ಹೃದಯದಲ್ಲಿ ಭಾವನೆ ಎಂಬುದೇ ಇರಲಿಲ್ಲವೆ? ಕಿರಣ ನಿಂತಿರಲಾರದೆ ಕುಳಿತು ಮೋರೆ ಮುಚ್ಚಿಕೊಂಡಳು. ನದಿಹರಿಯುವಂತೆ ಕಣ್ಣೀರು ಸುರಿಸಬೇಕೆಂದೆನಿಸುತ್ತಿತ್ತು ಆಕೆಗೆ. ಮನಸ್ವೀಯಾಗಿ ಚೀರಾಡಬೇಕೆಂದೆನಿಸುತ್ತಿತ್ತು. ಆದರೆ ಎರಡೂ ಕೈಗಳಿಂದ ಮೋರೆ ಮುಚ್ಚಿಕೊಂಡಿದ್ದಳು ಮಾತ್ರ.

ಲಾಲಾ ನೋಡುತ್ತಲೇ ಇದ್ದನು. ರಮೇಶನಿಗಾಗಿ ಈಕೆಗೆ ಇಷ್ಟೆಲ್ಲ ಪ್ರೇಮವಿತ್ತೆ! ರಮೇಶ ಇದೆಲ್ಲವನ್ನೂ ಅರಿತೂ ಅಷ್ಟು ಸುಲಭವಾಗಿ ಮುಂಬಯಿ ಬಿಟ್ಟುಹೋದನೆ! ಎಂದು ಯೋಚಿಸತೊಡಗಿದನು.

ಕಿರಣಳ ಭಾವಾವೇಗ ಕಡಿಮೆಯಾಲೆಂದು ಅವನೂ ಕೆಲಕಾಲ ಮೌನವಾಗಿದ್ದು ನುಡಿದನು,

"ರಮೇಶನದು ಅತಿ ದೊಡ್ಡಹೃದಯ, ಕಿರಣ. ನಾನು ಬಾರಿಬಾರಿಗೆ ಬೇಡ ಎಂದರೂ ನನಗಾಗಿ ಇಷ್ಟೆಲ್ಲ ಮಾಡಿಕೊಂಡನು. ನನ್ನನ್ನೂ ಕ್ಷಮಿಸು ಕಿರಣ. ನಾನು ತೀರ ದುರ್ಬಲನು. ಆದರೂ ಹೋಗುವ ಗಳಿಗೆಯ ವರೆಗೆ ಅವನನ್ನು ತಡೆಯಲೆತ್ನಿಸಿದೆ. ಆದರೆ ತನ್ನ ಹಠವನ್ನೂ ಅವನು ಬದಲಿಸಲಿಲ್ಲ."

ಕಿರಣ ಇನ್ನು ಯಾರಿಂದಲೂ ಏನನ್ನೂ ಕೇಳುವ ಸ್ಥಿತಿಯಲ್ಲಿರಲಿಲ್ಲ.

ಲಾಲಾನ ಕ್ಷಮೆಬೇಡಿ, ಆ ದಿನದ ತಮ್ಮಿಬ್ಬರ ಮಾತಿನ ವಿಷಯವನ್ನು ಲಾಲಾ ಯಾರಿಗೂ ಹೇಳದಂತೆ ಅವನಿಂದ ವಚನ ಪಡೆದು ಅಲ್ಲಿಂದ ಹೊರಟುಬಿಟ್ಟಳು.

ಆಕೆಯ ಹೃದಯ ಒಂದೇ ಸಮನೆ ಹೊಡೆದುಕೊಳ್ಳತೊಡಗಿತ್ತು. ತನ್ನ ಮನಸ್ಥಿತಿಯನ್ನರಿತಿದ್ದರೂ ರಮೇಶ ತನ್ನಿಂದ ದೂರವಾಗಿ ಹೋಗಿದ್ದನು, ಹೋಗುವ ಮೊದಲು ಭೆಟ್ಟಿಯಾಗಬೇಕೆಂದೂ ಅನಿಸಲಿಲ್ಲ, ಒಂದು ಪತ್ರವನ್ನೂ

ಬರೆಯಲಿಲ್ಲ! ರಮೇಶ ಅಷ್ಟು ಹೃದಯ ಶೂನ್ಯನೆ? ಲಾಲಾನಿಗಾಗಿ ಅಷ್ಟೆಲ್ಲ ಮಾಡುವಾಗ ತನ್ನ ಸುಖದುಃಖದ ವಿಚಾರವನ್ನು ಸ್ವಲ್ಪವೂ ಮಾಡಲಿಲ್ಲ. ಹಿಂದುಮುಂದೆ ನೋಡದೆ ಮುಂಬಯಿ ಬಿಟ್ಟುಬಿಟ್ಟನು! ಎಂಥ ನಿರ್ದಯತೆ! ಎಂಥ ದ್ವೇಷ!

ಕಿರಣ ಆ ದಿನ ದಾದರದ ತನ್ನ ಮನೆಯ ವರೆಗೆ ಹೇಗೆ ಬಂದಳೋ ಕಡೆಯವರೆಗೂ ಅದೊಂದು ಅತ್ಯಾಶ್ಚರ್ಯ ಸಂಗತಿಯಾಗಿಯೇ ಉಳಿಯಿತು. ಅದೆಷ್ಟೋ ಸಾರೆ ಇನ್ನೇನು ಕಾರು ಮುಂದಿನ ಬಸ್ಸಿಗೋ, ಫುಟ್‌ಪಾತಿಗೋ ಬಡಿದು ಚೂರು ಚೂರಾಗುತ್ತದೆ ಎಂದುಕೊಂಡಿದ್ದಾಗ ಚಿಕ್ಕಂದಿನಿಂದ ಮೈಯುಂಡಿದ್ದ ವ್ಹೀಲಿನ ಮೇಲಿನ ಹಿಡಿತ ಅದೆಲ್ಲವನ್ನೂ ಹೇಗೋ ತಪ್ಪಿಸಿ ಕಾರು ಮುಂದೆ ಹೋಗುವಂತೆ ಮಾಡಿತ್ತು.

ಅದೆಷ್ಟೋ ಸಾರೆ ಎದುರಿನ ರಸ್ತೆ, ಮನೆ, ಮರ, ಮನುಷ್ಯರು ಎಲ್ಲವೂ ತಲೆಕೆಳಗಾಗಿ ಕುಣಿಯುತ್ತಿವೆ ಎಂದು ಭಾಸವಾಗಿ ವ್ಹೀಲಿನ ಹಿಡಿತ ತಪ್ಪುವಂತಾದಾಗ ಕಣ್ಣುಜ್ಜಿಕೊಂಡು ಮತ್ತೆ ಹೇಗೋ ಸಾವಧಳಾಗಿ ಕಾರು ನಡೆಸಿದಳು.

ಮರುದಿನ ಮೂರು ಕಡೆಯ ಪೋಲಿಸು ಚೌಕಿಗಳಿಂದ ಕಿರಣಳ 'Rash Driving' ಬಗ್ಗೆ ಶ್ರೀಪತರಾಯರಿಗೆ ಎಚ್ಚರಿಕೆಯ ಚೀಟಿಗಳು ಬಂದಿದ್ದವು!

# ೩೧

ನಾಲ್ಕೆಂಟು ದಿನಗಳು ಸಂದಿದ್ದವು. ಕಿರಣಳ ಸ್ವಭಾವ ಮನೆಯಲ್ಲಿ ಒಂದು ಸಮಸ್ಯೆಯೇ ಆಗತೊಡಗಿತ್ತು.

ದಿನವೆಲ್ಲ ಮನೆಯಂತೂ ಇರಲಿ, ತನ್ನ ಕೋಣೆ ಬಿಟ್ಟು ಆಕೆ ಹೊರಗೆ ಬರುತ್ತಿರಲಿಲ್ಲ. ಅಣ್ಣ ಅತ್ತಿಗೆ ಮಾತಾಡಿದಾಗ ಮಾತ್ರ ಎಂದಿನಂತೆ ನಗುತ್ತಲೇ ಉತ್ತರ ಕೊಡುತ್ತಿದ್ದಳು. ಮತ್ತೆ ಗಂಭೀರಳಾಗಿಬಿಡುತ್ತಿದ್ದಳು.

" ಹೀಗೇಕೆ ಕಿರಣ "

ಎಂದು ಒಂದು ದಿನ ಶ್ರೀಪತರಾಯರು ಕೇಳಿದ್ದಕ್ಕೆ—

" ಒಂದು ವ್ರತ ಹಿಡಿದಿದ್ದೇನೆ, ಅಣ್ಣ. ಏಕೆ, ಹೇಗೆ ಎಂದೆಲ್ಲ ಕೇಳಬಾರದು "

ಎಂದುಬಿಟ್ಟಿದ್ದಳು.

ಆದರೆ ಶ್ರೀಪತರಾಯರಿಗೆ ದಿನ ದಿನ ಕಂದತೊಡಗಿದ್ದ ಕಿರಣಳ ಸ್ನೇಹಮಯ ಮೋರೆ ತುಂಬ ನೋವನ್ನುಂಟು ಮಾಡುತ್ತಿತ್ತು. ಒಂದು ದಿನ ಯಾವದೋ ಮರಾಠಿಯ ಸ್ಥಾನಿಕ ದೈನಿಕವೊಂದನ್ನು ಹಿಡಿದು ಒಳಗೆ ಬರುತ್ತ ಕಿರಣನನ್ನು ಕೇಳಿದರು

" ಇದೇನು ಕಿರಣ ?"

" ಏನಣ್ಣ ?"

ಕಿರಣಳ ಅಣ್ಣ ಮೌನವಾಗಿ ವೃತ್ತಪತ್ರದ ಮೂಲೆಯೊಂದರ ಮೇಲೆ ಬೆರಳಿಟ್ಟು ಪತ್ರಿಕೆಯನ್ನು ಆಕೆಯ ಕೈಯಲ್ಲಿ ಕೊಟ್ಟರು.

ಅದರಲ್ಲಿ ಚಿತಳೆ ಕಂಪನಿಯ ಶೇಖರಲಾಲರಿಗೂ, ನ್ಯಾಯಮೂರ್ತಿ ವರೇರ್‌ಕರ್‌ರ ಮಗಳು ಸ್ನೇಹಲತೆಗೂ ಲಗ್ನ ನಿಶ್ಚಯವಾದ ಸಂಗತಿ ಪ್ರಕಟವಾಗಿತ್ತು.

ರಾಯರಿಗೆ ಕಿರಣಳ ಇತ್ತಲಾಗಿನ ಮೂಕ ವೇದನೆಗೆ ಅರ್ಥ ದೊರಕಿದಂತಾಗಿತ್ತು. ನೊಂದ ದನಿಯಲ್ಲಿ ಹೇಳಿದರು,

“ ಲಾಲಾ ಹೀಗೆ ಮಾಡುತ್ತಾನೆಂದು ನನಗೆ ನಂಬಿಕೆಯಾಗಿರಲಿಲ್ಲ.”

“ ಈಗೇನಾಯಿತಣ್ಣ ? ಲಾಲಾ ಲಗ್ನವಾಗಬಾರದೆ? ಎಂಥ ಶುಭ ಕೆಲಸಕ್ಕೆ ಎಂಥ ಮಾತಾಡುತ್ತಿ ?”

“ ನಾವೆಲ್ಲ ಬೇರೆಯೇ ತಿಳಿದುಕೊಳ್ಳುವಂತೆ ಇಲ್ಲಿಯ ವರೆಗೆ ವರ್ತಿಸುತ್ತಿದ್ದನಲ್ಲ. ವಿಶ್ವಾಸಘಾತದಿಂದ ನೀನು ನೋದುಕೊಳ್ಳುವಂತೆ ಮಾಡಿದನು”

“ ತಪ್ಪು ತಿಳಿದು ಏನೆಲ್ಲ ನುಡಿಯಬೇಡಣ್ಣ. ಕೆಲದಿನಗಳ ಹಿಂದೆಯೇ ಲಾಲಾ ಲಗ್ನವಾಗಲು ನನ್ನನ್ನು ಕೇಳಿಕೊಂಡಿದ್ದರು. ಆ ಪುಣ್ಯ ನನ್ನದಾಗುವದಿಲ್ಲ ಎಂದು ಪ್ರಾರ್ಥಿಸಿಕೊಂಡೆ.”

“ ಏನು! ಹಾಗಂದರೇನು ಕಿರಣ? ಲಾಲಾನ ಲಗ್ನವಾಗಲು ಒಲ್ಲೆ ಎಂದುಬಿಟ್ಟೆಯಾ? ಮತ್ತೇನು ಮಾಡಬೇಕೆಂದಿರುವೆ? ನನಗೊಂದೂ ಅರ್ಥವಾಗುವದಿಲ್ಲ.”

ಎಂದು ಶ್ರೀಪತರಾಯರು ಕೈ ಕೊಡವುತ್ತಿರುವಷ್ಟರಲ್ಲಿ ಲಾಲಾನೇ ಅಲ್ಲಿಗೆ ಬಂದನು.

“ ನಿಮಗೆಲ್ಲ ಅರ್ಥವಾಗುವದಿಲ್ಲರೀ ಅದು. ಈಗಿನ ಹುಡುಗರು ಹುಡುಗಿಯರು ಎಂದರೆ ಹೀಗೇನೇ. ಯಾರನ್ನು ಕೇಳೋದಿಲ್ಲ ಹೇಳೋದಿಲ್ಲ. ಸುಮ್ಮನೆ ನಿಮ್ಮ ತಂಗೀನ ಗೋಳಿಡಿಸಬೇಡಿರಿ”

ಲಾಲಾ ನುಡಿದನು.

ಶ್ರೀಪತರಾಯರ ಮೋರೆ ಮಾತ್ರ ಇನ್ನೂ ಗಂಟಿಕ್ಕಿಕೊಂಡು ತನಗೇನೂ ತಿಳಿಯಲಿಲ್ಲವೆಂಬುದನ್ನು ತೋರಿಸುತ್ತಿತ್ತು. ಅವರು ಹೇಳಿದರು,

" ಇದೆಲ್ಲ ಗುಪಿತ, ಒಗಟು ನನಗೆ ಸೇರುವದಿಲ್ಲವಪ್ಪ. ಪಾತರಗಿತ್ತಿಯಂತೆ ಆಡಿಕೊಂಡಿದ್ದ ಹುಡುಗಿ ಒಮ್ಮೆಲೆ ಮರಿ ಸೀತಾದೇವಿಯಂತೆ ಜೋಲಿ ಹಿಡಿದು ಕುಳಿತುಬಿಟ್ಟಿದಾಳೆ. ನಿಮ್ಮನ್ನು ಲಗ್ನವಾಗುತ್ತಾಳೆ ಎಂದು ನಾವೆಲ್ಲ ತಿಳಿದಿದ್ದರೆ ತಾನೇ ಒಲ್ಲೆ ಎಂದುಬಿಟ್ಟೆ ಅನ್ನುತ್ತಾಳೆ. ಊಹ್ಞು, ಎಲ್ಲಿಯೋ ಏನೋ ಗೇರ್ ತಪ್ಪಿದೆ. ಅದು ನನಗೆ ತಿಳಿಯದಾಗಿದೆ. ಕಿರಣಳನ್ನು ಸ್ವಲ್ಪ ನೋಡಿರಿ, ಲಾಲಾ ಚಟ್ಟನೆ ಗುರುತು ಸಿಕ್ಕುತ್ತದೆಯೆ ?"

" ನಾನೆಲ್ಲ ಹೇಳುತ್ತೇನೆ, ಶ್ರೀಪತಿ. ಕಿರಣ, ಆ ದಿನದ ನಿನ್ನ ವಚನದಿಂದ ಈಹೊತ್ತು ನನ್ನನ್ನು ಮುಕ್ತಮಾಡಬೇಕು. ಹಾಂ, ನಿನ್ನಾವ ತಡೆಯನ್ನೂ ನಾನೀಗ ಕೇಳುವದಿಲ್ಲ. ನಿನ್ನನ್ನು ಇದೇ ಸ್ಥಿತಿಯಲ್ಲಿ ಬಿಟ್ಟರೆ ನನ್ನನ್ನೇ ನಾನು ಕ್ಷಮಿಸಲಾರದಷ್ಟು ಪರಿಸ್ಥಿತಿ ಹದಗೆಡಬಹುದು. ನೋಡಿ, ಶ್ರೀ. ಇದೆಲ್ಲ ನಮ್ಮ ಮ್ಯಾನೇಜರ್ ಆಗಿದ್ದ ಆ ಕಿಲಾಡಿ ರಮೇಶನ ತಂಟೆ. ನಮ್ಮ ಮನೇಲಿದ್ದು ಕೊಂಡು ನನ್ನ ವ್ಯವಹಾರವನ್ನೆಲ್ಲ ಮೆನೇಜ್ ಮಾಡುವದರ ಜತೆಗೆ ನಿಮ್ಮ ತಂಗಿಯೂ ಆಗಾಗ ನಮ್ಮನೆಗೆ ಬರುತ್ತಿದ್ದರಿಂದ ಅವಳ ಹೃದಯದ ಬಿಸಿನೆಸ್ಸನ್ನೂ ಮೇನೇಜ್ ಮಾಡಿಬಿಟ್ಟ. ಅರ್ಥಾತ್...."

" ಅದೇನೋ ಹಣ ತಿಂದ ವಿಷಯ ಹಬ್ಬಿತ್ತಲ್ಲ ?"

" ಎಲ್ಲ ಸುಳ್ಳು. ರಮೇಶನನ್ನು ನೀವಿನ್ನೂ ಅರಿಯಬೇಕು "

ಎನ್ನುತ್ತ ಲಾಲಾ ಎಲ್ಲವನ್ನೂ ತಿಳಿಸಿದನು.

" ರಮೇಶ ಬಹು ದೊಡ್ಡ ಮನುಷ್ಯ ಶ್ರೀ. ನನಗಾಗಿ ಅಷ್ಟೆಲ್ಲ ಮಾಡಲೂ ಸಿದ್ಧನಾದನು. ಅವನ ದೊಡ್ಡಸ್ತನವನ್ನು ನಿಮ್ಮ ತಂಗಿ ಚನ್ನಾಗಿ ಅರಿತಿದ್ದಾಳೆ. ಅಂತೆಯೇ ನನಗೆ ಸ್ನೇಹಲತೆಯ ದಾರಿ ತೋರಿಸಿಬಿಟ್ಟಳು. ನಿಮ್ಮ ತಂಗಿಯನ್ನು ಪಡೆಯಬಲ್ಲವನು ಒಬ್ಬ ರಮೇಶನೇ ಆಗಿದ್ದನು."

ತಡೆಯಲಾಗದೆ ಹೊರಬಿದ್ದ ಕಿರಣಳ ನಿಟ್ಟುಸಿರು ಎಲ್ಲರಿಗೂ ಕೇಳಿಸಿತು. ಅವಳತ್ತ ತಿರುಗಿ ಲಾಲಾ ಹೇಳಿದನು.

" ಈ ಹೊತ್ತು ಮತ್ತೂ ಒಂದು ವಚನ ಮುರಿಯುತ್ತಲಿದ್ದೇನೆ, ಕಿರಣ. ಸಾವಿರ ಸುಳ್ಳು ಹೇಳಿಯಾದರೂ ಒಂದು ಮಂಗಲಕಾರ್ಯ ಮಾಡಬೇಕಂತೆ. ನಾನು ಬರೇ ಎರಡು ವಚನ ಮುರಿಯುತ್ತೇನೆ. ರಮೇಶ ಅಹಮದಾಬಾದದಲ್ಲಿ ರಖುಮಲ್‌ದಾಸರ ಮಿಲ್ಲಿನಲ್ಲಿದ್ದಾನೆ. ನಾಳೆಯೇ ಇಬ್ಬರೂ ಅಲ್ಲಿಗೆ ಹೋಗೋಣ.

ನೋಡು ಈ ಸುಳ್ಳು 'ಬೇಡ' ಅನ್ನುವದು ಯಾವ ಶಬ್ದಕೋಶದಲ್ಲಿಯೂ ಇಲ್ಲ. ಅದಕ್ಕೆ ಹ್ಞೂ ಅಂದುಬಿಡು. ತುರ್ತ ಎಲ್ಲಿಯಾದರೂ ಸುತ್ತಾಡಿ ಬರೋಣ. ನಿನ್ನ ಮೋರೆ ನೋಡಿ ರಮೇಶ ಅಂಜಬಾರದಲ್ಲ! ನೀನೇನು ಮಾಡಿಕೊಳ್ಳುತ್ತಿದ್ದೆ ಎಂದು ನಿನಗೇ ತಿಳಿದಿಲ್ಲ."

ಎನ್ನುತ್ತ ಲಾಲಾ ಆಕೆಯನ್ನು ಒತ್ತಾಯದಿಂದ ಹೊರಗೆ ಕರೆದೊಯ್ದನು.

## ೩೨

ಆ ದಿನ ಊಟದ ನಂತರ ಕಿರಣ ಅಣ್ಣನ ಕೋಣೆಗೆ ಬಂದಾಗ ಶ್ರೀಪತ ರಾಯರು ಏನನ್ನೋ ಓದುತ್ತಿದ್ದವರು ಗೋಣು ಅಲ್ಲಾಡಿಸಿ ಸ್ವಾಗತ ಬಯಸಿದರು. ಕಿರಣ ಅಣ್ಣನ ಪಕ್ಕದಲ್ಲಿಯೇ ಅರ್ಧ ಅವನ ಮೇಲೆ ಒರಗಿಕೊಂಡು ಅವನ ಕುತ್ತಿಗೆಯನ್ನು ಬಳಸಿ ಕೇಳಿದಳು.

"ಅಣ್ಣಾ, ನಿನಗೆ ಬೇಸರವಿಲ್ಲವಲ್ಲ?"

"ಏತಕ್ಕೆ?"

"ನಿಮ್ಮೆಲ್ಲರ ನಿರೀಕ್ಷೆಯಂತೆ ಯಾರೋ 'ದೊಡ್ಡ'ವರನ್ನು ಕೈಹಿಡಿಯದೆ ಹೆಸರು ದಿಸೆ ಇಲ್ಲದ ಮತ್ತಾರಿಗೋ ಮನಸೋತಿದ್ದೇನೆ ಅಂತ."

"ಬೇಸರವಿದೆ ಅಂದರೆ ನೀನೇನು ಕೇಳುವವಳೇನು?"

"ಏಕೆ ಬೇಸರ ಹೇಳು? ನಿನ್ನ ತಂಗಿ ಸುಖವಾಗಿರಬೇಡವೆ ನಿನಗೆ?"

"ಅದಕ್ಕೇ ಹೇಳಿದೆ. ಸಣ್ಣವಳಿದ್ದಾಗಿನಿಂದ ಅಪ್ಪ – ಆಯೀಗೇ ಕಲಿಸಿದೋಳು ನೀನು. ನನ್ನ ಮಾತು ಕೇಳುತ್ತೀಯಾ? ನಿನ್ನಲ್ಲಿ ಮೊದಲಿನಿಂದಲೂ ಪೂರ್ಣ ನಂಬಿಗೆಯಿಡಲು ಅಭ್ಯಾಸ ಮಾಡಿಕೊಂಡು ಬಂದಿದೇನೆ ಕಿರಣ. ನನ್ನ ಮುದ್ದು ತಂಗಿ, ನೀನೆಂದಾದರೂ ತಪ್ಪು ಮಾಡಿದ್ದೀಯ?

"ಹೋಗು, ಏನಾದರೂ ಹೇಳಿ ಉಬ್ಬಿಸಬೇಡ. ನಿನಗಿನ್ನೂ ಅವರ ಪರಿಚಯವಿಲ್ಲ. ಖರೇ 'ಒಳ್ಳೆಯವರು' ಎಂದರೆ ಉಪಚಾರದ ನುಡಿಯಾದೀತು. ಅವರು ಜೀವನವನ್ನೇ ಒಂದು ತಪಸ್ಸು ಮಾಡಿಕೊಂಡಿದಾರೆ."

"ಈ ಅವರು ಅವರು ಯಾರೇ?"

"ಅವರು ಅಂದರೆ ಅವರು. ನೀನು ಮೊದಲಿನಿಂದಲೂ ನನಗೆ ಹೀಗೆಯೇ ತ್ರಾಸು ಕೊಟ್ಟಿದ್ದೀ. ನಿನ್ನಹತ್ರ ಮಾತಾಡೋದೇ ಇಲ್ಲ, ಹೋಗು."

"ಇಲ್ಲಮ್ಮಾ, ಏನೂ ಕೇಳೋದಿಲ್ಲ. ಆದರೆ ಇಷ್ಟೆಲ್ಲ ನುರಿತವಳು ರಮೇಶನನ್ನು ಪ್ರೀತಿಸುತ್ತಿದ್ದರೆ ಹಾಗೇಕೆ ಅವನಿಗೆ ಹೇಳಲಿಲ್ಲ. ಕೇಳಿದರೆ ಬೇಕಾದ್ದು ಮಾಡುತ್ತೇನೆ. ಗಂಡನನ್ನ ನಾನೇ ಆರಿಸಿಕೊಳ್ಳುತ್ತೇನೆ ಅಂತಿದ್ದೆ ಯಲ್ಲ."

"ಅದಕ್ಕೇ ಹೇಳಿದ್ದು, ನಿನಗಿನ್ನೂ ಅವರ ಪರಿಚಯ ಇಲ್ಲ, ಅಂತ. ಅವರ ಮುಂದಿದ್ದರೆ ಅಂಥದೇನಾದರೂ ಹೇಳಬೇಕು ಅನ್ನುವ ವಿಚಾರವೂ ಬರುತ್ತಿರಲಿಲ್ಲ. ಹಾಗೆ ತಮಾಶೆಗೆ ಬಹಳ ಮಾತಾಡುತ್ತಿದ್ದೆವು. ಆದರೆ ನನಗೇ ತಿಳಿಯದಿದ್ದುದು ನನ್ನ ಮನಸ್ಥಿತಿ ಅವರಿಗೆ ತಿಳಿದುಬಿಟ್ಟಿತ್ತು. ಅವರೊಡನೆ ಅದೆಷ್ಟುಸಾರೆ ಸಿಟ್ಟುಮಾಡಬೇಕು ಎಂದು ನಿಶ್ಚಯಮಾಡಿಕೊಳ್ಳುತ್ತಿದ್ದೇಂತೀಯೆ. ಆದರೆ ಒಮ್ಮೆಯೂ ಆಗಲಿಲ್ಲ. ತೀರ ಹುಡುಗರಂತಾಗಿ ನನ್ನನ್ನೂ ಹುಡು ಗಾಟಕ್ಕೆಳೆದುಬಿಡುತ್ತಿದ್ದರು.

"ಅಬ್ಬಾ! ಮತ್ತೇನೇನು ಮಾಡುತ್ತಿದ್ದರು?"

"ನೋಡು, ನೀನು ಹೀಗೆಲ್ಲ ಗೇಲಿ ಮಾಡಿದರೆ ನಾನೇನೂ ಹೇಳುವದಿಲ್ಲ. ನಾನೂ ಅವರೂ ಇರುತ್ತಿದ್ದ ಸಲುಗೆಯ ರೀತಿ ನೋಡಿದರೆ ನೀನೇನು ಹೇಳು ತ್ತಿದ್ದೆಯೋ. ಆದರೆ ಆ ಸಲುಗೆಯ ಅಂತ್ಯ ಹೀಗೆಯೇ ಆಗಬಹುದೆಂದು ತಮಗೆ ಗೊತ್ತಿದ್ದರೂ ತುಟಿ ಪಿಟ್ ಅನ್ನಲಿಲ್ಲ. ಅದನ್ನೆಲ್ಲ ನೆನೆದುಕೊಂಡರೆ ತೀರ ನಾಚಿಕೆಯಾಗುತ್ತದೆ.

"ಎಷ್ಟು?"

"ಇಷ್ಟು" ಎನ್ನುತ್ತ ಕಿರಣ ಅಣ್ಣನ ಹೆಗಲನ್ನು ಕಚ್ಚಿಬಿಟ್ಟಳು.

"ಅಬ್ಬಬ್ಬಾ! ಆ ರಮೇಶನನ್ನಂತೂ ದೇವರೇ ಕಾಯಬೇಕು. ಏನೇ ಹೇಳು. ಒಂದು ಕೆಲಸ ಮಾತ್ರ ವೈನಾಯಿತು. ನಿನ್ನ ಅತ್ತಿಗೆ ಮುಂಬಯಿಯ ಹವೆ ತನಗಾಗುವದಿಲ್ಲವೆಂದು ಒಂದೇ ಸವನೆ ಗಂಟುಬಿದ್ದಿದ್ದಾಳೆ. ಅಲ್ಲಿ ಮಾವನ ಮಿಲ್ಲುಗಳನ್ನೂ ನೋಡಿಕೊಳ್ಳುವವರಿಲ್ಲವಾಗಿದ್ದರು. ಈಗ ಹಾಯಾಗಿ ನಾನು ಅಹಮದಾಬಾದಕ್ಕೆ ಹೋಗಿರಬಹುದು. ಲಾಲಾನ ಮಾತಿನ ಮೇಲಿಂದ ನಿನ್ನ

ರಮೇಶ ಬಹಳ ಜಾಣ ವ್ಯವಹಾರಿ ಎಂದು ಕಾಣುತ್ತದೆ. ಪಗಾರಿಲ್ಲದೆ ದುಡಿಯುವ ಒಬ್ಬ ಮ್ಯಾನೇಜರ ಅನಾಯಾಸವಾಗಿ ಸಿಕ್ಕಂತಾಯಿತು."

" ಪಗಾರು ಇಲ್ಲದಿದ್ದರಿಲ್ಲ. ಅವರಿಗೂ ಬೇಕಾಗಿಲ್ಲ. ಅವರಿಗೆ ಎಂದೂ ಹಣ ಬೇಕಾಗುವದಿಲ್ಲ. ಊರಲ್ಲಿ ಮನೆಕಟ್ಟಲಿಕ್ಕೆಂದೋ, ತಂಗಿಯ ಲಗ್ನಕ್ಕೆಂದೋ ಎಂಟು ಹತ್ತು ಸಾವಿರ ಬೇಕಾದರೆ ವ್ಯವಹಾರಕ್ಕೆ ಖರ್ಚುಹಾಕಿ ಬ್ಯಾಂಕಿನಿಂದ ತೆಗೆದುಬಿಡುತ್ತಾರೆ. ಅವರೂ ಇಲ್ಲಿಯೇ ಇದ್ದಮೇಲೆ ಖರ್ಚಾದರೂ ಏಕೆ ಬರುತ್ತದೆ ?"

" ಅಂತೂ ನಾವು ಹೋದಮೇಲೆ ಅವನನ್ನು ಇಲ್ಲಿಯೇ ಕರೆದು ತಂದಿಟ್ಟು ಕೊಳ್ಳುವಾಕೆ. ಅದೂ ಗುಣ ಅನ್ನು, ಲಗ್ನದ ಖರ್ಚೂ ತಪ್ಪಿದಂತಾಯಿತು. ನೀನೇನೋ ನಿನ್ನ ಮ್ಯಾನೇಜರ ಏನೋ ನೋಡಿಕೊಳ್ಳಿ. ಹ್ಞಾ, ಹ್ಞಾ. ಮತ್ತೆ ಕಚ್ಚಬೇಡ, ಮ್ಹಾರಾಯ್ತಿ. ಮುಂಬಯಿಯ ಬಿಸಿನೆಸ್ ಎಲ್ಲಾ ನಿಮಗೆ ಬಿಟ್ಟುಕೊಡುತ್ತೇನೆ.

" ನನಗಿನ್ನೂ ಹೆದರಿಕೆ, ಅಣ್ಣ. ನನ್ನ ಹೃದಯ ತಿಳಿದಿದ್ದರೂ ಸ್ವಲ್ಪವೂ ಹಿಂದೆಮುಂದೆ ನೋಡದೆ ನಡೆದುಬಿಟ್ಟರಲ್ಲ."

" ಈ ರತ್ನಬೇಡ ಅನ್ನುವನೇ ನಿನ್ನ ರಮೇಶ ? ಅವನು ಅಷ್ಟು ದೊಡ್ಡ ತ್ಯಾಗಮಾಡಲು ಶಕ್ಯನಾದನೆಂತಲೇ ನಿನ್ನ ಹೃದಯವನ್ನು ಸೆಳೆದುಕೊಂಡಿದ್ದಾನೆ. ನಾಳೆ ಅವನನ್ನು ಕರೆದುಕೊಂಡು ಬಾ. ನನ್ನ ತಂಗೀನ ಗೋಳು ಹೊಯ್ದು ಕೊಂಡುದಕ್ಕೆ ಅವನಿಗೆ ಬೇಕಾದ ಶಿಕ್ಷೆ ಮಾಡೋಣವಂತೆ."

" ಅವರೇನೂ ಮಾಡಲಿಲ್ಲ."

" ಓಹೋ, ಈಗಾಗಲೇ ಹೊತ್ತುಕೊಂಡು ಬರುವದಕ್ಕಾರಂಭವಾಯಿತೆ ?" ಎನ್ನುತ್ತ ಶ್ರೀಪತರಾಯರು ತಂಗಿಯ ಗಲ್ಲ ಚಿವುಟಿದರು.

೩೩

ಸೇಠ್ ರಖಿಮಲ್‌ದಾಸರ ಮಿಲ್ಲುಗಳಿಗೆ ಸೇರಿದ್ದ ಕೂಲಿಕಾರರ 'ಚಾಳಿ'ನ ಒಂದು ಕೋಣೆಯಲ್ಲಿ ಕಾಟಿನ ಮೇಲೆ ನಿಃಶಕ್ತನಾಗಿ ಮಲಗಿಕೊಂಡು ರಮೇಶ ಮೂಲೆಯ ಗೋಡೆಯ ಮೇಲಿನ ಹಲ್ಲಿಯೊಂದರ ಸರಿದಾಟವನ್ನೇ ನಿರೀಕ್ಷಿಸ ತೊಡಗಿದ್ದನು.

ಟ್ಯಾಫ್ಯಾಡ್‌ದಿಂದ ಹನ್ನೊಂದು ದಿನಗಳವರೆಗೆ ನರಳಿದ ನಂತರ ನಿನ್ನೆಯಷ್ಟೆ ಡಾಕ್ಟರರು ಇನ್ನು 'ಗುಳಿಗೆ' ತಿನ್ನುವ ಅವಶ್ಯಕತೆಯಿಲ್ಲವೆಂದು ಹೇಳಿ ಹೋಗಿದ್ದರು. ಸೇಠ್‌ಜಿಯವರಲ್ಲಿ ಸುಪರ್‌ವ್ಹಾಸಿಂಗ್ ಅಸಿಸ್ಟಂಟ್‌ನಾಗಿ ಕೆಲಸ ಮಾಡತೊಡಗಿದ ಸುಮಾರು ತಿಂಗಳು ದಿನಗಳ ನಂತರ ರಮೇಶನಿಗೆ ಜ್ವರ ಬರ ತೊಡಗಿತ್ತು. ಅಹಮದಾಬಾದ್ ಒಣ ಹವೆ ಅವನ ಪ್ರಕೃತಿಗೆ ಒಗ್ಗಿರಲಿಲ್ಲ. ಮೇಲಾಗಿ ಉಳಿಯಲು ಯೋಗ್ಯವಾದ ಮನೆ ಸಿಗದೆ, ವರ್ಕರ್‍ಸ್ ಕ್ವಾರ್ಟರ್‍ಸ ದಲ್ಲಿಯೇ ಒಂದು ಕೋಣೆ ಹಿಡಿದು ವೈಲು ದೂರದ ಯಾವದೋ ಉಡುಪಿ ಹೋಟೆಲ್ಲದಲ್ಲಿ ಊಟಮಾಡಿ ಬರಬೇಕಾಗುತ್ತಿತ್ತು.

ಬೆಳಿಗ್ಗೆ ಎಂಟೂವರೆಗೆ ಖೋಲಿ ಬಿಟ್ಟರೆ ತಿರುಗಿ ಬರುವದು ರಾತ್ರಿ ಊಟ ಮುಗಿಸಿ ಒಂಬತ್ತೂವರೆ ಘಂಟೆಗಾಗಿತ್ತು. ಮಧ್ಯಾಹ್ನ ಯಾವದೊಂದು ಮಿಲ್ಲಿ ನಲ್ಲಿಯೇ ಹೋಟೆಲ್‌ದಿಂದ ಡಬ್ಬ ತರಿಸುತ್ತಿದ್ದನು. ಆದರೆ ಆರಿಹೋಗಿರುತ್ತಿದ್ದ ಆ ಚಪಾತಿ, ಅನ್ನ ರಮೇಶನ ಗಂಟಲಲ್ಲಿಳಿಯುತ್ತಿರಲಿಲ್ಲ. ಅಂತೆಯೇ ಕೆಂಟೀನ್

ದಲ್ಲಿ ಸಿಗಬಹುದಾದುದನ್ನೇನಾದರೂ ತಿಂದು ಚಹ ಕುಡಿದೇ ಸಂಜೆಯವರೆಗೆ ಕಳೆಯಬೇಕಾಗಿತ್ತು.

ಇಷ್ಟೆಲ್ಲದರ ಪರಿಣಾಮವಾಗಿ ರಮೇಶನಿಗೆ ಜ್ವರ ಬರತೊಡಗಿದ್ದುದು ಆಶ್ಚರ್ಯವೇನಲ್ಲ. ಪಕ್ಕದ ಮನೆಯ ಶಕಿಲ್ ಭಾಯಿ, ಅವನ ಮನೆಯವರ ಮಮತೆಯ ಸೇವೆ ಇಲ್ಲದಿರುತ್ತಿದ್ದರೆ ರಮೇಶನ ಜ್ವರ ಅವನನ್ನು ಎಲ್ಲಿಗೆ ಮುಟ್ಟಿಸುತ್ತಿತ್ತೋ.

ಶಕಿಲ್ ಭಾಯಿ, ರಖಮುಲ್ ದಾಸರ ಸಂಸ್ಥೆಯಲ್ಲಿಯೇ ಸೇಲ್ಸ್ ಆರ್ಗನ್ನಾಯಸರ್ ಆಗಿದ್ದನು. ಮನೆಯಲ್ಲಿ ಮುದುಕಿ ತಾಯಿ, ಹೆಂಡತಿ, ಮೂರು ಮಕ್ಕಳ ಸಂಸಾರವನ್ನು ಬರುವ ಇನ್ನೂರು ಎಪ್ಪತ್ತು ರೂಪಾಯಿ ಪಗಾರಿನಲ್ಲಿ ಚನ್ನಾಗಿಯೇ ಸಾಗಿಸಿಕೊಂಡು ಹೋಗುತ್ತಿದ್ದ.

ರಮೇಶ ತನ್ನ ಖೋಲಿಗೆ ಬಂದ ಮೊದಲ ದಿನ ರಾತ್ರಿಯೇ ಮೂರೂ ಜನ ಮಕ್ಕಳೂ ಬಾಗಿಲ ಸಂದಿನಿಂದ ಇಣಕಿ ನೋಡಿ ನಾವು ನಿಮ್ಮೊಡನೆ ಬೇಕಾದ ಸಂಧಾನಕ್ಕೆ ಸಿದ್ಧ ಎಂದು ಸೂಚನೆಯಿತ್ತು ಹೋಗಿದ್ದರು. ಮುಂದೆ ರಮೇಶ ಅವರೊಡನೆ ಹರಕುಮುರುಕು ಗುಜರಾತಿಯಲ್ಲಿ ಮಾತಾಡುತ್ತ ಚಾಕಲೇಟು, ಪೆಪ್ಪರ್‌ಮಿಂಟುಗಳ ಗ್ರಾಂಟ್ ಕೊಟ್ಟಮೇಲೆ ಎರಡೂ ಪಾರ್ಟಿಯಲ್ಲಿಯೂ ಸಂಧಾನ ಸಹಜವಾಗಿಯೇ ಗಟ್ಟಿಯಾಗಿ ಸಲಿಗೆಯಲ್ಲಿ ಮಾರ್ಪಟ್ಟಿತ್ತು. ಒಂದೆರಡು ರಜಾ ದಿನಗಳಲ್ಲಿ ಶಕಿಲ್ ಭಾಯಿ ರಮೇಶನನ್ನು ಊಟಕ್ಕೂ ಕರೆದಿದ್ದನು. ಆ ಮನೆಯವರ ನಿರ್ಮಲ ಸರಳ ಸ್ನೇಹದ ಮುಂದೆ ರಮೇಶನ ಹುಟ್ಟು ಸಂಕೋಚ ವೃತ್ತಿಯೂ ಸೋಲನ್ನೊಪ್ಪಿಕೊಂಡಿತ್ತು. ಶಕಿಲ್ ಭಾಯಿಯ ಹೆಂಡತಿ ಮೃದುಲಾ ಬೇನ ಸ್ವಲ್ಪೇ ದಿನಗಳಲ್ಲಿ ತನ್ನ ಮಾತೃಪ್ರೇಮದಿಂದ ರಮೇಶನ ಮನವನ್ನು ಸೆಳೆದಿದ್ದಳು.

ರಮೇಶನಿಗೆ ಜ್ವರ ಬರತೊಡಗಿದ್ದ ಮೊದಲ ನಾಲ್ಕು ದಿನಗಳಲ್ಲಿಯೂ 'ಇದೇನು ಈವತ್ತು ಹೋಗಬಹುದು' ಅನ್ನುವ ನಿರ್ಲಕ್ಷಭಾವದಿಂದ ರಮೇಶ ಕೆಲಸದ ಮೇಲೆಯೇ ಇದ್ದುಬಿಟ್ಟಿದ್ದನು. ಐದನೆಯ ದಿನ ಮಾತ್ರ ರಜ ಪಡೆದು ಮನೆಯಲ್ಲಿಯೇ ಇರಬೇಕಾಯಿತು. ಆರನೆಯ ದಿನ ಶಕಿಲ್‌ಭಾಯಿ ತಾನೂ ರಜೆ ಪಡೆದು ಡಾಕ್ಟರರನ್ನು ಕರೆದು ತಂದಿದ್ದನು. ಅವರು 'ಟ್ರಾಯ್ಫಾಯ್ಡ್' ಎಂದಾಗ ಮನೆಯವರೆಲ್ಲ ಗಾಬರಿಗೊಂಡರು. ಡಾಕ್ಟರರು ಅವನನ್ನು ಆಸ್ಪತ್ರೆಗೆ

ಸೇರಿಸುವದು ಒಳ್ಳೆಯದೆಂದು ಹೇಳಿದರೂ, ಮೃದುಲಾಬೇನ ನಿರಾಕರಿಸಿಬಿಟ್ಟು ತಾನೇ ಆರೈಕೆಗೆ ನಿಂತಳು.

ಮುಂಬಯಿಯಲ್ಲಿ ರಮೇಶನ ಆಪ್ತರು ಯಾರೋ ಇದ್ದಾರೆ ಎಂದು ಅವನಿಂದಲೇ ಹಿಂದೆ ಆಕೆ ಕೇಳಿಕೊಂಡಿದ್ದರಿಂದ ಯಾರನ್ನಾದರೂ ಕರೆಸಿಕೊಳ್ಳಲಿಕ್ಕೆ ಸೂಚಿಸಿದಳು. ಆದರೆ ತನ್ನ ದುಃಖದಲ್ಲಿ ಯಾರೂ ಪಾಲುಗಾರರಾಗುವದು ರಮೇಶನಿಗೆ ಬೇಕಾಗಿರಲಿಲ್ಲ. ಭಾವ ಎಂಟುಹತ್ತು ದಿನಗಳ ರಜ ಪಡೆದು ಬರುವ ಸ್ಥಿತಿಯಲ್ಲಿಲ್ಲವೆಂಬುದೂ ಅವನಿಗೆ ಗೊತ್ತಿತ್ತು.

"ನನ್ನನ್ನು ಆಸ್ಪತ್ರೆಗೆ ಕಳಿಸಿಬಿಡಿರಿ, ಮೃದುಲಾಬೇನ"

ಎಂದು ಹೇಳಿದನು.

"ಹೌದು ನಾವಿರುತ್ತ ಪರದೇಶಿಯಂತೆ ನಿಮ್ಮನ್ನು ಆಸ್ಪತ್ರೆಗೆ ಕಳಿಸಿಬಿಡುತ್ತೇವೆ ಅಲ್ಲವೆ? ನಿಮಗೆ ತಿಳಿಯುವದಿಲ್ಲ. ಸುಮ್ಮನೆ ಮಲಗಿಕೊಂಡಿರಿ."

ಎಂದು ತಾಯಿ ಸುನಿತಾಬೇನ ರಮೇಶನ ಕೂದಲ ಮೇಲೆ ಕೈಯಾಡಿಸುತ್ತ ಉತ್ತರವಿತ್ತಿದ್ದಳು.

ರಮೇಶನ ಕಣ್ಣಿನಲ್ಲಿ ನೀರೂರಿತ್ತು. ತನ್ನ ತಾಯಿಯಿಂದಲೂ ಸೇವೆ ಮಾಡಿಸಿಕೊಳ್ಳದ ತಾನು ಅರಿಯದ ಊರಿನಲ್ಲಿ ಈ ಜನರಿಂದ ಸೇವೆ ಮಾಡಿಸಿಕೊಳ್ಳುವಂತಾಯಿತಲ್ಲ ಎಂದುಕೊಂಡನು. ಆದರೆ ಅವರು ಮಾತ್ರ ಆ ತೆರನ ಭಾವನೆಗೆ ಸ್ವಲ್ಪವೂ ಎಡೆಯಿರದಂತೆ ಅವನನ್ನು ತಮ್ಮವನನ್ನಾಗಿ ಮಾಡಿಕೊಂಡು ಆರೈಕೆ ಮಾಡಿದ್ದರು.

ಆ ಆರೈಕೆಯ ಪರಿಣಾಮವಾಗಿಯೇ ಹನ್ನೊಂದು ದಿನಗಳ ಮೇಲೆ ರಮೇಶನಿಗೆ ಇಂದು ಜ್ವರಬಿಟ್ಟಿತ್ತು. ಶರೀರದಲ್ಲಿ ನಿಃಶಕ್ತಿಯಷ್ಟೇ ಉಳಿದಿತ್ತು. ಮಲಗಿಕೊಂಡೇ ರಮೇಶ ತನ್ನಷ್ಟಕ್ಕೆ ಮಾತಾಡತೊಡಗಿದ್ದನು.

"ದೇವರು ಎಂಬುದು ಸುಳ್ಳಾದರೂ ಮನುಷ್ಯನ ಹಣೆಯ ಬರೆಹ ಎಂಬುದು ನಿಜವಾಗಿರಬೇಕು. ಯಾರ್ಯಾರ ಹಣೆಯಲ್ಲಿ ಏನೇನು ಬರೆದಿರುತ್ತದೆಯೋ. ಎಲ್ಲಿಯೋ ಏನೋ ಆಗಿದ್ದ ತನ್ನನ್ನು ಲಾಲಾ ಮನೆಯವನಂತೆ ನಡೆಸಿಕೊಂಡಿದ್ದನು. ಗಿರಿಜಾ ತಾಯಿಗೆ ಮಗನಾಗಿ ಬಿಟ್ಟಿದ್ದೆನು. ಎಲ್ಲಿಯ ಸಂಕಪಾಲದ ಕರ್ಣಿಕರ ಮಗ; ಎಲ್ಲಿಯ ಮುಂಬಯಿಯ ಕಾರಖಾನೆ, ಕಂಪನಿಗಳ ಒಡೆಯ ಲಾಲಾ!

ಅದನ್ನು ಬಿಟ್ಟು ಇಲ್ಲಿ ಬಂದರೂ ಈ ತಾಯಂದಿರ ಪ್ರೇಮದ ಸೆರೆ ಬಿಡಲಿಲ್ಲ. ಹೀಗೆಯೇ ಈ ದೇಶದ ಮೂಲೆ ಮೂಲೆಗೆ ಹೋದರೂ ಈ ತಾಯಂದಿರು ತನ್ನಂಥ ದುರ್ದೈವಿಗಳಿಗೆ ತಾಯೆಂದಿರಾಗಿಯೇ ಉಳಿಯಬಹುದು. ಅಂತೆಯೇ ಹಿಂದಿನವರು ಮಾತೃದೇವೋಭವ ಅಂದರು. ಜಾತೀಯತೆಯ ವಾದ, ರಾಷ್ಟ್ರೀಯ ವಾದ, ಭಾಷಾವಾರ ಪ್ರಾಂತರಚನೆ, ಧಾರ್ಮಿಕ ಕಟ್ಟು ಕಟ್ಟಳೆ ಇವೆಲ್ಲ ಸುಳ್ಳು. ಈ ತಾಯಂದಿರ ಮುಂದೆ ಅವು ಯಾವವೂ ಸತ್ಯ ವಾಗುವುದಿಲ್ಲ.

ರಸ್ಕಿನ್ ಅಂದಿದ್ದ – ಜಗತ್ತಿನ ಸ್ತ್ರೀಯರೆಲ್ಲ ಮನಸ್ಸು ಮಾಡಿದರೆ ಜಗತ್ತಿನಲ್ಲಿ ಯುದ್ಧ ಎನ್ನುವ ಶಬ್ದವೇ ಇಲ್ಲದಂತೆ ಮಾಡಬಹುದು – ಎಂದು. ಹೌದು, ಈ ಕಿಲಾಡಿ ರಾಜಕಾರಣಿಗಳನ್ನೆಲ್ಲ ಅವರವರ ತಾಯಂದಿರು, ಅಕ್ಕಂದಿರು, ಹೆಂಡಿರು ಕಿವಿಹಿಂಡಿ ಗದರಿಸಿ ಕುಳ್ಳಿರಿಸಿದರೆ ಜಗತ್ತಿನಲ್ಲಿ ಏನೂ ಆಗಬೇಕಾಗಿರಲಿಲ್ಲ. ಒಬ್ಬರು ಹೊಟೆಲ್ ಉದ್ಯೋಗ ಮಾಡತೊಡಗಿದರೆ ಇನ್ನೊಬ್ಬರು ಕಿರಾಣಿ ಅಂಗಡಿ ಇಡುತ್ತಿದ್ದರು. ನೆಹರೂ ಪುಸ್ತಕ ಬರೆದು ಹಣ ಗಳಿಸುತ್ತಿದ್ದ!

ರಮೇಶನಿಗೆ ತನ್ನ ಹುಚ್ಚು ವಿಚಾರಕ್ಕೆ ನಗೆ ಬಂದಿತು.

" ರಮೇಶ ಭಾಯಿ ನಗ್ತಾರೆ ಮಾ."

ಅನ್ನುತ್ತ ಬಾಗಿಲಲ್ಲಿಯೇ ನಿಂತು ನೋಡತೊಡಗಿದ್ದ ಪುಟ್ಟ ಅರವಿಂದ – ಶಕಿಲ್‌ಭಾಯಿಯ ಚಿಕ್ಕಮಗ – ಒಳಗೆ ಓಡಿಹೋದನು.

" ಹಾಗೆಲ್ಲ ಗಲಾಟೆ ಮಾಡಬಾರದು, ಅರವಿಂದ. ರಮೇಶ ಭಾಯಿಗೆ ತ್ರಾಸಾಗುತ್ತದೆ"

ಎನ್ನುತ್ತಾ ಸುನಿತಾಬೇನ ಹಣ್ಣಿನ ರಸದೊಂದಿಗೆ ಕೋಣೆಯೊಳಗೆ ಬಂದಳು.

" ಈಗಲೇ ಮತ್ತೇನು ತಂದಿರಿ ತಾಯಿ ?"

" ಈಗಲೇ ಏನು ಬಂತು ? ಈಗ ರಸ ತೆಗೆದುಕೊಳ್ಳುವ ಹೊತ್ತಲ್ಲವೆ ? ಟ್ಯಾಫ್ಯಾಡ್ ಆದವರಿಗೆ ಬಹಳ ಹಸಿವಾಗುತ್ತದಂತೆ. ಬಹಳ ತಂದಿಲ್ಲ "

ಎನ್ನುತ್ತ ಸುನಿತಾಬೇನ ರಮೇಶನ ಪಕ್ಕದಲ್ಲಿ ಕುಳಿತು ರಸದ ಪೇಲಿಯನ್ನು ಅವನ ಬಾಯಿಗೆ ಹಿಡಿದಳು.

" ಏನಾದರೂ ಕುಡಿಸಬೇಕು, ತಿನ್ನಿಸಬೇಕು ಎಂದಕೂಡಲೆ ಆಹಾರದ ಹೊತ್ತಾಗಿ ಬಿಡುತ್ತದೆ ಅಲ್ಲವೆ ?"

" ಹೌದು, ಬಹಳ ತಿನ್ನುತ್ತೀರಿ. ಎಷ್ಟು ಸೊರಗಿದ್ದೀರಿ ನಿಮಗೆ ತಿಳಿಯೋದೇ ಇಲ್ಲ. ನಿಮ್ಮ ಮನೆಯವರು ಯಾರಾದರೂ ನೋಡಿದರೆ ಏನೆಂದು ಕೊಂಡಾರು ?"

ಪಕ್ಕದಲ್ಲಿದ್ದ ಟವಲಿನಿಂದ ರಮೇಶನ ಮೋರೆ ಒರೆಸಿ ಅವನ ಕೂದಲು ನೇವರಿಸುತ್ತ ಸುನಿತಾಬೇನ ಕೇಳಿದಳು.

" ನನ್ನ ಮನೆಯವರಾಗಿ ನೀವೆಲ್ಲ ಈಗಾಗಲೇ ನೋಡಿ ಬಿಟ್ಟಿದೀರಿ. ಮತ್ತೆ ಯಾರೂ ನೋಡಬೇಕಾಗಿಲ್ಲ"

ಎಂದಳು ಬಾಗಿಲಲ್ಲೇ ನಿಂತಿದ್ದ ಮೃದುಲಾ.

" ಬೇಗ ಒಂದು ಲಗ್ನಮಾಡಿಕೊಂಡು ಬಿಡಿ. ಈ ಕಷ್ಟ ಎಲ್ಲ ತಪ್ಪುತ್ತದೆ. ನನಗೂ ಅತ್ತೆತನ ಮಾಡಲಿಕ್ಕೆ ಪಕ್ಕದಲ್ಲಿ ಒಬ್ಬಳು ಸೊಸೆ ಇದ್ದ ಹಾಗಾಗುತ್ತದೆ. ಆ ಕಿರಣ ಯಾರು ಹೇಳಲೇ ಇಲ್ಲ. ಜ್ವರವಿದ್ದಾಗ ಬಡಬಡಿಸುತ್ತಿದ್ದಿರಿ"

ಎಂದು ತಾಯ್ತನದ ಸಲುಗೆಯಿಂದ ನುಡಿದಳು ತಾಯಿ ಸುನಿತಾ.

" ನಿಮ್ಮ ಕಮಲಾಬೀಬೀನೇ ಮಾಡಿಕೊಂಡು ಬಿಡುತ್ತೇನಮ್ಮ. ಇಬ್ಬರೂ ಆಡಿಕೊಂಡಿರುತ್ತೇವೆ."

ಒಳಗೆ ಬರುತ್ತಿದ್ದ ಶಕಲನ ಆರು ವರ್ಷದ ಹಿರೇ ಹುಡುಗಿಯನ್ನು ನೋಡುತ್ತ ರಮೇಶ ನಗೆಯಾಡಿದನು.

" ನಮಗೆ ದೊಡ್ಡ ಹುಡುಗಿಯಿದ್ದರೆ ನಿಜವಾಗಿಯೂ ಕುತ್ತಿಗೆಗೆ ಕಟ್ಟು ತ್ತಿದ್ದೆವು. ಬೇಡ ಅಂದರೂ ಕೇಳುತ್ತಿರಲಿಲ್ಲ !"

" ನಿಮ್ಮ ಮಗನಾಗಿರೋದೇ ಸಾಕು, ಬಹನ್. ಹಾಗೇನೇ ಆಶೀರ್ವಾದ ಮಾಡಿ."

" ಹುಚ್ಚ. ನಿಮ್ಮನೇಗೆ ಪತ್ರ ಬರೆದು ಈ ವರ್ಷಾನೇ ಒಂದು ಮದುವೆ ಗಂಟು ಹಾಕದಿದ್ದರೆ ಹೇಳಿ"

ಎಂದು ಮೃದುಲಾಬೇನ ಚಟ್ಟನೆ ಬಗ್ಗಿ ರಮೇಶನ ಹಣೆಯನ್ನು ಕೈಯಿಂದ ಸವರಿ ಅಲ್ಲಿಂದ ಓಡಿಬಿಟ್ಟಳು.

“ ಅಕ್ಕ ತಮ್ಮ ಇಬ್ಬರೂ ಏನೋ ‘ ಗಮ್ಮತ್ತು’ ನೋಡಿದವರಂತೆ ಕೇಕೆ ಹಾಕಿ ತಾವೂ ಓಡಿದರು.

ರಮೇಶನಿಗೆ ನಿದ್ದೆಯಾವಾಗ ಹತ್ತಿತೋ ಅರಿವಿರಲಿಲ್ಲ. ಎಚ್ಚರವಾದಾಗ ಆಗಲೇ ಕ್ಷೀಣವಾಗತೊಡಗಿದ್ದ ಸಂಜೆಯ ಬೆಳಕಿನಲ್ಲಿ ತನ್ನ ಕಾಟನ ಮೇಲೆ ಯಾರೋ ಕುಳಿತಿರುವದನ್ನು ನೋಡಿದನು.

ಬಹಳ ದಿನಗಳ ನಂತರ ಆ ದಿನ ಏಕೋ ಅವನಿಗೆ ಕಿರಣಳ ಕನಸು ಬಿದ್ದಿತ್ತು. ಅವನು – ಕಿರಣ ಇಬ್ಬರೂ ದಾದರ ಬೀಚಿನ ಮೇಲೆ ತಿರುಗಾಡುತ್ತ ನಡೆದಿರುವಾಗ ಒಮ್ಮೆಲೆ ಮಳೆ ಬಂದುಬಿಟ್ಟಿತು. ಬೀಚಿನ ತುಂಬೆಲ್ಲ ಕಿಕ್ಕಿರಿದಿದ್ದ ಜನರ ಸಮೂಹ ಕ್ಷಣಾರ್ಧದಲ್ಲಿ ಎಲ್ಲಿಯೋ ಅಡಗಿ ದಂಡೆ ನಿರ್ಜನವಾಯಿತು. ತಾವೂ ಓಡಿ ಹೋಗೋಣವೆಂದು ರಮೇಶನ ಸೂಚನೆಗೆ ಕಿರಣ ತನ್ನ ಅಭಿಮಾನಕ್ಕೆ ಅದೆಲ್ಲ ನಗೆಗೀಡೆಂದು ತಿಳಿದು ಓಡಲು ಒಪ್ಪಲಿಲ್ಲ. ಅಷ್ಟರಲ್ಲಿ ಲಾಲಾ ಕೊಡೆ ಹಿಡಿದು ಬರುತ್ತಿದ್ದುದು ಕಾಣಿಸಿತು. ರಮೇಶ ಸಂತೋಷಗೊಂಡು ಕಿರಣಳಿಗೆ ಅವನ ಛತ್ರಿಯಲ್ಲಿ ಹೋಗಲು ಹೇಳಿ ‘ ತನಗೇನು ಹೇಗಾದರೂ ಆಗುತ್ತದೆ. ಇದೆಲ್ಲ ನಿತ್ಯದ್ದು’ ಎನ್ನುವ ಭಾವನೆಯಿಂದ ತಿರುಗುವದರಲ್ಲಿದ್ದನು.

ಅಷ್ಟರಲ್ಲಿ ಲಾಲಾನ ಕೈಯಲ್ಲಿದ್ದ ಕೊಡೆ ಒಂದಕ್ಕೆ ಎರಡಾಗಿ, ನಾಲ್ಕಾಗಿ, ಹತ್ತಾಗಿ ಒಂದು ನಿಮಿಷದಲ್ಲಿ ಸಾವಿರಾರು ಕೊಡೆಗಳು ದಂಡೆಯ ತುಂಬೆಲ್ಲ ರಾಶಿಯಾಗಿಬಿಟ್ಟವು. ಅವುಗಳಲ್ಲೊಂದನ್ನು ಆರಿಸಬೇಕೆನ್ನುವದರಲ್ಲಿ ರಮೇಶನಿಗೆ ಎಚ್ಚರವಾಗಿತ್ತು.

ತಾನಿನ್ನೂ ಕನಸನ್ನೇ ಕಾಣುತ್ತಿರಬಹುದೆ! ಎಂದು ಕಣ್ಣುಜ್ಜಿಕೊಂಡು ನೋಡಿದನು. ಕನಸಾಗಿರಲಿಲ್ಲ. ಕೋಣೆಯ ಕತ್ತಲೆಗೆ ಆಗಲೇ ಅಭ್ಯಾಸ ಗೊಂಡಿದ್ದ ಅವನ ಕಣ್ಣಿಗೆ ಅಲ್ಲಿ ಕುಳಿತವಳು ಕಿರಣ ಎನ್ನುವದು ಖಾತ್ರಿ ಯಾಯಿತು.

“ ಯಾರು ? ಕಿರ....ತಾವಡೇಕರ್ ! ನಮಸ್ತೆ”

ಅನ್ನುತ್ತ ರಮೇಶ ಏಳುವ ಪ್ರಯತ್ನ ಮಾಡಿದನು.

“ ಹಾಂ, ಏಳಬೇಡಿ. ಮೈಯಲ್ಲಿ ನೆಟ್ಟಗಿಲ್ಲದಾಗಲೂ ಶಿಷ್ಟಾಚಾರ ತೋರಿಸಬೇಕೆಂದು ಯಾವ ಸಂಸ್ಕೃತಿಯಲ್ಲಿಯೂ ಇಲ್ಲ”

ರಮೇಶನನ್ನು ತಡೆಯುತ್ತ ಕಿರಣ ನುಡಿದಳು.

"ಎಷ್ಟು ಸೊರಗಿದ್ದೀರಿ!"

ರಮೇಶನಿಗಿನ್ನೂ ಅವನಿಗಾದ ಆಶ್ಚರ್ಯದ ಗರ ಇಳಿದಿರಲಿಲ್ಲ. ಆಕೆಯ ಮಾತು ಕೇಳಿಸಿತೋ ಇಲ್ಲವೋ. ಹೇಳಿದನು—

"ನಿ – ನೀವು ಇಲ್ಲಿ! ಲಾಲಾನೂ ಬಂದಿದ್ದಾನೆಯೆ?"

"ಬಂದಿದ್ದಾರೆ. ನಿಮ್ಮ ಸೇಠ್‌ಜಿ ಹತ್ತರ ಮಾತಾಡುತ್ತ ಕುಳಿತಿದ್ದರು. ನಿಮ್ಮ ಅರಮನೆಯ ಪತ್ತೆ ಕೇಳಿಕೊಂಡು ನಾನಿತ್ತ ಬಂದೆ. ಇದೇನು ಅವಸ್ಥೆ ತಂದುಕೊಂಡಿದ್ದೀರಿ?"

"ಏನೋ ಸ್ವಲ್ಪ ಜಡ್ಡಾಗಿತ್ತು. ಈಗ ಗುಣವಾಗಿದೆ"

"ಟ್ರ್ಯಾಫ್ಯಾಡು 'ಸ್ವಲ್ಪ' ಜಡ್ಡು ಅಲ್ಲವೆ? ಹೇಳದೆ ಕೇಳದೆ ಮುಂಬಯಿ ಬಿಟ್ಟಿರಲ್ಲ. ಅದಕ್ಕೆ ಹೀಗಾಯಿತು."

"ಹುಂ, ಅಹಮದಾಬಾದದ ಹವೆ ಒಮ್ಮೆಲೆ ಒಗ್ಗಲಿಲ್ಲ. ಇನ್ನು ಹೊಂದಿಕೊಳ್ಳುತ್ತದೆ. ನಿಮ್ಮ ಮಿಲ್ಲುಗಳನ್ನು ನೋಡಲಿಕ್ಕೆ ಬಂದಿರೇನು?"

"ಹುಂ, ಸ್ವಲ್ಪ ಹಾಗೆಯೇ ಅನ್ನಿ. ನೀವೂ ಇಲ್ಲಿ ಕೆಲಸ ಮಾಡುತ್ತಿರುವಿರಿ ಎಂದು ತಿಳಿಯಿತು."

"ಲಾಲಾ....?"

"ಹುಂ, ಅವರಿಂದಲೇ. ಈಗ ನಾನು – ಲಾಲಾ ಬಹಳ ಹತ್ತಿರದ ಸ್ನೇಹಿತರಾಗಿದ್ದೇವೆ. ನೀವೇ ಹೇಳಿದ್ದಿರಲ್ಲ. ನಿಮ್ಮ ಮಾತನ್ನು ಅಕ್ಷರಶಃ ಪಾಲಿಸಿದ್ದೇನೆ."

"ಥ್ಯಾಂಕ್ಸ್, ನಿಮ್ಮಿಬ್ಬರಿಗೂ ನಾನು ಅಭಿನಂದನೆ ಕೊಡಬೇಕು ಅಲ್ಲವೆ?"

"ಲಾಲಾನಿಗಂತೂ ಕೊಡಲೇಬೇಕು. ಅವನಿಗೂ ಸ್ನೇಹಲತೆಗೂ ಮೊನ್ನೆ ಲಗ್ನ ನಿಶ್ಚಯವಾಯಿತು. ಬಹುಶಃ ಈ ತಿಂಗಳ ಅಂತ್ಯದಲ್ಲಿ ಲಗ್ನವೂ ಆಗ ಬಹುದು. ಒಂದು ರೇಡಿಯೋಗ್ರಾಮ್ ಸೆಟ್ಟನ್ನು ಪ್ರೆಸಂಟ ಕೊಟ್ಟುಬಿಡೋಣ ಅಲ್ಲವೆ?"

"ಲಾಲಾ – ಸ್ನೇಹಲತಾ!"

"ಹುಂ, ಇಷ್ಟು ಬೇಗ ಮರೆತುಬಿಟ್ಟರೇನು. ವರೇರಕರ್‌ರ ಮಗಳು ಸ್ನೇಹಲತೆ. ಲಾಲಾಗಾಗಿ ಮೊದಲಿಸಿಂದಲೂ ಕೊರಗುತ್ತಿದ್ದಳು. ನಾನೆಲ್ಲ

ಕೂಡಿಸಿಕೊಡುತ್ತೇನೆ ಸುಮ್ಮನಿರು ಎಂದು ಆಕೆಗೆ ಧೈರ್ಯ ಕೊಟ್ಟಿದ್ದೆ. ಜೋಡಿ ಚನ್ನಾಗಿದೆ ಅಲ್ಲವೆ?"

ರಮೇಶ ಕ್ಷಣಕಾಲ ಮಾತಾಡಲಿಲ್ಲ. ಕಿರಣಳತ್ತ ನೋಡುವ ಧೈರ್ಯವೂ ಆತನಲ್ಲಿರಲಿಲ್ಲ.

ಕಿಟಕಿಯ ಹೊರಗೆ ದೂರ ಕ್ಷಿತಿಜದತ್ತ ನೋಡುತ್ತ ಬಹಳ ಕಷ್ಟದಿಂದ ಎಂಬಂತೆ ಹೇಳಿದನು,

"ನಾನು ಬೇರೆಯೇ ಆಶಿಸಿದ್ದೆ."

"ಹುಂ, ಲಾಲಾ ಹೇಳಿದರು"

ಸುಳ್ಳು ನಿಟ್ಟುಸಿರುಬಿಡುತ್ತ ಕಿರಣ ಹೇಳಿದಳು,

"ಆದರೇನು? ಮನುಷ್ಯ ಒಂದು ನೆನೆದರೆ ದೇವರು ಮತ್ತೊಂದು ಮಾಡುತ್ತಾನಂತಲ್ಲ."

"ಲಾಲಾ ಏನು ಹೇಳಿದರು?"

"ಎಲ್ಲವನ್ನೂ ಹೇಳಿದರು. ನೀವು ಮುಂಬಯಿಯನ್ನು ಏಕೆ ಬಿಟ್ಟರಿ. ಏನೇನು ಮಾಡಿಕೊಂಡುಬಿಟ್ಟರಿ. ಎಲ್ಲಿಗೆ ಹೋಗುತ್ತಿರುವಿರೆಂಬುದನ್ನು ಏಕೆ ಮುಚ್ಚಿಟ್ಟರಿ. ಎಲ್ಲಾ."

ರಮೇಶ ಇದೆಲ್ಲ ತನಗೊಂದೂ ಅರ್ಥವಾಗುವದಿಲ್ಲ ಎನ್ನುವ ಸೋತ ದೃಷ್ಟಿಯಿಂದ ಕಿರಣಳನ್ನು ಒಮ್ಮೆ ನೋಡಿ ಸುಮ್ಮನೆ ಮಲಗಿಬಿಟ್ಟನು.

ರಮೇಶನ ಕೈಯನ್ನು ತನ್ನ ಕೈಯಲ್ಲಿಟ್ಟುಕೊಳ್ಳುತ್ತ ಕಿರಣ ಮುಂದರಿಸಿದಳು. ಅವಳ ಅಲ್ಲಿಯವರೆಗಿನ ಹಾಸ್ಯ ದನಿ ಮಾಯವಾಗಿತ್ತು.

"ನಿಮ್ಮ ಪ್ರಯತ್ನ, ನಿಮ್ಮ ತ್ಯಾಗ ಸಫಲವಾಗಲಿಲ್ಲವೆಂದು ಬೇಸರಪಟ್ಟು ಕೊಂಡರೆ ನನ್ನನ್ನು ಕ್ಷಮಿಸಿರಿ. ಲಾಲಾನಿಗಾಗಿ ಅಷ್ಟೆಲ್ಲ ಮಾಡುವ ಮನಸ್ಸು ಮಾಡಿದಿರಿ. ಮರ್ಯಾದೆಯ ಕೆಲಸಬಿಟ್ಟರಿ. ಸುಳ್ಳು ಅಪವಾದ ಹೊರಿಸಿ ಕೊಂಡಿರಿ. ಆದರೆ ಒಮ್ಮೆಯಾದರೂ ಯಾರ ಸಂಬಂಧದಲ್ಲಿ ಇಷ್ಟೆಲ್ಲ ಮಾಡು ತ್ತಿದ್ದಿರೋ ಅವಳಿಗೂ ಹೃದಯವಿದೆ, ಆಶೆ ಆಕಾಂಕ್ಷೆಯಿದೆ, ತನಗೆ ಬೇಕಾದುದನ್ನು ಆರಿಸಿಕೊಳ್ಳುವ ಒಳಿತು ಕೆಡಕಿನ ಭಾವನೆಯಿದೆ ಎನ್ನುವ ವಿಚಾರಬರಲಿಲ್ಲ."

"ಆ ದಿನ ರೋಸಿ 'ನನ್ನಸುತ್ತೇಕೆ ಗಂಟುಬೀಳುತ್ತೀರಿ' ಎಂದುಬಿಟ್ಟರಿ. ಅಂಥ ಯಾವ ಅಪರಾಧ ನನ್ನದಾಗಿತ್ತು, ರಮೇಶ್? ಶ್ರೀಮಂತಳಾಗಿ

ಹುಟ್ಟಿದುದು ನನ್ನ ತಪ್ಪೆ? ಅಷ್ಟಕ್ಕಾಗಿ ಇಷ್ಟು ದ್ವೇಷ, ಇಷ್ಟು ತಿರಸ್ಕಾರ ತೋರಿಸಬೇಕಾಗಿತ್ತೆ? ಲಾಲಾನ ವಿಷಯದಲ್ಲಿ ನಿಮ್ಮ ಅಮೂಲ್ಯ ಕರ್ತವ್ಯ ಪಾಲನೆ ಮಾಡುವಾಗ ಅದರಲ್ಲಿ ಹೃದಯವಿದ್ದ ಕಿರಣ ಅನ್ನುವ ಒಬ್ಬ ಮನುಷ್ಯಳ ಸಂಬಂಧವೂ ಇದೆ ಅನ್ನುವ ವಿಚಾರ ಬರಲಿಲ್ಲ....ಲಾಲಾನ ಸ್ನೇಹವನ್ನೇಕೆ ಅಲ್ಲ ಗಳೆಯುತ್ತಿದ್ದೇನೆ ಎಂದು ಆ ದಿನ ಕೇಳಿದರಲ್ಲ....ಈವತ್ತು ಅದಕ್ಕೆ ಉತ್ತರ ವೀಯುತ್ತೇನೆ. ಲಾಲಾಗೆ ಸ್ನೇಹ ಬೇಕಾಗಿರಲಿಲ್ಲ. ಅವನಿಗೆ ಬೇಕಾದುದನ್ನು ಕೊಡಲು ನನ್ನಿಂದ ಶಕ್ಯವಿಲ್ಲವೆಂಬುದನ್ನು ಬಹಳ ಹಿಂದೆಯೇ ಕಂಡು ಕೊಂಡಿದ್ದೆ....ಅದು ನನ್ನ ತಪ್ಪೆ? ಅಷ್ಟಕ್ಕಾಗಿ ನನ್ನನ್ನು ಇಷ್ಟು ತಿರಸ್ಕರಿಸಿ ಬಿಟ್ಟರಿ."

ಕಿರಣ ಮುಂದೆ ಮಾತಾಡಲಾಗದೆ ರಮೇಶನ ಕೈಯಿಂದ ತನ್ನ ಮೋರೆ ಮುಚ್ಚಿಕೊಂಡುಬಿಟ್ಟಳು. ತನ್ನ ಕೈ ಒದ್ದೆಯಾಗುತ್ತಿರುವದು ರಮೇಶನಿಗೆ ತಿಳಿಯುತ್ತಿದ್ದಿತು. ಆದರೆ ಅವನಿಗೂ ಮಾತು ಬಾರದಾಗಿತ್ತು. ಸ್ವಲ್ಪ ತಡೆದು ಕಿರಣಳೇ ಮುಂದುವರಿಸಿದಳು,

"ಕರ್ತವ್ಯ ಮನುಷ್ಯನ ಹೃದಯವನ್ನೇ ಕೊಲ್ಲುವದು ಎಂದು ಕೊಂಡಿರಲಿಲ್ಲ. ಎಲ್ಲರಬಗ್ಗಾಗಿ ನಿಮ್ಮ ಕರ್ತವ್ಯವಿರುವಂತೆ ನಿಮಗಾಗಿಯೂ ನಿಮ್ಮ ಕರ್ತವ್ಯವಿದೆ ಎಂದು ಸಹ ವಿಚಾರಿಸಲಿಲ್ಲ. ನನಗೇ ಅರಿಯದ ಮುನ್ನ ನನ್ನ ಹೃದಯವನ್ನು ಅರಿತುಕೊಂಡಿದ್ದೀರಿ. ಹೋಗಲಿ. ನಿಮ್ಮ ಜೀವನದಲ್ಲಿ ಸಹಭಾಗಿನಿಯಾಗುವ ತಪಸ್ಸನ್ನು ನಾನು ಮಾಡಿಲ್ಲವೆಂದೆನಿಸಿದ್ದರೆ ನಿಮ್ಮ ಸ್ನೇಹ ಕ್ಕಾದರೂ ಯೋಗ್ಯಳಾಗಿರಲಿಲ್ಲವೆ? ಆ ನಿರ್ಲಿಪ್ತತೆ, ಆ ತಿರಸ್ಕಾರಕ್ಕೆ ನನ್ನನ್ನೇಕೆ ಗುರಿಮಾಡಿದಿರಿ? ನಿಮ್ಮ ಸಹಚರಿ ಎಂದಲ್ಲದಿದ್ದರೆ ನಿಮ್ಮ ಸ್ನೇಹಿತೆ ಎಂದಾದರೂ ಕಾಣಬಹುದಲ್ಲ?"

ಕಿರಣಳ ದನಿಯಲ್ಲಿಯ ಆ ಮಾರ್ದವತೆ ತನ್ನ ಹೃದಯವನ್ನೇ ಹಿಂಡು ತ್ತಿರುವಂತೆನಿಸುತ್ತಿತ್ತು ರಮೇಶನಿಗೆ. ಕಿರಣಳ ಕೈ ಎಳೆದುಕೊಂಡು ತನ್ನ ತುಟಿ ಗೊತ್ತಿಕೊಂಡನು.

"ನನ್ನ ಕಿರಣ"

ಎಂದು ನುಡಿದಿದ್ದ ಅಸ್ಪಷ್ಟ ಶಬ್ದಗಳೂ ಕಿರಣಳಿಗೆ ಕೇಳಿಸದಿರಲಿಲ್ಲ.

ನಾಚಿಕೆಯಿಂದ ರಕ್ತಚಿಮ್ಮುವಷ್ಟು ಕೆಂಪಾಗಿದ್ದ ತನ್ನ ಗಲ್ಲವನ್ನು ಕಿರುನಗೆಯಿಂದ ಇನ್ನಷ್ಟು ಅರಳಿಸುತ್ತ ನುಡಿದಳು,

"ತೋರಿಕೆಗಾಗಿ ಮತ್ತೆ ದೊಡ್ಡ ಸನ್ಯಾಸಿಯ ಹಾಗೆ ಮಾಡಿಬಿಟ್ಟಿರಲ್ಲ. ಈ ಮೋಸ ಯಾಕೆ ಬೇಕಾಗಿತ್ತು?"

"ನನ್ನನ್ನು ಕೂಡ್ರಗೊಡು, ಕಿರಣ"

ಎನ್ನುತ್ತ ಕಿರಣ ತಡೆಯುತ್ತಿದ್ದರೂ ಕೇಳದೆ ರಮೇಶ ಅರ್ಧ ಎದ್ದು ತಲೆ ದಿಂಬಿಗೆ ಒರಗಿಕೊಂಡು ಹೇಳಿದನು,

"ನನಗೆ ಗೊತ್ತು. ನನ್ನ ವಿಷಯವಾಗಿ ಯಾರೂ ಹೀಗೆಯೇ ಭಾವಿಸಬಹುದಾಗಿತ್ತು. ನನ್ನ ನಡತೆ ತಿರಸ್ಕಾರವಾಗಿ ನಿನಗೂ ಕಂಡಿದ್ದರೆ ಆಶ್ಚರ್ಯವೇನಲ್ಲ. ಆದರೆ ಮೊದಲಿನಿಂದಲೂ ನಾನೇನು ಮಾಡುತ್ತಿದ್ದೇನೆ ಎಂದು ಪೂರ್ಣ ಅರಿತುಕೊಂಡೇ ಮಾಡಿದ್ದೇನೆ. ನಿನ್ನ ಭಾವನೆಗಳನ್ನು ಕುರಿತು ವಿಚಾರಮಾಡಲಿಲ್ಲ ಎಂದೆಯಲ್ಲ. ನನ್ನ ಸಹಚರಿಯಾಗುವದರ ಪೂರ್ಣ ಕಲ್ಪನೆ ಮಾಡಿದ್ದೀಯೇನು? ಮೂವತ್ತೈದು ರೂಪಾಯಿ ಪೆನ್ಶನ್ನಿನ ಹಳ್ಳಿಯ ಕರಣಿಕನ ಮಗ. ಇರಲು ಒಂದು ಮುರುಕು ಮನೆ. ಸಂಬಂಧಿತರೆಂದರೆ ಹಳ್ಳಿಯಲ್ಲಿ ಹೊಲ ಮಾಡಿಕೊಂಡು, ಸಾಲೆಯಲ್ಲಿ ಮಾಸ್ತರಾಗಿದ್ದುಕೊಂಡು, ಇಲ್ಲವೆ ಕಚೇರಿಯಲ್ಲಿ ಲೆಕ್ಕ ಬರೆಯುವವರಾಗಿ ಜೀವಿಸುತ್ತಿದ್ದವರು. ಅಕ್ಕ ಪೋರ್ಟ್ ಟ್ರಸ್ಟ್ ಟ್ಯಾಪಿಸ್ಟ್ ಒಬ್ಬನನ್ನು ಲಗ್ನವಾಗಿದ್ದಾರೆ. ನಿನ್ನನ್ನು ಲಗ್ನವಾಗುವವನು ಮುನ್ನೂರೈವತ್ತು ರೂಪಾಯಿ ಮೇಲೆ ಯಾವದೋ ಮಿಲ್ಲಿನಲ್ಲಿ ಅಸಿಸ್ಟಂಟ್‌ನಾಗಿದ್ದಾನೆ....ಕಲ್ಪಿಸಿ ನೋಡು ಕಿರಣ. ನೀನೆನ್ನಬಹುದು. ಇದೆಲ್ಲದರಿಂದ ನಿನಗೇನಾಗಬೇಕಾಗಿದೆ. ಸ್ವಂತದ ಲಕ್ಷಗಟ್ಟಲೆ ಹಣವಿದೆ. ನಿನ್ನಣ್ಣ ಬೇಕಾದರೆ ಒಂದು ಮಿಲ್ಲಿನ ಒಡೆತನವನ್ನೇ ನನಗೊಪ್ಪಿಸಬಹುದು. ನಾನು ಮುಂಬಯಿಯಲ್ಲಿಯೇ ಇರಬಹುದು....ಇದರಲ್ಲಿ ಯಾವ ಸಂಬಂಧ ಸಂಸ್ಕಾರಗಳೂ ತಲೆಹಾಕಬೇಕಾಗಿಲ್ಲ....ಎಂದು."

ಅದೆಲ್ಲ ಸುಳ್ಳು ಕಿರಣ. ಮನುಷ್ಯನ ಜೀವನ ಪೂರ್ಣವಾಗಿ ಆತನು ಬೆಳೆದಿದ್ದ ವಾತಾವರಣದಿಂದ ರೂಪಗೊಂಡಿರುತ್ತದೆ. ನಾನು ಮುಂಬಯಿಯಲ್ಲಿದ್ದುಕೊಂಡು ಏನೆಲ್ಲ ಆಗಬಹುದು. ಆದರೆ ಸಂಕಪಾಲ ಊರಿನ ರಿಟ್ಯಾರ್ಡ್ ಗುಮಾಸ್ತೆಯ ಮಗನಾಗಿದ್ದುದು ತಪ್ಪುವದಿಲ್ಲ. ಹಾಗೆ ತಪ್ಪುವದು

ನನಗೆ ಬೇಕಾಗಿಯೂ ಇಲ್ಲ. ನೀನು ಲಗ್ನವಾಗುವದು ಬಿ.ಎ. ಪಾಸಾದ, ನಾಲ್ಕು ಲೇಖಕರು, ಕಲಾಗಾರರನ್ನು ಓದಿ ತಿಳಿದುಕೊಂಡಿದ್ದ, ಯಾವಾಗಲೂ ನಗುತ್ತ ನಗಿಸುತ್ತಿದ್ದ, ವ್ಯವಹಾರ ತಜ್ಞ ರಮೇಶನನ್ನು ಮಾತ್ರವಲ್ಲ. ಇಷ್ಟೆಲ್ಲ ಆಗುವದಕ್ಕೆ ಸಹಾಯವಾಗಿದ್ದ ನನ್ನ ಮನೆ, ಹಳ್ಳಿ, ಅಪ್ಪ, ತಂಗಿ, ತಮ್ಮ ಇವರೆಲ್ಲರ ೨೦ ವರ್ಷದ ಸಹವಾಸದಿಂದ ನಿರ್ಮಿತವಾಗಿದ್ದ ಇನ್ನೊಂದು ವ್ಯಕ್ತಿತ್ವ ವನ್ನೂ ಹೌದು........

ನೀನು ಕೇಳಬಹುದು ಈ ಮಧ್ಯೆ ನಿನ್ನ ಹೃದಯದ ಗತಿಯೇನು ಎಂದು. ನನಗೂ ಹೃದಯವಿಲ್ಲವೆ ಎಂದು. ಈ ಶಬ್ದ ಬಹಳ ಭಿನ್ನ ಅರ್ಥವುಳ್ಳದ್ದು ಕಿರಣ....ಪ್ರೇಮ ಅನ್ನುವದು ನಮ್ಮನ್ನು ನಾವು ಮೋಸಗೊಳಿಸಿಕೊಳ್ಳಲು ಹುಟ್ಟಿಸಿಕೊಂಡ ಭಾವನೆ. ಅದು ಮತ್ತೇನಾದರೂ ಆಗಬಹುದು. ಆದರೆ ಕುರುಡು ಮಾತ್ರ ಆಗುವದಿಲ್ಲ. ಸಾಂಸ್ಕೃತಿಕ, ವಿಚಾರಾತ್ಮಕ, ಭಾವನಾತ್ಮಕ ಒಮ್ಮೇಳವಾಗಿ ವ್ಯಕ್ತಿ–ವ್ಯಕ್ತಿ ಕೂಡಿದಾಗ ಎಲ್ಲೆಡೆಯಲ್ಲಿಯೂ ಪ್ರೇಮ ಹುಟ್ಟುತ್ತದೆ. ಈ ತತ್ವದ ಮೇಲಿಂದಲೇ ನೀನು ಲಾಲಾನೊಡನೆ ಸುಖವಾಗಿರ ಬಹುದು ಎಂದುಕೊಂಡಿದ್ದೆ. ಅವನ ವಿಚಾರಕೋನ ಬೇರೆ ಅನ್ನುವದು ನನಗೂ ಗೊತ್ತು.

ಆದರೆ....

ಜಗತ್ತಿನಲ್ಲಿ ಪೂರ್ಣವಾದದ್ದು ಯಾವದೂ ಇರುವದಿಲ್ಲವಲ್ಲ.

ಒಬ್ಬರೊಬ್ಬರ ಭಾವನೆಗಳು ಇನ್ನೊಬ್ಬರಿಗೆ ಅರ್ಥವಾಗಿ ಇಬ್ಬರಲ್ಲಿಯೂ ಕೆಲವೊಂದು ಸಾಂಸ್ಕೃತಿಕ ಸಮಾನತೆಯಿದ್ದರೆ ಪ್ರೇಮ ಸಂಸಾರಕ್ಕೆ ಮತ್ತೇನೂ ಬೇಕಾಗಿಲ್ಲ. ನಿಮ್ಮಿಬ್ಬರಲ್ಲಿಯೂ ಪ್ರೇಮವಿರದಿದ್ದರೂ ಅದು ಹುಟ್ಟಲು ಅವಕಾಶವಿರುವಂತೆ ಸಾಧನಗಳಿದ್ದವು.

ಪ್ರೇಮ ಅನ್ನುವದು ಮೂಲವಸ್ತುವಲ್ಲ ಕಿರಣ. ಅದು ಯಾವಾಗಲೂ ಕೆಲವೊಂದು ಸಂಗತಿ, ಘಟನೆಗಳ ಪರಿಣಾಮ. ನಮ್ಮಿಬ್ಬರಲ್ಲಿಯೂ ವಿಚಾರ, ಅಭಿರುಚಿಗಳ ಗತಿ ಒಂದೇ ಆಗಿರಬಹುದು. ಆದರೆ ಇಬ್ಬರಲ್ಲಿಯೂ ಭಿನ್ನ ಸಂಸ್ಕೃತಿಯ ದೊಡ್ಡ ಗೋಡೆ ನಿಂತಿದೆ ಎಂದು ಅರಿತಿದ್ದೆ.

ನನ್ನ ನಡತೆಯನ್ನು ತಿರಸ್ಕಾರ, ದ್ವೇಷ ಎಂದು ಬಿಟ್ಟೆಯಲ್ಲ. ಆ ದಿನ

ಗಳಲ್ಲಿ ನಿನ್ನ ವಿಷಯದ ನನ್ನ ಭಾವನೆಗಳನ್ನು ಹತ್ತಿಕ್ಕಿಕೊಂಡು ನಿನ್ನೊಡನೆ ನಿರ್ಮಲ ಸ್ನೇಹದಿಂದಿರುವದು ನನಗೆಷ್ಟು ಕಷ್ಟಸಾಧ್ಯವಾಗಿತ್ತೆಂಬುದನ್ನು ನೀನು ಕಲ್ಪಿಸಲಾರೆ."

ಬಹಳ ಮಾತಾಡಿದುದಕ್ಕೆ ರಮೇಶನಿಗೆ ಉಬ್ಬಸ ಬಂದಿತ್ತು. ಅವನ ಕೈಯನ್ನು ತನ್ನ ಗಲ್ಲಕ್ಕೊತ್ತಿಕೊಳ್ಳುತ್ತ ನೊಂದ ದನಿಯಲ್ಲಿ ಕಿರಣ ಹೇಳಿದಳು,

"ನೀವಿನ್ನೂ ಬಹಳ ಅಶಕ್ತರಾಗಿದ್ದೀರಿ. ಇನ್ನು ಮಾತಾಡಬೇಡಿರಿ."

"ಸ್ನೇಹ ಅನ್ನುವದಾದರೂ ಎಷ್ಟು ವಿಚಿತ್ರ ನೋಡು, ಕಿರಣ. ಬರೇ ವ್ಯಕ್ತಿ ಸ್ನೇಹವಾದರೆ ಯಾವ ಇಬ್ಬರಲ್ಲಿಯೂ ಉಂಟಾಗಬಹುದು. ಅದಕ್ಕೆ ಬಡವ ಶ್ರೀಮಂತ, ಕರಿಯ ಬಿಳಿಯ, ಹಿರಿಯ ಕಿರಿಯ ಯಾವ ಅಂತರಗಳೂ ಅಡ್ಡಿ ಬರುವದಿಲ್ಲ. ಆದರೆ ಜೀವನದಲ್ಲಿ ಸಹಚರಿಯಾಗಬೇಕೆಂದ ಕೂಡಲೆ ಇವೆಲ್ಲ ಸುತ್ತಿಂದ ಬಂದು ನಿಲ್ಲುತ್ತವೆ. ಇಬ್ಬರು ಸ್ನೇಹಿತರು ಒಬ್ಬರೊಬ್ಬರಿಂದ ಸ್ನೇಹವನ್ನು ಮಾತ್ರ ಬೇಡುತ್ತಾರೆ. ಪತಿಪತ್ನಿಯರಾದರೆ ಒಬ್ಬರಿಗೊಬ್ಬರು ತಮ್ಮ ಸರ್ವಸ್ವವನ್ನೂ ನೀಡಬೇಕಾಗುತ್ತದೆ. ನೀನು ತಪ್ಪು ಮಾಡಿದೆ ಕಿರಣ."

"ಹುಂ, ಒಪ್ಪಿದೆ. ನಾವೂ ಮಧ್ಯೆ ಒಂದು ದಪ್ಪ ಗೋಡೆ ಹಾಕಿಕೊಂಡು ಇಬ್ಬರ ನಡುವೆ ಒಂದು ಟೆಲಿಫೋನ್ ಇಟ್ಟುಕೊಳ್ಳೋಣ. ಬೇಸರವಾದಾಗ ಫೋನಿನಲ್ಲಿ ಮಾತ್ರ ಮಾತಾಡುವದು. ವಾರಕ್ಕೊಮ್ಮೆ ಸಿನೆಮಾ, ಸಂಜೆಗೊಮ್ಮೆ ಬ್ಯಾಡ್‌ಮಿಂಟನ್, ರಾತ್ರಿಗೊಮ್ಮೆ ಗುಜಗೋಷ್ಠಿ ಬಿಟ್ಟರೆ ನೀವು ನಿಮ್ಮ ರೂಮಿನಲ್ಲಿ ನಾನು ನನ್ನ ಗುಹೆಯಲ್ಲಿ. ಬರೇ ಷೇಕ್ಸ್‌ಪಿಯರ್, ಷಾ, ಲೆನಿನ್, ಕೆಪಿಟಾಲಿಸಂ, ಎಥಿಕ್ಸ್ ಮಾತ್ರ ಗೋಡೆಯ ಆಚೆ ಈಚೆ ಓಡಾಡುತ್ತಿರಬೇಕು"

ಮಾತಾಡುತ್ತ ಕಿರಣ ಗಹಗಹಿಸಿ ನಕ್ಕುಬಿಟ್ಟಳು.

ಆದರೆ ರಮೇಶನಿಗೆ ನಗೆ ಬರಲಿಲ್ಲ.

"ನನ್ನನ್ನು ತೀರ ನಾಚಿಕೆಗೇಡಿ ಎಂದುಕೊಳ್ಳುತ್ತಿದ್ದೀರೇನೋ ಅಲ್ಲವೆ?"

ಕಿರಣ ರಮೇಶನ ಗಂಭೀರತೆಯನ್ನು ನೋಡಿ ಕೇಳಿದಳು.

"ಆದರೆ ನಾನು ಹೇಳಿದ್ದನ್ನು ನೀನಿನ್ನೂ ವಿಚಾರ ಮಾಡಬೇಕು, ಕಿರಣ. ನನ್ನ ಜೀವನದ ಹಿನ್ನೆಲೆಯನ್ನು ಒಪ್ಪಿಕೊಂಡು ನನ್ನ ಜೀವನದಲ್ಲಿ ಒಂದಾಗಿ ಬಾಳುವಲ್ಲಿ ನೀನು ಎಷ್ಟರಮಟ್ಟಿಗೆ ಶಕ್ಯಳಾಗುವಿಯೋ ನಾನು ಹೇಳಲಾರೆ. ನಾಳೆ ನನ್ನ ತಂದೆ ಮೊಳಕಾಲುದ್ದದ ಪಂಚೆ, ಬಗಲಂಗಿಯಲ್ಲಿ ಮುಂಬಯಿಗೆ